॥ ಶ್ರೀಹರಿಃ ॥

# ಶ್ರೀಮದ್ಭಾಗವತದ ವಿಷಯಾನುಕ್ರಮಣಿಕೆ

## ದ್ವಿತೀಯ ಖಂಡ

ಅಧ್ಯಾಯ ವಿಷಯ ಪುಟ

### ನವಮ ಸ್ಕಂಧ



ಅಧ್ಯಾಯ ವಿಷಯ ಪುಟ

### ದಶಮ ಸ್ಕಂಧ (ಪೂರ್ವಾರ್ಧ)

## ದಶಮ ಸ್ಕಂಧ (ಉತ್ತರಾರ್ಧ)

## ಏಕಾದಶ ಸ್ಕಂಧ

## ಶ್ರೀ ಶುಕಮಹಾಮುನಿಗಳಿಗೆ ನಮಸ್ಕಾರ

**ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ ದ್ವೈಪಾಯನೋ ವಿರಹಕಾತರ ಆಜುಹಾವ ।**
**ಪುತ್ರೇತಿ ತನ್ಮಯತಯಾ ತರವೋಽಭಿನೇದುಸ್ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ ॥ (೧-೨-೨)**

ಸಮಸ್ತ ಪ್ರಾಣಿಗಳ ಆತ್ಮ ಸ್ವರೂಪರಾದ ಶ್ರೀ ಶುಕಮಹಾಮುನಿಗಳಿಗೆ ನಮಸ್ಕಾರವು. ಸಂಸಾರ ಸಂಬಂಧವನ್ನು ಕೂಡಿಕೊಳ್ಳದೆ ಎಲ್ಲ ಕರ್ಮಗಳಿಂದಲೂ ಬಿಡುಗಡೆಹೊಂದಿ ಕೃತಕೃತ್ಯರಾಗಿದ್ದ, ಜ್ಞಾನ-ವೈರಾಗ್ಯನಿಧಿಗಳಾದ ಈ ಮಹಾತ್ಮರು ಸರ್ವಸಂಗ ಪರಿತ್ಯಾಗಮಾಡಿ ಒಬ್ಬಂಟಿಗರಾಗಿ ಮನೆಯಿಂದ ಹೊಟುಬಿಟ್ಟಾಗ ತಂದೆಯಾದ ವೇದವ್ಯಾಸರು ಪುತ್ರವಿಯೋಗದಿಂದ ತಲ್ಲಣಿಸುತ್ತಾ ಓ ಪುತ್ರಾ ! ಓ ಪುತ್ರಾ ! ಎಂದು ಕೂಗತೊಡಗಿದರು. ಆಗ ಅಲ್ಲಿದ್ದ ವೃಕ್ಷಗಳೇ ತನ್ಮಯತೆಯಿಂದ ಕೂಡಿ ಅವರ ಪರವಾಗಿ 'ಭೋಃ ಎಂದು ಓಗುಟ್ಟವು. ಇಂತಹ ಎಲ್ಲರ ಹೃದಯದಲ್ಲಿ ವಿರಾಜಮಾನರಾಗಿ ಆತ್ಮರೂಪರಾಗಿರುವ ಗುರು ಶ್ರೀ ಶುಕಮಹಾಮುನಿಗಳಿಗೆ ನಾನು ವಂದಿಸುತ್ತೇನೆ.

**ಯಃ ಸ್ವಾನುಭಾವಮಖಿಲಶ್ರುತಿಸಾರಮೇಕಮಧ್ಯಾತ್ಮದೀಪಮತಿತಿತೀರ್ಷತಾಂ ತಮೋಽಂಧಮ್ ।**
**ಸಂಸಾರಿಣಾಂ ಕರುಣಯಾಽಽಹ ಪುರಾಣಗುಹ್ಯಂ ತಂ ವ್ಯಾಸಸೂನುಮುಪಯಾಮಿ ಗುರುಂ ಮುನೀನಾಮ್ ॥ (೧-೨-೩)**

ಈ ಶ್ರೀಮದ್ಭಾಗವತವು ಅತ್ಯಂತ ಗೋಪನೀಯ – ರಹಸ್ಯಾತ್ಮಕ ಪುರಾಣವಾಗಿದೆ. ಇದು ಭಗವತ್ಸ್ವರೂಪದ ಅನುಭವ ಮಾಡಿಸುವಂತಹುದು ಹಾಗೂ ಸಮಸ್ತ ವೇದಗಳ ಸಾರವಾಗಿದೆ. ಸಂಸಾರ ಚಕ್ರದಲ್ಲಿ ಸಿಕ್ಕಿಕೊಂಡು ಘೋರ ಅಜ್ಞಾನಾಂಧಕಾರದಿಂದ ದಾಟಿ ಹೋಗಲು ಬಯಸುವ ಜನರಿಗಾಗಿ ಇದು ಆಧ್ಯಾತ್ಮಿಕ ತತ್ತ್ವಗಳನ್ನು ಪ್ರಕಾಶಿಸುವ ಒಂದು ಅದ್ವಿತೀಯ ದೀಪವಾಗಿದೆ. ನಿಜವಾಗಿ ಅಂತಹವರ ಮೇಲೆ ಕರುಣೆತೋರಿ ದೊಡ್ಡ ದೊಡ್ಡ ಮುನಿಗಳಿಗೂ, ಆಚಾರ್ಯರಾದ ಶ್ರೀಶುಕಮಹರ್ಷಿಗಳು ಇದನ್ನು ವರ್ಣಿಸಿರುವರು. ನಾನು ಅವರಿಗೆ ಶರಣು ಹೊಂದುತ್ತೇನೆ.

**ಸ್ವಸುಖನಿಭೃತಚೇತಾಸ್ತದ್ವ್ಯುದಸ್ತಾನ್ಯಭಾವೋಽಪ್ಯಜಿತರುಚಿತಲೀಲಾಕೃಷ್ಟಸಾರಸ್ತದೀಯಮ್ ।**
**ವ್ಯತನುತ ಕೃಪಯಾ ಯಸ್ತತ್ತ್ವದೀಪಂ ಪುರಾಣಂ ತಮಖಿಲವೃಜಿನಘ್ನಂ ವ್ಯಾಸಸೂನುಂ ನತೋಽಸ್ಮಿ ॥ (೧೨-೧೨-೬೮)**

ಶ್ರೀಶುಕಮಹಾಮುನಿಗಳು ತಮ್ಮ ಆತ್ಮಾನಂದದಲ್ಲೇ ಮುಳುಗಿದ್ದರು. ಈ ಅಖಂಡ ಅದ್ವೈತ ಸ್ಥಿತಿಯಿಂದ ಅವರ ಭೇದ ದೃಷ್ಟಿಯು ಸರ್ವಥಾ ಹೊರಟುಹೋಗಿತ್ತು. ಹೀಗಿದ್ದರೂ ಮುರಳೀಮನೋಹರ ಶ್ಯಾಮಸುಂದರನ ಮಧುರ, ಮಂಗಲಮಯ ಮನೋಹಾರಿಣಿ ಲೀಲೆಗಳು ಅವರ ವೃತ್ತಿಗಳನ್ನು ತಮ್ಮ ಕಡೆಗೆ ಆಕರ್ಷಿಸಿಕೊಂಡಿದ್ದವು. ಅವರು ಜಗತ್ತಿನ ಪ್ರಾಣಿಗಳ ಮೇಲೆ ಕೃಪೆ ಮಾಡಿ ಭಗವತತ್ತ್ವವನ್ನು ಪ್ರಕಾಶಿತಗೊಳಿಸುವ ಈ ಮಹಾಪುರಾಣದ ವಿಸ್ತಾರ ಮಾಡಿದರು. ಅಂತಹ ಸರ್ವಪಾಪಹಾರೀ ವ್ಯಾಸನಂದ ಭಗವಾನ್ ಶ್ರೀಶುಕಮಹಾಮುನಿಗಳ ಚರಣಗಳಲ್ಲಿ ನಾನು ನಮಸ್ಕಾರ ಮಾಡುತ್ತೇನೆ.

॥ ಓಂ ನಮೋ ಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತ ಮಾಹಾತ್ಮ್ಯೆ

(ಶ್ರೀಭಗವಂತನು ಬ್ರಹ್ಮದೇವರಿಗೆ ತನ್ನ ಮುಖಾರವಿಂದದಿಂದಲೇ ಅನುಗ್ರಹಿಸಿದ್ದು)

ಶ್ರೀಮದ್ಭಾಗವತಂ ನಾಮ ಪುರಾಣಂ ಲೋಕವಿಶ್ರುತಮ್ ।
ಶೃಣುಯಾಚ್ಛ್ರದ್ಧಯಾ ಯುಕ್ತೋ ಮಮ ಸಂತೋಷ ಕಾರಣಮ್
॥ ೧ ॥

ಲೋಕವಿಖ್ಯಾತವಾಗಿರುವ ಶ್ರೀಮದ್ಭಾಗವತವೆಂಬ ಪುರಾಣ ರತ್ನವನ್ನು ಶ್ರದ್ಧೆಯಿಂದ ಶ್ರವಣ ಮಾಡಬೇಕು. ಇದು ನನಗೆ ಸಂತೋಷ ವನ್ನುಂಟುಮಾಡುತ್ತದೆ. ॥ ೧ ॥

ನಿತ್ಯಂ ಭಾಗವಂತ ಯಸ್ತು ಪುರಾಣಂ ಪಠತೇ ನರಃ ।
ಪ್ರತ್ಯಕ್ಷರಂ ಭವೇತ್ತಸ್ಯ ಕಪಿಲಾದಾನಜಂ ಫಲಮ್
॥ ೨ ॥

ಪ್ರತಿದಿನವೂ ಶ್ರೀಮದ್ಭಾಗವತವನ್ನು ಪಾರಾಯಣ ಮಾಡುವವನಿಗೆ ಒಂದೊಂದು ಅಕ್ಷರದ ಪಠನಕ್ಕೂ ಒಂದೊಂದು ಕಪಿಲಾಗೋವನ್ನು ದಾನ ಮಾಡಿದ ಪುಣ್ಯ ಫಲ ದೊರೆಯುತ್ತದೆ. ॥ ೨ ॥

ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಮ್ ।
ಪಠತೇ ಶೃಣುಯಾದ್ಯಸ್ತು ಗೋಸಹಸ್ರಫಲಂ ಲಭೇತ್
॥ ೩ ॥

ಪ್ರತಿದಿನವೂ ಶ್ರೀಮದ್ಭಾಗವತದಿಂದ ಅರ್ಧ ಶ್ಲೋಕವನ್ನಾಗಲೀ ಒಂದು ಪಾದವನ್ನಾಗಲೀ ಓದುವವನು ಅಥವಾ ಕೇಳುವವನು ಸಾವಿರ ಗೋವುಗಳನ್ನು ದಾನ ಮಾಡಿದ ಪುಣ್ಯಕ್ಕೆ ಭಾಗಿಯಾಗುವನು. ॥ ೩ ॥

ಯಃ ಪಠೇತ್ಪ್ರಯತೋ ನಿತ್ಯ ಶ್ಲೋಕಂ ಭಾಗವತಂ ಸುತ ।
ಅಷ್ಟಾದಶ ಪುರಾಣಾನಾಂ ಫಲಮಾಪ್ನೋತಿ ಮಾನವಃ
॥ ೪ ॥

ಎಲೈ ಪುತ್ರನೇ ! ಪ್ರತಿದಿನವೂ ಸಂಯಮದಿಂದ ಕೂಡಿ ಶ್ರೀಮದ್ಭಾಗವತವನ್ನು ಯಾವನು ಪಾರಾಯಣ ಮಾಡುತ್ತಾನೆಯೋ ಅವನಿಗೆ ಹದಿನೆಂಟು ಪುರಾಣಗಳನ್ನೂ ಪಾರಾಯಣ ಮಾಡಿದ ಫಲ ಸಿಕ್ಕುವುದು. ॥ ೪ ॥

ನಿತ್ಯಂ ಮಮ ಕಥಾ ಯತ್ರ ತತ್ರ ತಿಷ್ಠಂತಿ ವೈಷ್ಣವಾಃ ।
ಕಲಿಬಾಹ್ಯಾ ನರಾಸ್ತೇ ವೈ ಯೇಽರ್ಚಯಂತಿ ಸದಾ ಮಮ
॥ ೫ ॥

ನಿತ್ಯವೂ ನನ್ನ ಕಥೆಯು ನಡೆಯುವಲ್ಲಿ ಪ್ರಹ್ಲಾದನೇ ಮುಂತಾದ ನನ್ನ ಭಕ್ತ ಪಾರ್ಷದರು ಉಪಸ್ಥಿತರಾಗಿರುತ್ತಾರೆ. ಈ ಭಾಗವತವನ್ನು ಪೂಜೆ ಮಾಡುವ ಮನುಷ್ಯರು ಕಲಿಯ ಅಧಿಕಾರಕ್ಕೆ ಒಳಪಡುವುದಿಲ್ಲ. ॥ ೫ ॥

ವೈಷ್ಣವಾನಾಂ ತು ಶಾಸ್ತ್ರಾಣಿ ಯೇಽರ್ಚಯಂತಿ ಗೃಹೇ ನರಾಃ ।
ಸರ್ವಪಾಪವಿನಿರ್ಮುಕ್ತಾ ಭವಂತಿ ಸುರವಂದಿತಾಃ
॥ ೬ ॥

ಮಹಾ ವಿಷ್ಣುವನ್ನು ಕುರಿತ ಶಾಸ್ತ್ರಗಳನ್ನು ಮನೆಯಲ್ಲಿ ಪೂಜೆ ಮಾಡುವ ಮನುಷ್ಯರು ಸಮಸ್ತ ಪಾಪಗಳಿಂದಲೂ ಬಿಡುಗಡೆಹೊಂದಿ ದೇವತೆಗಳಿಂದಲೂ ವಂದಿತರಾಗುತ್ತಾರೆ. ॥ ೬ ॥

ಯೇಽರ್ಚಯಂತಿ ಗೃಹೇ ನಿತ್ಯಂ ಶಾಸ್ತ್ರಂ ಭಾಗವತಂ ಕಲೌ ।
ಆಸ್ಫೋಟಯಂತಿ ವಲ್ಗಂತಿ ತೇಷಾಂ ಪ್ರೀತೋ ಭವಾಮ್ಯಹಮ್
॥ ೭ ॥

ಕಲಿಯುಗದಲ್ಲಿ ತಮ್ಮ ಮನೆಯಲ್ಲಿ ಶ್ರೀಮದ್ಭಾಗವತ ಶಾಸ್ತ್ರವನ್ನು ಪ್ರತಿನಿತ್ಯವೂ ಪೂಜೆ ಮಾಡುತ್ತಾ ಕಲಿ ಪುರುಷನಿಗೆ ಹೆದರದೇ ಚಪ್ಪಾಳೆತಟ್ಟಿ ಕುಣಿದು ಕುಪ್ಪಳಿಸುವವರ ವಿಷಯದಲ್ಲಿ ನಾನು ಪ್ರಸನ್ನನಾಗಿರುತ್ತೇನೆ. ॥ ೭ ॥

ಯಾವದ್ದಿನಾನಿ ಹೇ ಪುತ್ರ ಶಾಸ್ತ್ರಂ ಭಾಗವತಂ ಗೃಹೇ ।
ತಾವತ್ ಪಿಬಂತಿ ಪಿತರಃ ಕ್ಷೀರಂ ಸರ್ಪಿರ್ಮಧೂದಕಮ್
॥ ೮ ॥

ಪುತ್ರ ! ಮನುಷ್ಯನು ಎಷ್ಟು ದಿನಗಳ ಕಾಲ ತನ್ನ ಗೃಹದಲ್ಲಿ ಶ್ರೀಮದ್ಭಾಗವತ ವನ್ನು ಇಟ್ಟುಕೊಂಡಿರುತ್ತಾನೋ ಅಲ್ಲಿಯವರೆಗೂ ಅವನ ಪಿತೃಗಳು ಹಾಲು, ತುಪ್ಪ ಜೇನು ಮತ್ತು ಸಿಹಿ ನೀರನ್ನು ಕುಡಿಯುತ್ತಿರುವರು॥ ೮ ॥

ಯಚ್ಛಂತಿ ವೈಷ್ಣವೇ ಭಕ್ತ್ಯಾ ಶಾಸ್ತ್ರಂ ಭಾಗವತಂ ಹಿ ಯೇ ।
ಕಲ್ಪಕೋಟಿಸಹಸ್ರಾಣಿ ಮಮ ಲೋಕೇ ವಸಂತಿ ತೇ
॥ ೯ ॥

ವಿಷ್ಣುಭಕ್ತನಿಗೆ ಭಕ್ತಿ ಪೂರ್ವಕವಾಗಿ ಶ್ರೀಮದ್ಭಾಗವತ ವನ್ನು ಸಮರ್ಪಿಸುವ ಸುಕೃತಿಗಳು ಸಾವಿರಾರು ಕೋಟಿ ಕಲ್ಪ ಕಾಲದವರೆಗೆ ವೈಕುಂಠಧಾಮದಲ್ಲಿ ವಾಸ ಮಾಡುವರು. ॥ ೯ ॥

ಯೇಽರ್ಚಯಂತಿ ಸದಾ ಗೇಹೇ ಶಾಸ್ತ್ರಂ ಭಾಗವತಂ ನರಾಃ ।
ಪ್ರೀಣಿತಾಸ್ತೈಶ್ಚ ವಿಬುಧಾ ಯಾವದಾಭೂತಸಂಪ್ಲವಮ್
॥ ೧೦ ॥

ಸದಾ ತಮ್ಮ ಮನೆಯಲ್ಲಿ ಶ್ರೀಮದ್ಭಾಗವತ ಶಾಸ್ತ್ರವನ್ನು ಪೂಜಿಸುವವರು ಕಲ್ಪ ಕಾಲದವರೆಗೆ ಸಮಸ್ತ ದೇವತೆಗಳನ್ನೂ ತೃಪ್ತಿಪಡಿಸಿದಂತೆಯೇ ಸರಿ. ॥ ೧೦ ॥ ಮನೆಯಲ್ಲಿ ನೂರಾರು ಸಾವಿರಾರು ಇತರ ಶಾಸ್ತ್ರ ಸಂಗ್ರಹವನ್ನು ಇಟ್ಟುಕೊಂಡು ಏನು ಫಲ ? ಶ್ರೀಮದ್ಭಾಗವತದ ಒಂದು ಶ್ಲೋಕದ ಅರ್ಧ ಭಾಗವನ್ನಾಗಲೀ

ಶ್ಲೋಕಾರ್ಧಂ ಶ್ಲೋಕಪಾದಂ ವಾ ವರಂ ಭಾಗವತಂ ಗೃಹೇ ।
ಶತಶೋಽಥ ಸಹಸ್ರೈಶ್ಚ ಕಿಮನ್ಯೈಃ ಶಾಸ್ತ್ರಸಂಗ್ರಹೈಃ ॥ ೧೧ ॥

ನ ಯಸ್ಯ ತಿಷ್ಠತೇ ಶಾಸ್ತ್ರಂ ಗೃಹೇ ಭಾಗವತಂ ಕಲೌ ।
ನ ತಸ್ಯ ಪುನರಾವೃತ್ತಿಃ ಯಾಮ್ಯಪಾಶಾತ್ಕದಾಚನ ॥ ೧೨ ॥

ಕಥಂ ಸ ವೈಷ್ಣವೋ ಜ್ಞೇಯಃ ಶಾಸ್ತ್ರಂ ಭಾಗವತಂ ಕಲೌ ।
ಗೃಹೇ ನ ತಿಷ್ಠತೇ ಯಸ್ಯ ಶ್ವಪಚಾದಧಿಕೋ ಹಿ ಸಃ ॥ ೧೩ ॥

ಸರ್ವಸ್ವೇನಾಪಿ ಲೋಕೇಶ ಕರ್ತವ್ಯಃ ಶಾಸ್ತ್ರಸಂಗ್ರಹಃ ।
ವೈಷ್ಣವಸ್ತು ಸದಾ ಭಕ್ತ್ಯಾ ತುಷ್ಟ್ಯರ್ಥಂ ಮಮ ಪುತ್ರಕ ॥ ೧೪ ॥

ಯತ್ರ ಯತ್ರ ಭವೇತ್ ಪುಣ್ಯಂ ಶಾಸ್ತ್ರಂ ಭಾಗವತಂ ಕಲೌ ।
ತತ್ರ ತತ್ರ ಸದೈವಾಹಂ ಭವಾಮಿ ತ್ರಿದಶೈಃ ಸಹ ॥ ೧೫ ॥

ತತ್ರ ಸರ್ವಾಣಿ ತೀರ್ಥಾಣಿ ನದೀನದಸರಾಂಸಿ ಚ ।
ಯಜ್ಞಾಃ ಸಪ್ತಪುರೀ ನಿತ್ಯಂ ಪುಣ್ಯಾಃ ಸರ್ವೇ ಶಿಲೋಚ್ಚಯಾಃ ॥ ೧೬ ॥

ಶ್ರೋತವ್ಯಂ ಮಮ ಶಾಸ್ತ್ರಂ ಹಿ ಯಶೋಧರ್ಮಜಯಾರ್ಥಿನಾ ।
ಪಾಪಕ್ಷಯಾರ್ಥ ಲೋಕೇಶ ಮೋಕ್ಷಾರ್ಥಂ ಧರ್ಮಬುದ್ಧಿನಾ ॥ ೧೭ ॥

ಶ್ರೀಮದ್ಭಾಗವತಂ ಪುಣ್ಯಮಾಯುರಾರೋಗ್ಯವರ್ಧನಮ್ ।
ಪಠನಾತ್ ಶ್ರವಣಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ॥ ೧೮ ॥

ನ ಶೃಣ್ವಂತಿ ನ ಹೃಷ್ಯಂತಿ ಶ್ರೀಮದ್ಭಾಗವತಂ ಪರಮ್ ।
ಸತ್ಯಂ ಸತ್ಯಂ ಹಿ ಲೋಕೇಶ ತೇಷಾಂ ಸ್ವಾಮೀ ಸದಾ ಯಮಃ ॥ ೧೯ ॥

ನ ಗಚ್ಛತಿ ಯದಾ ಮರ್ತ್ಯಃ ಶ್ರೋತುಂ ಭಾಗವತಂ ಸುತ ।
ಏಕಾದಶ್ಯಾಂ ವಿಶೇಷೇಣ ನಾಸ್ತಿ ಪಾಪರತಸ್ತತಃ ॥ ೨೦ ॥

ಶ್ಲೋಕಂ ಭಾಗವತಂ ಚಾಪಿ ಶ್ಲೋಕಾರ್ಧಂ ಪಾದಮೇವ ವಾ ।
ಲಿಖಿತಂ ತಿಷ್ಠತೇ ಯಸ್ಯ ಗೃಹೇ ತಸ್ಯ ವಸಾಮ್ಯಹಮ್ ॥ ೨೧ ॥

ಸರ್ವಾಶ್ರಮಾಭಿಗಮನಂ ಸರ್ವತೀರ್ಥಾವಗಾಹನಮ್ ।
ನ ತಥಾ ಪಾವನಂ ನೃಣಾಂ ಶ್ರೀಮದ್ಭಾಗವತಂ ಯಥಾ ॥ ೨೨ ॥

ಅಥವಾ ಒಂದು ಪಾದವನ್ನಾಗಲೀ ಇಟ್ಟುಕೊಂಡರೂ ಅದಕ್ಕಿಂತಲೂ ಉತ್ತಮವೇ. ॥ ೧೧ ॥

ಕಲಿಯುಗದಲ್ಲಿ ಯಾವ ಮನುಷ್ಯನ ಮನೆಯಲ್ಲಿ ಭಾಗವತ ಶಾಸ್ತ್ರ ಇರುವುದಿಲ್ಲವೋ ಅವನು ಯಮನ ಪಾಶದಿಂದ ಬಿಡುಗಡೆಯಾಗುವುದಿಲ್ಲ. ॥ ೧೨ ॥ ಯಾವನ ಗೃಹದಲ್ಲಿ ಶ್ರೀಮದ್ಭಾಗವತ ಶಾಸ್ತ್ರವಿರುವುದಿಲ್ಲವೋ ಅವನನ್ನು ವಿಷ್ಣುಭಕ್ತನೆಂದು ಹೇಗೆ ಕರೆಯಲಾದೀತು ? ಅವನು ಶ್ವಪಚನಿಗಿಂತಲೂ ತುಂಬಾ ಕೆಳಮಟ್ಟದವನೇ. ॥ ೧೩ ॥ ನನ್ನಪ್ರಿಯಪುತ್ರನೇ! ಲೋಕೇಶ್ವರನಾದ ಬ್ರಹ್ಮನೇ ! ಮನುಷ್ಯನು ತನ್ನ ಸರ್ವಸ್ವವನ್ನಾದರೂ ಕೊಟ್ಟು ಭಕ್ತಿಪೂರ್ವಕವಾಗಿ ನನ್ನನ್ನು ಸಂತೋಷ ಪಡಿಸಲು ಈ ವಿಷ್ಣುಪರವಾದ ಶಾಸ್ತ್ರವನ್ನು ಸಂಗ್ರಹಿಸಿಟ್ಟುಕೊಳ್ಳಬೇಕು. ॥ ೧೪ ॥ ಕಲಿಯುಗದಲ್ಲಿ ಈ ಪವಿತ್ರವಾದ ಭಾಗವತ ಶಾಸ್ತ್ರ ಎಲ್ಲೆಲ್ಲಿ ಇರುವುದೋ ಅಲ್ಲೆಲ್ಲಾ ನಾನು ದೇವತೆಗಳ ಸಹಿತನಾಗಿ ಸದಾ ಇರುವೆನು ॥೧೫ ॥ ಈ ಜಾಗದಲ್ಲಿ ನದ-ನದೀ ಮತ್ತು ಸರೋವರ ರೂಪವಾದ ಸಮಸ್ತ ತೀರ್ಥಗಳೂ ಮತ್ತು ಸಮಸ್ತ ಯಜ್ಞಗಳೂ, ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಕಂಚೀ, ಅವಂತಿ, ದ್ವಾರಾವತಿಗಳೆಂಬ ಸಪ್ತ ಮೋಕ್ಷಪ್ರದಪುರಿಗಳೂ ಮತ್ತು ಸಮಸ್ತ ಪವಿತ್ರ ಪರ್ವತಗಳೂ ಸದಾ ವಾಸವಾಗಿರುತ್ತವೆ.॥೧೬ ॥

ಓ ಲೋಕೇಶ್ವರನೇ!ಯಶಸ್ಸು, ಧರ್ಮ ಮತ್ತು ವಿಜಯಗಳನ್ನು ಬಯಸುವವನು ಮತ್ತು ಧರ್ಮಬುದ್ಧಿಯುಳ್ಳವನು ಪಾಪಕ್ಷಯಕ್ಕಾಗಿ ಮತ್ತು ಮೋಕ್ಷಪ್ರಾಪ್ತಿಗಾಗಿ ಈ ನನ್ನ ಶಾಸ್ತ್ರವನ್ನು ಅವಶ್ಯವಾಗಿ ಕೇಳಬೇಕು. ॥ ೧೭ ॥ ಈ ಪವಿತ್ರವಾದ ಪುರಾಣವು ಆಯಸ್ಸು-ಆರೋಗ್ಯಗಳನ್ನು ವೃದ್ಧಿಪಡಿಸುವುದು. ಇದನ್ನು ಪಾರಾಯಣ ಮಾಡಿದರೆ ಅಥವಾ ಶ್ರವಣ ಮಾಡಿದರೂ ಸಾಕು ; ಸಮಸ್ತ ಪಾಪಗಳಿಂದಲೂ ಬಿಡುಗಡೆಯಾಗುತ್ತದೆ. ॥ ೧೮ ॥

ಓ ಲೋಕೇಶನೇ ! ಈ ಪರಮೋತ್ತಮವಾದ ಶ್ರೀಮದ್ಭಾಗವತವನ್ನು ಯಾರು ಕೇಳುವುದಿಲ್ಲವೋ, ಕೇಳಿ ಸಂತೋಷ ಪಡುವುದಿಲ್ಲವೋ - ಅವರು ಸದಾ ಯಮರಾಜನ ವಶದಲ್ಲೇ ಇರುವರು. ನಾನು ಹೇಳುತ್ತಿರುವ ಮಾತು ಸತ್ಯ, ಸತ್ಯವಾದುದು. ॥ ೧೯ ॥ ಪುತ್ರನೇ ! ಯಾವ ಮನುಷ್ಯನು ಎಲ್ಲ ದಿನಗಳಲ್ಲಿಯೂ ಮತ್ತು ವಿಶೇಷವಾಗಿ ಏಕಾದಶೀ ದಿನದಲ್ಲಿ ಶ್ರೀಮದ್ಭಾಗವತವನ್ನು ಶ್ರವಣ ಮಾಡಲು ಹೋಗುವುದಿಲ್ಲವೋ - ಅವನಿಗಿಂತಲೂ ದೊಡ್ಡ ಪಾಪಿಷ್ಠ ಬೇರಾವನೂ ಇಲ್ಲ. ॥ ೨೦ ॥ ಯಾವನ ಮನೆಯಲ್ಲಿ ಶ್ರೀಮದ್ಭಾಗವತದ ಒಂದೇ ಒಂದು ಶ್ಲೋಕವಾಗಲೀ, ಶ್ಲೋಕದ ಅರ್ಧಭಾಗವಾಗಲೀ, ಶ್ಲೋಕದ ಒಂದು ಪಾದವೇ ಆಗಲಿ ಬರೆಯಲ್ಪಟ್ಟಿರುತ್ತದೆಯೋ ಆತನ ಮನೆಯಲ್ಲಿ ನಾನು ಸದಾ ವಾಸ ಮಾಡುತ್ತೇನೆ. ॥ ೨೧ ॥ ಮನುಷ್ಯರಿಗೆ ಎಲ್ಲ ಪುಣ್ಯಾಶ್ರಮಗಳಿಗೆ ಯಾತ್ರೆ ಮಾಡುವುದಾಗಲೀ ಅಥವಾ ಸಮಸ್ತ ತೀರ್ಥಗಳಲ್ಲಿ ಸ್ನಾನ ಮಾಡುವುದಾಗಲೀ ಶ್ರೀಮದ್ಭಾಗವತದಷ್ಟು ಪವಿತ್ರಕರವಲ್ಲ. ॥ ೨೨ ॥

ಯತ್ರ ಯತ್ರ ಚತುರ್ವಕ್ತ್ರ ಶ್ರೀಮದ್ಭಾಗವತಂ ಭವೇತ್ ।
ಗಚ್ಛಾಮಿ ತತ್ರ ತತ್ರಾಹಂ ಗೌರ್ಯಥಾ ಸುತವತ್ಸಲಾ
॥ ೨೩ ॥

ಮತ್ಕಥಾವಾಚಕಂ ನಿತ್ಯಂ ಮತ್ಕಥಾಶ್ರವಣೇ ರತಮ್ ।
ಮತ್ಕಥಾಪ್ರೀತಮನಸಂ ನಾಹಂ ತ್ಯಕ್ಷ್ಯಾಮಿ ತಂ ನರಮ್
॥ ೨೪ ॥

ಶ್ರೀಮದ್ಭಾಗವತಂ ಪುಣ್ಯಂ ದೃಷ್ಟ್ವಾ ನೋತ್ತಿಷ್ಠತೇ ಹಿ ಯಃ ।
ಸಾಂವತ್ಸರಂ ತಸ್ಯ ಪುಣ್ಯಂ ವಿಲಯಂ ಯಾತಿ ಪುತ್ರಕ
॥ ೨೫ ॥

ಶ್ರೀಮದ್ಭಾಗವತಂ ದೃಷ್ಟ್ವಾ ಪ್ರತ್ಯುತ್ಥಾನಾಭಿವಾದನೈಃ ।
ಸಮ್ಮಾನಯೇತ ತಂ ದೃಷ್ಟ್ವಾ ಭವೇತ್ ಪ್ರೀತಿರ್ಮಮಾತುಲಾ
॥ ೨೬ ॥

ದೃಷ್ಟ್ವಾ ಭಾಗವತಂ ದೂರಾತ್ ಪ್ರಕ್ರಮೇತ್ಸಮ್ಮುಖಂ ಹಿ ಯಃ ।
ಪದೇ ಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತ್ಯಸಂಶಯಮ್
॥ ೨೭ ॥

ಉತ್ಥಾಯ ಪ್ರಣಮೇದ್ ಯೋ ವೈ ಶ್ರೀಮದ್ಭಾಗವತಂ ನರಃ ।
ಧನಪುತ್ರಾಂಸ್ತಥಾ ದಾರಾನ್ ಭಕ್ತಿಂ ಚ ಪ್ರದದಾಮ್ಯಹಮ್
॥ ೨೮ ॥

ಮಹಾರಾಜೋಪಚಾರೈಸ್ತು ಶ್ರೀಮದ್ಭಾಗವತಂ ಸುತ ।
ಶೃಣ್ವಂತಿ ಯೇ ನರಾ ಭಕ್ತ್ಯಾ ತೇಷಾಂ ವಶ್ಯೋ ಭವಾಮ್ಯಹಮ್
॥ ೨೯ ॥

ಮಮೋತ್ಸವೇಷು ಸರ್ವೇಷು ಶ್ರೀಮದ್ಭಾಗವತಂ ಪರಮ್ ।
ಶೃಣ್ವಂತಿ ಯೇ ನರಾ ಭಕ್ತ್ಯಾ ಮಮ ಪ್ರೀತ್ಯೈ ಚ ಸುವ್ರತ
॥ ೩೦ ॥

ವಸ್ತ್ರಾಲಂಕರಣೈಃ ಪುಷ್ಪೈಃ ಧೂಪದೀಪೋಪಹಾರಕೈಃ ।
ವಶೀಕೃತೋ ಹ್ಯಹಂ ತೈಶ್ಚ ಸತ್‌ಸ್ತ್ರಿಯಾ ಸತ್ಪತಿರ್ಯಥಾ
॥ ೩೧ ॥

ಚತುರ್ಮುಖನೇ ! ಕರುವಿನಲ್ಲಿ ವಾತ್ಸಲ್ಯವುಳ್ಳ ಹಸುವು ಕರು ಹೋದಲ್ಲಿಗೆಲ್ಲ ಹೋಗುವುದಿಲ್ಲವೇ ? ಹಾಗೆಯೇ ನಾನು ಶ್ರೀಮದ್ಭಾಗವತ ಕಥೆಯು ಎಲ್ಲಿ ನಡೆಯುತ್ತದೆಯೋ ಅಲ್ಲಿಗೆಲ್ಲಾ ಹೋಗುವೆನು. ॥ ೨೩ ॥

ನನ್ನ ಕಥೆಯನ್ನು ಹೇಳುವವನನ್ನು, ಅದನ್ನು ಕೇಳುವುದರಲ್ಲೇ ಸದಾ ನಿರತನಾಗಿರುವವನನ್ನು ಮತ್ತು ನನ್ನ ಕಥೆಯಿಂದ ಮನಸ್ಸಿನಲ್ಲಿ ಸಂತೋಷ ಪಟ್ಟುಕೊಳ್ಳುವವನನ್ನು ನಾನು ಎಂದಿಗೂ ತ್ಯಜಿಸುವುದಿಲ್ಲ. ॥ ೨೪ ॥ ಪ್ರಿಯಪುತ್ರನೇ ಪರಮ ಪುಣ್ಯಕರವಾದ ಶ್ರೀಮದ್ಭಾಗವತವನ್ನು ನೋಡಿದಾಗ ಯಾವನು ಭಕ್ತಿ-ಗೌರವಗಳಿಂದ ತನ್ನ ಆಸನದಿಂದ ಎದ್ದು ನಿಲ್ಲುವುದಿಲ್ಲವೋ-ಅವನು ಒಂದು ವರ್ಷ ಪೂರ್ತಿ ಮಾಡಿದ ಪುಣ್ಯಫಲಗಳನ್ನು ಕಳೆದುಕೊಳ್ಳುವನು॥ ೨೫ ॥

ಶ್ರೀಮದ್ಭಾಗವವನ್ನು ಕಂಡೊಡನೆಯೇ ಎದುರುಗೊಂಡು ಎದ್ದು ನಿಂತು ನಮಸ್ಕಾರಗಳಿಂದ ಅದನ್ನು ಗೌರವಿಸುವವರನ್ನು ಕಂಡರೆ ನನಗೆ ಎಣೆಯಿಲ್ಲದ ಪ್ರಸನ್ನತೆ ಉಂಟಾಗುತ್ತದೆ ॥ ೨೬ ॥ ಶ್ರೀಮದ್ಭಾಗವತವನ್ನು ದೂರ ದಿಂದ ಕಂಡೊಡನೆಯೇ ಯಾವನು ನಗುಮುಖದಿಂದ ಆದರ ಹತ್ತಿರ ಹೋಗುವನೋ – ಅವನಿಡುವ ಪ್ರತಿ ಹೆಜ್ಜೆಗೂ ಅಶ್ವಮೇಧ ಯಜ್ಞ ಮಾಡಿದ ಫಲವು ಲಭಿಸುವುದು. ಇದು ನಿಶ್ಚಿತ ; ಸಂದೇಹವೇ ಬೇಡ. ಎದ್ದು ನಿಂತು ಶ್ರೀಮದ್ಭಾಗವತಕ್ಕೆ ನಮಸ್ಕಾರ ಮಾಡುವ ಮನುಷ್ಯನಿಗೆ ನಾನು ಹಣ-ಕಾಸು, ಮಡದಿ-ಮಕ್ಕಳನ್ನೂ ಮತ್ತು ಭಕ್ತಿಯನ್ನೂ ಅನುಗ್ರಹಿಸುವೆನು. ॥ ೨೭-೨೮ ॥ ಎಲೈ ಪುತ್ರನೇ ! ಯಾವ ಮನುಷ್ಯರು ಮಹಾರಾಜನಿಗೆ ಉಚಿತವಾದ ಉಪಚಾರಗಳೊಡನೆ ಭಕ್ತಿಯಿಂದ ಕೂಡಿ ಶ್ರೀಮದ್ಭಾಗವತವನ್ನು ಕೇಳುತ್ತಾರೋ ಅವರಿಗೆ ನಾನು ವಶನಾಗಿ ಬಿಡುವೆನು. ॥ ೨೯ ॥

ಎಲೈ ಉತ್ತಮವ್ರತಿಯೇ ! ಯಾರು ನನ್ನ ಎಲ್ಲ ಉತ್ಸವಗಳಲ್ಲೂ ನನ್ನ ಪ್ರೀತಿಗೋಸ್ಕರ ವಸ್ತ್ರ ಅಲಂಕಾರ, ಪುಷ್ಪ, ಧೂಪ, ದೀಪ-ಇತ್ಯಾದಿ ಉಪಹಾರಗಳನ್ನು ಸಮರ್ಪಿಸುತ್ತಾ ಪರಮೋತ್ತಮವಾದ ಶ್ರೀಮದ್ಭಾಗವತವನ್ನು ಭಕ್ತಿಪೂರ್ವಕವಾಗಿ ಶ್ರವಣ ಮಾಡುತ್ತಾರೋ, ಅವರು ಸಾಧ್ವಿಯಾದ ಹೆಂಗಸು ತನ್ನ ಸಾಧುವಾದ ಪತಿಯನ್ನು ವಶಪಡಿಸಿಕೊಳ್ಳುವಂತೆ ನನ್ನನ್ನು ವಶಪಡಿಸಿ ಕೊಂಡು ಬಿಡುತ್ತಾರೆ. ॥ ೩೦ – ೩೧ ॥ *

* ಸ್ಕಂದಪುರಾಣ, ವಿಷ್ಣುಖಂಡ, ಮಾರ್ಗಶೀರ್ಷ ಮಾಹಾತ್ಮ್ಯ, ಅ. ೧೬

॥ ಓಂ ನಮೋ ಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ನವಮಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ವೈವಸ್ವತ ಮನುವಿನ ಪುತ್ರ ಸುದ್ಯುಮ್ನರಾಜನ ಕಥೆ

*ರಾಜೋವಾಚ*

ಮನ್ವಂತರಾಣಿ ಸರ್ವಾಣಿ ತ್ವಯೋಕ್ತಾನಿ ಶ್ರುತಾನಿ ಮೇ ।
ವೀರ್ಯಾಣ್ಯನಂತವೀರ್ಯಸ್ಯ ಹರೇಸ್ತತ್ರ ಕೃತಾನಿ ಚ ॥ ೧ ॥

ಯೋಽಸೌ ಸತ್ಯವ್ರತೋ ನಾಮ ರಾಜರ್ಷಿರ್ದ್ರವಿಡೇಶ್ವರಃ ।
ಜ್ಞಾನಂ ಯೋಽತೀತಕಲ್ಪಾಂತೇ ಲೇಭೇ ಪುರುಷಸೇವಯಾ ॥ ೨ ॥

ಸ ವೈ ವಿವಸ್ವತಃ ಪುತ್ರೋ ಮನುರಾಸೀದಿತಿ ಶ್ರುತಮ್ ।
ತ್ವತ್ತಸ್ತಸ್ಯ ಸುತಾಶ್ಚೋಕ್ತಾ ಇಕ್ಷ್ವಾಕುಪ್ರಮುಖಾ ನೃಪಾಃ ॥ ೩ ॥

ತೇಷಾಂ ವಂಶಂ ಪೃಥಗ್ಬ್ರಹ್ಮನ್ವಂಶ್ಯಾನುಚರಿತಾನಿ ಚ ।
ಕೀರ್ತಯಸ್ವ ಮಹಾಭಾಗ ನಿತ್ಯಂ ಶುಶ್ರೂಷತಾಂ ಹಿ ನಃ ॥ ೪ ॥

ಯೇ ಭೂತಾ ಯೇ ಭವಿಷ್ಯಾಶ್ಚ ಭವಂತ್ಯದ್ಯತನಾಶ್ಚ ಯೇ ।
ತೇಷಾಂ ನಃ ಪುಣ್ಯಕೀರ್ತೀನಾಂ ಸರ್ವೇಷಾಂ ವದ ವಿಕ್ರಮಾನ್ ॥ ೫ ॥

*ಸೂತ ಉವಾಚ*

ಏವಂ ಪರೀಕ್ಷಿತಾ ರಾಜ್ಞಾ ಸದಸಿ ಬ್ರಹ್ಮವಾದಿನಾಮ್ ।
ಪೃಷ್ಟಃ ಪ್ರೋವಾಚ ಭಗವಾಞ್ಛುಕಃ ಪರಮಧರ್ಮವಿತ್ ॥ ೬ ॥

*ಶ್ರೀಶುಕ ಉವಾಚ*

ಶ್ರೂಯತಾಂ ಮಾನವೋ ವಂಶಃ ಪ್ರಾಚುರ್ಯೇಣ ಪರಂತಪ ।
ನ ಶಕ್ಯತೇ ವಿಸ್ತರತೋ ವಕ್ತುಂ ವರ್ಷಶತೈರಪಿ ॥ ೭ ॥

ಪರಾವರೇಷಾಂ ಭೂತಾನಾಮಾತ್ಮಾ ಯಃ ಪುರುಷಃ ಪರಃ ।
ಸ ಏವಾಸೀದಿದಂ ವಿಶ್ವಂ ಕಲ್ಪಾಂತೇಽನ್ಯನ್ನ ಕಿಂಚನ ॥ ೮ ॥

ತಸ್ಯ ನಾಭೇಃ ಸಮಭವತ್ಪದ್ಮಕೋಶೋ ಹಿರಣ್ಮಯಃ ।
ತಸ್ಮಿಞ್ಜಜ್ಞೇ ಮಹಾರಾಜ ಸ್ವಯಂಭೂಶ್ಚತುರಾನನಃ ॥ ೯ ॥

**ಪರೀಕ್ಷಿತ ಮಹಾರಾಜನು ಕೇಳಿದನು –** ಪೂಜ್ಯರೇ! ತಾವು ಇದುವರೆಗೆ ವರ್ಣಿಸಿದ ಎಲ್ಲ ಮನ್ವಂತರಗಳ ಮತ್ತು ಅವುಗಳಲ್ಲಿ ನಡೆದ ಅನಂತವೀರ್ಯನಾದ, ಅಪ್ರಮೇಯನಾದ ಶ್ರೀಹರಿಯ ಐಶ್ವರ್ಯಪೂರ್ಣ ಚರಿತ್ರೆಗಳನ್ನು ನಾನು ಶ್ರವಣಿಸಿ ಧನ್ಯನಾಗಿರುವೆನು. ॥ ೧ ॥ ಹಿಂದಿನ ಕಲ್ಪಾಂತ್ಯದಲ್ಲಿ ದ್ರವಿಡದೇಶದ ಅರಸನಾದ ರಾಜರ್ಷಿ ಸತ್ಯವ್ರತನು ಭಗವಂತನ ಸೇವೆಯಿಂದ ಜ್ಞಾನಪಡೆದು, ಅವನೇ ಈ ಮನ್ವಂತರದಲ್ಲಿ ವೈವಸ್ವತ ಮನುವಾದನು ಎಂದು ನೀವು ಹೇಳಿದಿರಿ. ಹಾಗೆಯೇ ಅವನ ಇಕ್ಷ್ವಾಕು ಮೊದಲಾದ ರಾಜಪುತ್ರರ ಪರಿಚಯವನ್ನು ವರ್ಣಿಸಿದಿರಿ. ॥ ೨-೩ ॥ ಬ್ರಾಹ್ಮಣಶ್ರೇಷ್ಠರೇ! ಈಗ ದಯಮಾಡಿ ಅವರ ವಂಶ ಮತ್ತು ವಂಶದಲ್ಲಿ ನಡೆದ ಬೇರೆ-ಬೇರೆ ಚರಿತ್ರೆಗಳನ್ನೂ ತಾವು ವರ್ಣಿಸಿರಿ. ಮಹಾನುಭಾವರೇ! ನಮ್ಮ ಹೃದಯದಲ್ಲಿ ಸದಾಕಾಲವೂ ಕಥೆಯನ್ನು ಕೇಳುವ ಉತ್ಸುಕತೆ ಇದೆ. ॥ ೪ ॥ ವೈವಸ್ವತ ಮನುವಿನ ವಂಶದಲ್ಲಿ ಇದುವರೆಗೆ ಎಷ್ಟುಮಂದಿ ರಾಜರು ಆಗಿ ಹೋದರು? ಈಗ ಯಾವ ರಾಜರು ಆಳುತ್ತಿದ್ದಾರೆ? ಮುಂದೆ ಯಾರು-ಯಾರು ಆಗುವರು? ಆ ಎಲ್ಲ ಪುಣ್ಯಕೀರ್ತಿಗಳಾದ ಪುರುಷರ ಪರಾಕ್ರಮವನ್ನು ವರ್ಣಿಸಿರಿ. ॥ ೫ ॥

**ಸೂತಪುರಾಣಿಕರು ಹೇಳುತ್ತಾರೆ –** ಶೌನಕಾದಿ ಋಷಿಗಳಿರಾ! ಪರೀಕ್ಷಿದ್ರಾಜನು ಬ್ರಹ್ಮವಾದಿಗಳ ಸಭೆಯಲ್ಲಿ ಹೀಗೆ ಪ್ರಶ್ನಿಸಿದಾಗ ಧರ್ಮದ ಪರಮ ಮರ್ಮಜ್ಞರಾದ, ಮಹಾತ್ಮರಾದ ಶ್ರೀಶುಕಮಹಾಮುನಿಗಳು ಇಂತು ಹೇಳತೊಡಗಿದರು. ॥ ೬ ॥

**ಶ್ರೀಶುಕಮುನಿಗಳು ಹೇಳುತ್ತಾರೆ –** ಎಲೈ ಪರೀಕ್ಷಿತನೇ! ಮನುವಂಶದ ವರ್ಣನೆಯನ್ನು ಸಂಕ್ಷೇಪವಾಗಿ ಹೇಳುವೆನು ಕೇಳು. ವಿಸ್ತಾರವಾಗಿ ವರ್ಣಿಸಲು ನೂರಾರು ವರ್ಷಗಳೂ ಸಾಕಾಗಲಾರವು. ॥ ೭ ॥ ಪರಮಪುರುಷ ಪರಮಾತ್ಮನು ಸ್ಥೂಲ- ಸೂಕ್ಷ್ಮ ಪ್ರಾಣಿಗಳೆಲ್ಲರ ಆತ್ಮನಾಗಿರುವನು. ಪ್ರಳಯಕಾಲದಲ್ಲಿ ಕೇವಲ ಅವನೊಬ್ಬನೇ ಇದ್ದನು. ಈ ವಿಶ್ವವು ಹಾಗೂ ಬೇರೆ ಏನೂ ಇರಲಿಲ್ಲ. ॥ ೮ ॥ ಮಹಾರಾಜಾ! ಅಂತಹ ಪರಮಪುರುಷನ ನಾಭಿಯಲ್ಲಿ ಸುವರ್ಣಮಯವಾದ ಕಮಲವೊಂದು ಪ್ರಕಟವಾಯಿತು. ಅದರಲ್ಲೇ ಚತುರ್ಮುಖರಾದ ಬ್ರಹ್ಮದೇವರು ಆವಿರ್ಭವಿಸಿದರು. ॥ ೯ ॥

ಮರೀಚಿರ್ಮನಸಸ್ತಸ್ಯ ಜಜ್ಞೇ ತಸ್ಯಾಪಿ ಕಶ್ಯಪಃ ।
ದಾಕ್ಷಾಯಣ್ಯಾಂ ತತೋಽದಿತ್ಯಾಂ ವಿವಸ್ವಾನಭವತ್ಸುತಃ
॥ ೧೦ ॥

ತತೋ ಮನುಃ ಶ್ರಾದ್ಧದೇವಃ ಸಂಜ್ಞಾಯಾಮಾಸ ಭಾರತ ।
ಶ್ರದ್ಧಾಯಾಂ ಜನಯಾಮಾಸ ದಶ ಪುತ್ರಾನ್ಸ ಆತ್ಮವಾನ್
॥ ೧೧ ॥

ಇಕ್ಷ್ವಾಕುನೃಗಶರ್ಯಾತಿದಿಷ್ಟಧೃಷ್ಟಕರೂಷಕಾನ್ ।
ನರಿಷ್ಯಂತಂ ಪೃಷಧ್ರಂ ಚ ನಭಗಂ ಚ ಕವಿಂ ವಿಭುಃ
॥ ೧೨ ॥

ಅಪ್ರಜಸ್ಯ ಮನೋಃ ಪೂರ್ವಂ ವಸಿಷ್ಠೋ ಭಗವಾನ್ಕಿಲ ।
ಮಿತ್ರಾವರುಣಯೋರಿಷ್ಟಿಂ ಪ್ರಜಾರ್ಥಮಕರೋತ್ಪ್ರಭುಃ
॥ ೧೩ ॥

ತತ್ರ ಶ್ರದ್ಧಾ ಮನೋಃ ಪತ್ನೀ ಹೋತಾರಂ ಸಮಯಾಚತ ।
ದುಹಿತ್ರರ್ಥಮುಪಾಗಮ್ಯ ಪ್ರಣಿಪತ್ಯ ಪಯೋವ್ರತಾ
॥ ೧೪ ॥

ಪ್ರೇಷಿತೋಽಧ್ವರ್ಯುಣಾ ಹೋತಾ ಧ್ಯಾಯಂಸ್ತತ್ಸುಸಮಾಹಿತಃ ।
ಹವಿಷಿ ವ್ಯಚರತ್ತೇನ ವಷಟ್ಕಾರಂ ಗೃಣನ್ ದ್ವಿಜಃ
॥ ೧೫ ॥

ಹೋತುಸ್ತದ್ ವ್ಯಭಿಚಾರೇಣ ಕನ್ಯೇಲಾ ನಾಮ ಸಾಭವತ್ ।
ತಾಂ ವಿಲೋಕ್ಯ ಮನುಃ ಪ್ರಾಹ ನಾತಿಹೃಷ್ಟಮನಾ ಗುರುಮ್
॥ ೧೬ ॥

ಭಗವನ್ ಕಿಮಿದಂ ಜಾತಂ ಕರ್ಮ ವೋ ಬ್ರಹ್ಮವಾದಿನಾಮ್ ।
ವಿಪರ್ಯಯಮಹೋ ಕಷ್ಟಂ ಮೈವಂ ಸ್ಯಾದ್ಬ್ರಹ್ಮವಿಕ್ರಿಯಾ
॥ ೧೭ ॥

ಯೂಯಂ ಮಂತ್ರವಿದೋ ಯುಕ್ತಾಸ್ತಪಸಾ ದಗ್ಧಕಿಲ್ಬಿಷಾಃ ।
ಕುತಃ ಸಂಕಲ್ಪ ವೈಷಮ್ಯಮನೃತಂ ವಿಬುಧೇಷ್ವಿವ
॥ ೧೮ ॥

ತನ್ನಿಶಮ್ಯ ವಚಸ್ತಸ್ಯ ಭಗವಾನ್ ಪ್ರಪಿತಾಮಹಃ ।
ಹೋತುರ್ವ್ಯತಿಕ್ರಮಂ ಜ್ಞಾತ್ವಾ ಬಭಾಷೇ ರವಿನಂದನಮ್
॥ ೧೯ ॥

ಏತತ್ಸಂಕಲ್ಪವೈಷಮ್ಯಂ ಹೋತುಸ್ತೇ ವ್ಯಭಿಚಾರತಃ ।
ತಥಾಪಿ ಸಾಧಯಿಷ್ಯೇ ತೇ ಸುಪ್ರಜಾಸ್ತ್ವಂ ಸ್ವತೇಜಸಾ
॥ ೨೦ ॥

ಬ್ರಹ್ಮದೇವರ ಮನಸ್ಸಿನಿಂದ ಮರೀಚಿ ಮತ್ತು ಮರೀಚಿಯ ಪುತ್ರ ಕಶ್ಯಪರು ಹುಟ್ಟಿದರು. ಅವರ ಧರ್ಮಪತ್ನೀ ದಕ್ಷಕುಮಾರೀ ಅದಿತಿಯಲ್ಲಿ ವಿವಸ್ವಂತನು (ಸೂರ್ಯನು) ಜನ್ಮತಾಳಿದನು. ॥ ೧೦ ॥ ವಿವಸ್ವಂತನ ಪತ್ನಿಯಾದ ಸಂಜ್ಞೆ ಎಂಬುವಳಲ್ಲಿ ಶ್ರಾದ್ಧದೇವ ಮನುವು ಹುಟ್ಟಿದನು. ಪರೀಕ್ಷಿತನೇ! ಆತ್ಮಜ್ಞಾನಿಯಾದ ಶ್ರಾದ್ಧ ದೇವನ ಪತ್ನಿಯಾದ ಶ್ರದ್ಧೆಯಲ್ಲಿ – ಇಕ್ಷ್ವಾಕು, ನೃಗ, ಶರ್ಯಾತಿ, ದಿಷ್ಟ, ಧೃಷ್ಟ, ಕರೂಷ, ನರಿಷ್ಯಂತ, ಪೃಷಧ್ರ, ನಭಗ ಮತ್ತು ಕವಿ ಎಂಬ ಹತ್ತು ಪುತ್ರರು ಉದಿಸಿದರು. ॥ ೧೧-೧೨ ॥

ವೈವಸ್ವತ ಮನುವಿಗೆ ಮೊದಲು ಮಕ್ಕಳಿರಲಿಲ್ಲ, ಆ ಸಮಯದಲ್ಲಿ ಸರ್ವಸಮರ್ಥರಾದ ಪೂಜ್ಯರಾದ ವಸಿಷ್ಠರು ಸಂತಾನಪ್ರಾಪ್ತಿಗಾಗಿ ವೈವಸ್ವತಮನುವಿನಿಂದ ಮೈತ್ರಾವರುಣೇಷ್ಟಿಯನ್ನು ಮಾಡಿಸಿದರು. ॥ ೧೩ ॥ ಯಜ್ಞಾನುಷ್ಠಾನದಲ್ಲಿ ಪಯೋವ್ರತಳಾಗಿದ್ದ (ಕೇವಲ ಹಾಲನ್ನು ಮಾತ್ರ ಕುಡಿಯುತ್ತಿದ್ದ) ವೈವಸ್ವತ ಮನುವಿನ ಧರ್ಮಪತ್ನಿಯಾದ ಶ್ರದ್ಧಾದೇವಿಯು ಹೋತೃವಿನ ಬಳಿಗೆ ಹೋಗಿ ವಿನಯಪೂರ್ವಕವಾಗಿ ನಮಸ್ಕರಿಸಿ, ತನಗೆ ಹೆಣ್ಣುಶಿಶುವು ಹುಟ್ಟುವಂತೆ ಬೇಡಿಕೊಂಡಳು. ॥ ೧೪ ॥ ಆಗ ಅಧ್ವರ್ಯುವಿನ ಪ್ರೇರಣೆಯಂತೆ ಯಜ್ಞಕುಂಡದಲ್ಲಿ ಆಹುತಿಯನ್ನು ಹಾಕಬೇಕಾದ ಸಮಯದಲ್ಲಿ ಶ್ರದ್ಧಾದೇವಿಯ ಪ್ರಾರ್ಥನೆಯನ್ನು ಸ್ಮರಿಸಿ ಹೆಣ್ಣುಶಿಶುವಾಗಬೇಕೆಂದು ಸಂಕಲ್ಪಿಸಿ ವಷಟ್ಕಾರವನ್ನು ಹೇಳುತ್ತಾ ಯಜ್ಞೇಶ್ವರನಲ್ಲಿ ಹವಿಸ್ಸನ್ನು ಹೋಮಮಾಡಿದನು. ॥ ೧೫ ॥ ಹೋತೃವು ಹೀಗೆ ವಿಪರೀತ ಕರ್ಮವಾಚರಿಸಿದಾಗ ಯಜ್ಞದ ಫಲವಾಗಿ ಪುತ್ರನ ಸ್ಥಾನದಲ್ಲಿ ಇಲಾ ಎಂಬ ಹೆಸರಿನ ಕನ್ಯೆಯು ಹುಟ್ಟಿದಳು. ಅದನ್ನು ನೋಡಿ ವೈವಸ್ವತ ಮನುವಿಗೆ ಅಷ್ಟೊಂದು ಸಂತೋಷವಾಗಲಿಲ್ಲ, ಅವನು ತಮ್ಮ ಗುರುಗಳಾದ ವಸಿಷ್ಠರಲ್ಲಿ ಹೇಳಿದನು – ॥ ೧೬ ॥ ಪೂಜ್ಯರೇ! ನೀವಾದರೋ ಬ್ರಹ್ಮವಾದಿಗಳಾಗಿದ್ದೀರಿ. ನಿಮ್ಮ ಕರ್ಮವು ಈ ಪ್ರಕಾರ ವಿಪರೀತ ಫಲ ಕೊಡುವಂತಹುದು ಹೇಗಾಯಿತು ? ಕಷ್ಟ! ಕಷ್ಟ! ಇದು ಬಹಳ ದುಃಖದ ವಿಚಾರವಾಗಿದೆ. ವೈದಿಕ ಕರ್ಮದ ಫಲವಾದರೋ ಹೀಗೆ ವಿಪರೀತ ಎಂದಿಗೂ ಆಗಬಾರದು. ॥ ೧೭ ॥ ನಿಮ್ಮಗಳ ಮಂತ್ರಜ್ಞಾನವಾದರೋ ಪರಿಪೂರ್ಣವಾಗಿದೆ. ಇದಲ್ಲದೆ ತಾವು ಜಿತೇಂದ್ರಿಯರೂ ಆಗಿರುವಿರಿ. ತಪಸ್ಸಿನಿಂದಾಗಿ ನಿಷ್ಪಾಪರೂ ಆಗಿಬಿಟ್ಟಿದ್ದೀರಿ. ದೇವತೆಗಳಲ್ಲಿ ಸುಳ್ಳಿರುವಂತೆ (ದೇವತೆಗಳು ಕೊಟ್ಟ ವರವು ಸುಳ್ಳಾದಂತೆ) ನಿಮ್ಮ ಸಂಕಲ್ಪಕ್ಕೆ ವಿರುದ್ಧವಾದ ಫಲ ಹೇಗಾಯಿತು ? ॥ ೧೮ ॥

ಪರೀಕ್ಷಿತನೇ ! ನಮ್ಮ ಮುತ್ತಾತಂದಿರಾದ ಪೂಜ್ಯರಾದ ವಸಿಷ್ಠರು ರಾಜನ ಮಾತನ್ನು ಕೇಳಿ, ಹೋತೃವು ವಿಪರೀತ ಸಂಕಲ್ಪವನ್ನು ಮಾಡಿದ್ದನು ಎಂದು ತಿಳಿದುಕೊಂಡರು. ಇದರಿಂದ ಅವರು ವೈವಸ್ವತ ಮನುವಿಗೆ ಹೇಳಿದರು – ॥ ೧೯ ॥ ಮಹಾರಾಜನೇ ! ನಿನ್ನ ಹೋತೃವಿನ ವಿಪರೀತ ಸಂಕಲ್ಪದಿಂದಾಗಿ ನಮ್ಮ ಸಂಕಲ್ಪವು ಸರಿಯಾಗಿ ನೆರವೇರಲಿಲ್ಲ, ಹೀಗಿದ್ದರೂ ನನ್ನ ತಪಃಪ್ರಭಾವದಿಂದ ನಾನು ನಿನಗೆ ಶ್ರೇಷ್ಠಪುತ್ರನನ್ನು ಕರುಣಿಸುತ್ತೇನೆ. ॥ ೨೦ ॥

ಏವಂ ವ್ಯವಸಿತೋ ರಾಜನ್ ಭಗವಾನ್ಸ ಮಹಾಯಶಾಃ ।
ಅಸ್ತೌಷೀದಾದಿಪುರುಷಮಿಲಾಯಾಃ ಪುಂಸ್ತ್ವಕಾಮ್ಯಯಾ
॥ ೨೧ ॥

ತಸ್ಮೈ ಕಾಮವರಂ ತುಷ್ಟೋ ಭಗವಾನ್ಹರಿರೀಶ್ವರಃ ।
ದದಾವಿಲಾಭವತ್ತೇನ ಸುದ್ಯುಮ್ನಃ ಪುರುಷರ್ಷಭಃ
॥ ೨೨ ॥

ಸ ಏಕದಾ ಮಹಾರಾಜ ವಿಚರನ್ಮೃಗಯಾಂ ವನೇ ।
ವೃತಃ ಕತಿಪಯಾಮಾತ್ಯೈರಶ್ವಮಾರುಹ್ಯ ಸೈಂಧವಮ್
॥ ೨೩ ॥

ಪ್ರಗೃಹ್ಯ ರುಚಿರಂ ಚಾಪಂ ಶರಾಂಶ್ಚ ಪರಮಾದ್ಭುತಾನ್ ।
ದಂಶಿತೋಽನುಮೃಗಂ ವೀರೋ ಜಗಾಮ ದಿಶಮುತ್ತರಾಮ್
॥ ೨೪ ॥

ಸ ಕುಮಾರೋ ವನಂ ಮೇರೋರಧಸ್ತಾತ್ಪ್ರವಿವೇಶ ಹ ।
ಯತ್ರಾಸ್ತೇ ಭಗವಾಞ್ಛರ್ವೋ ರಮಮಾಣಃ ಸಹೋಮಯಾ
॥ ೨೫ ॥

ತಸ್ಮಿನ್ಪ್ರವಿಷ್ಟ ಏವಾಸೌ ಸುದ್ಯುಮ್ನಃ ಪರವೀರಹಾ ।
ಅಪಶ್ಯತ್ ಸ್ತ್ರಿಯಮಾತ್ಮಾನಮಶ್ವಂ ಚ ವಡವಾಂ ನೃಪ
॥ ೨೬ ॥

ತಥಾ ತದನುಗಾಃ ಸರ್ವೇ ಆತ್ಮಲಿಂಗವಿಪರ್ಯಯಮ್ ।
ದೃಷ್ಟ್ವಾ ವಿಮನಸೋಽಭೂವನ್ವೀಕ್ಷಮಾಣಾಃ ಪರಸ್ಪರಮ್
॥ ೨೭ ॥

*ರಾಜೋವಾಚ*

ಕಥಮೇವಂಗುಣೋ ದೇಶಃ ಕೇನ ವಾ ಭಗವನ್ಕೃತಃ ।
ಪ್ರಶ್ನಮೇನಂ ಸಮಾಚಕ್ಷ್ವ ಪರಂ ಕೌತೂಹಲಂ ಹಿ ನಃ
॥ ೨೮ ॥

*ಶ್ರೀಶುಕ ಉವಾಚ*

ಏಕದಾ ಗಿರಿಶಂ ದ್ರಷ್ಟುಮೃಷಯಸ್ತತ್ರ ಸುವ್ರತಾಃ ।
ದಿಶೋ ವಿತಿಮಿರಾಭಾಸಾಃ ಕುರ್ವಂತಃ ಸಮುಪಾಗಮನ್
॥ ೨೯ ॥

ತಾನ್ವಿಲೋಕ್ಯಾಂಬಿಕಾ ದೇವೀ ವಿವಾಸಾ ವ್ರೀಡಿತಾ ಭೃಶಮ್ ।
ಭರ್ತುರಂಕಾತ್ಸಮುತ್ಥಾಯ ನೀವೀಮಾಶ್ವಥ ಪರ್ಯಧಾತ್
॥ ೩೦ ॥

ಋಷಯೋಽಪಿ ತಯೋರ್ವೀಕ್ಷ್ಯ ಪ್ರಸಂಗಂ ರಮಮಾಣಯೋಃ ।
ನಿವೃತ್ತಾಃ ಪ್ರಯಯುಸ್ತಸ್ಮಾನ್ನರನಾರಾಯಣಾಶ್ರಮಮ್
॥ ೩೧ ॥

ತದಿದಂ ಭಗವಾನಾಹ ಪ್ರಿಯಾಯಾಃ ಪ್ರಿಯಕಾಮ್ಯಯಾ ।
ಸ್ಥಾನಂ ಯಃ ಪ್ರವಿಶೇದೇತತ್ಸ ವೈ ಯೋಷಿದ್ಭವೇದಿತಿ
॥ ೩೨ ॥

ಪರೀಕ್ಷಿದ್ರಾಜನೇ! ಪರಮ ಯಶಸ್ವಿಗಳಾದ ಮಹಾತ್ಮಾ ವಸಿಷ್ಠರು ಮನುವಿಗೆ ಹೀಗೆ ಆಶ್ವಾಸನೆಯನ್ನಿತ್ತು ಇಲಾ ಎಂಬ ಕನ್ಯೆಯನ್ನು ಪುರುಷನನ್ನಾಗಿಸಲು ಪುರುಷೋತ್ತಮನಾದ ಭಗವಾನ್ ಶ್ರೀಹರಿಯನ್ನು ಸ್ತುತಿಮಾಡಿದನು. ॥ ೨೧ ॥ ಸರ್ವ ಶಕ್ತಿವಂತನಾದ ಭಗವಾನ್ ಶ್ರೀಹರಿಯು ಸಂತುಷ್ಟನಾಗಿ ಅವರಿಗೆ ಬೇಡಿದ ವರ ವನ್ನು ದಯಪಾಲಿಸಿದನು. ವರಪ್ರಭಾವದಿಂದ ಆ ಇಲಾ ಕನ್ಯೆಯೇ ಪುರುಷತ್ವವನ್ನು ಪಡೆದು ಸುದ್ಯುಮ್ನನೆಂಬ ಹೆಸರಿನಿಂದ ಪ್ರಸಿದ್ಧ ನಾದನು. ॥ ೨೨ ॥

ರಾಜೇಂದ್ರಾ! ಒಮ್ಮೆ ಸುದ್ಯುಮ್ನರಾಜನು ಸಿಂಧುದೇಶದ ಕುದುರೆಯನ್ನೇರಿ ಕೆಲವು ಮಂತ್ರಿಗಳೊಂದಿಗೆ ಬೇಟೆಯಾಡಲು ಕಾಡಿಗೆ ಹೋದನು. ॥ ೨೩ ॥ ಸುಂದರವಾದ ಧನುಸ್ಸನ್ನೂ, ಪರಮಾದ್ಭುತವಾದ ಬಾಣಗಳನ್ನೂ ಹಿಡಿದುಕೊಂಡು, ಕವಚವನ್ನೂ ಧರಿಸಿದ್ದ ವೀರನಾದ ಸುದ್ಯುಮ್ನನು ಜಿಂಕೆಯೊಂದನ್ನು ಹಿಂಬಾ ಲಿಸುತ್ತಾ ಉತ್ತರದಿಕ್ಕಿನ ಕಡೆಗೆ ಬಹುದೂರ ಹೋದನು. ॥ ೨೪ ॥ ಕೊನೆಗೆ ಸುದ್ಯುಮ್ನನು ಮೇರುಪರ್ವತದ ತಪ್ಪಲಿನ ಒಂದು ವನ ವನ್ನು ಪ್ರವೇಶಿಸಿದನು. ಆ ವನದಲ್ಲಿ ಭಗವಂತನಾದ ಶಂಕರನು ಪಾರ್ವತಿಯೊಂದಿಗೆ ವಿಹರಿಸುತ್ತಿದ್ದನು. ॥ ೨೫ ॥ ಆ ವನವನ್ನು ಪ್ರವೇಶಿಸುತ್ತಲೇ ಪರಮವೀರನಾದ ಸುದ್ಯುಮ್ನನು ತಾನು ಹೆಣ್ಣಾಗಿರುವುದನ್ನು ಕಂಡುಕೊಂಡನು. ಅವನ ಕುದುರೆಯೂ ಹೆಣ್ಣುಕುದುರೆಯಾಗಿ ಹೋಗಿತ್ತು. ॥ ೨೬ ॥ ಪರೀಕ್ಷಿತನೇ! ಜೊತೆಗೆ ಅವನ ಅನುಚರರೆಲ್ಲರೂ ತಾವು ಹೆಣ್ಣಾಗಿ ಹೋಗಿರುವುದನ್ನು ಕಂಡರು. ಅವರೆಲ್ಲರೂ ಪರಸ್ಪರ ಮುಖಗಳನ್ನೂ ನೋಡಿಕೊಳ್ಳುತ್ತಾ ಅವರೆಲ್ಲರ ಮನಸ್ಸಿಗೆ ಬೇಸರವಾಯಿತು. ॥ ೨೭ ॥

**ಪರೀಕ್ಷಿದ್ರಾಜನು ಕೇಳಿದನು** – ಮಹಾತ್ಮರೇ! ಆ ಭೂ ಖಂಡ ದಲ್ಲಿ ಇಂತಹ ವಿಚಿತ್ರ ಗುಣ ಹೇಗೆ ಬಂತು? ಯಾರು ಅದನ್ನು ಹಾಗಾಗಿಸಿದರು? ತಾವು ದಯಮಾಡಿ ನಮ್ಮ ಈ ಪ್ರಶ್ನೆಗಳಿಗೆ ಉತ್ತರಿಸಿರಿ. ಏಕೆಂದರೆ ನಮಗೆ ಬಹಳ ಕುತೂಹಲ ಉಂಟಾಗಿದೆ. ॥೨೮॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಒಮ್ಮೆ ವ್ರತನಿಷ್ಠರಾದ ಮಹರ್ಷಿಗಳು ತಮ್ಮ ದಿವ್ಯವಾದ ತೇಜಸ್ಸಿ ನಿಂದ ಎಲ್ಲ ದಿಕ್ಕುಗಳನ್ನು ಬೆಳಗಿಸುತ್ತಾ ಭಗವಾನ್ ಶಂಕರನನ್ನು ಸಂದರ್ಶಿಸಲು ಆ ವನಕ್ಕೆ ಆಗಮಿಸಿದರು. ॥ ೨೯ ॥ ಆ ಸಮಯ ದಲ್ಲಿ ಶಂಕರನೊಡನೆ ಕ್ರೀಡಿಸುತ್ತಿದ್ದ ಪಾರ್ವತಿಯ ಉಡುಗೆ ಸಡಿಲಿಸಿದ್ದರಿಂದ ಋಷಿಗಳು ಬಂದುದನ್ನು ನೋಡಿ ಬಹಳವಾಗಿ ನಾಚಿಕೊಂಡು ಒಡನೆಯೇ ಶಿವನ ತೊಡೆಯಿಂದ ಮೇಲೆದ್ದು ಸೀರೆಯನ್ನು ಸರಿಪಡಿಸಿಕೊಂಡಳು. ॥ ೩೦ ॥

ಮಹರ್ಷಿಗಳೂ ಕೂಡ ಶ್ರೀಶಂಕರನು ಗೌರಿಯೊಡನೆ ವಿಹರಿಸು ತ್ತಿರುವನೆಂದು ನೋಡಿ ಒಡನೆಯೇ ಅಲ್ಲಿಂದ ಹಿಂದಿರುಗಿ ನರ-ನಾರಾಯಣಾಶ್ರಮವನ್ನು ಸೇರಿದರು. ॥ ೩೧ ॥ ಆ ಸಮಯದಲ್ಲಿ ಭಗವಾನ್ ಶಂಕರನು ಪಾರ್ವತಿಯನ್ನು ಸಂತೋಷಗೊಳಿಸಲು – 'ನಾನಲ್ಲದೆ ಯಾರೇ ಪುರುಷನೂ ಈ ಪ್ರದೇಶವನ್ನು ಪ್ರವೇಶಿಸು ವವನು ಹೆಣ್ಣಾಗಲಿ' ಎಂದು ಹೇಳಿದನು. ॥ ೩೨ ॥

ತತ ಊರ್ಧ್ವಂ ವನಂ ತದ್ವೈ ಪುರುಷಾ ವರ್ಜಯಂತಿ ಹಿ ।
ಸಾ ಚಾನುಚರಸಂಯುಕ್ತಾ ವಿಚಚಾರ ವನಾದ್ವನಮ್ ॥ ೩೩ ॥

ಅಥ ತಾಮಾಶ್ರಮಾಭ್ಯಾಶೇ ಚರಂತೀಂ ಪ್ರಮದೋತ್ತಮಾಮ್ ।
ಸ್ತ್ರೀಭಿಃ ಪರಿವೃತಾಂ ವೀಕ್ಷ್ಯ ಚಕಮೇ ಭಗವಾನ್ಬುಧಃ ॥ ೩೪ ॥

ಸಾಪಿ ತಂ ಚಕಮೇ ಸುಭ್ರೂಃ ಸೋಮರಾಜಸುತಂ ಪತಿಮ್ ।
ಸ ತಸ್ಯಾಂ ಜನಯಾಮಾಸ ಪುರೂರವಸಮಾತ್ಮಜಮ್ ॥ ೩೫ ॥

ಏವಂ ಸ್ತ್ರೀತ್ವಮನುಪ್ರಾಪ್ತಃ ಸುದ್ಯುಮ್ನೋ ಮಾನವೋ ನೃಪಃ ।
ಸಸ್ಮಾರ ಸ್ವಕುಲಾಚಾರ್ಯಂ ವಸಿಷ್ಠಮಿತಿ ಶುಶ್ರುಮ ॥ ೩೬ ॥

ಸ ತಸ್ಯ ತಾಂ ದಶಾಂ ದೃಷ್ಟ್ವಾ ಕೃಪಯಾ ಭೃಶಪೀಡಿತಃ ।
ಸುದ್ಯುಮ್ನಸ್ಯಾಶಯನ್ ಪುಂಸ್ತ್ವಮುಪಾಧಾವತ ಶಂಕರಮ್ ॥ ೩೭ ॥

ತುಷ್ಟಸ್ತಸ್ಮೈ ಸ ಭಗವಾನ್ ಋಷಯೇ ಪ್ರಿಯಮಾವಹನ್ ।
ಸ್ವಾಂ ಚ ವಾಚಮೃತಾಂ ಕುರ್ವನ್ನಿದಮಾಹ ವಿಶಾಂಪತೇ ॥ ೩೮ ॥

ಮಾಸಂ ಪುಮಾನ್ಸ ಭವಿತಾ ಮಾಸಂ ಸ್ತ್ರೀ ತವ ಗೋತ್ರಜಃ ।
ಇತ್ಥಂ ವ್ಯವಸ್ಥಯಾ ಕಾಮಂ ಸುದ್ಯುಮ್ನೋಽವತು ಮೇದಿನೀಮ್ ॥ ೩೯ ॥

ಆಚಾರ್ಯಾನುಗ್ರಹಾತ್ಕಾಮಂ ಲಬ್ಧ್ವಾ ಪುಂಸ್ತ್ವಂ ವ್ಯವಸ್ಥಯಾ ।
ಪಾಲಯಾಮಾಸ ಜಗತೀಂ ನಾಭ್ಯನಂದನ್ ಸ್ಮ ತಂ ಪ್ರಜಾಃ ॥ ೪೦ ॥

ತಸ್ಯೋತ್ಕಲೋ ಗಯೋ ರಾಜನ್ವಿಮಲಶ್ಚ ಸುತಾಸ್ತ್ರಯಃ ।
ದಕ್ಷಿಣಾಪಥರಾಜಾನೋ ಬಭೂವುರ್ಧರ್ಮವತ್ಸಲಾಃ ॥ ೪೧ ॥

ತತಃ ಪರಿಣತೇ ಕಾಲೇ ಪ್ರತಿಷ್ಠಾನಪತಿಃ ಪ್ರಭುಃ ।
ಪುರೂರವಸ ಉತ್ಸೃಜ್ಯ ಗಾಂ ಪುತ್ರಾಯ ಗತೋ ವನಮ್ ॥ ೪೨ ॥

ಪರೀಕ್ಷಿತನೇ! ಅಂದಿನಿಂದ ಪುರುಷರಾರೂ ಆ ಸ್ಥಾನವನ್ನು ಪ್ರವೇಶಿಸುವುದಿಲ್ಲ, ಈಗ ಸುದ್ಯುಮ್ನನು ಸ್ತ್ರೀಯಾಗಿದ್ದನಲ್ಲ, ಆದಕ್ಕಾಗಿ ಅವನು ಹೆಣ್ಣುಗಳಾಗಿದ್ದ ತನ್ನ ಅನುಚರರೊಂದಿಗೆ ಒಂದು ವನದಿಂದ ಇನ್ನೊಂದು ವನಕ್ಕೆ ಹೀಗೆ ಸಂಚರಿಸುತ್ತಿದ್ದನು. ॥ ೩೩ ॥

ಅದೇ ಸಮಯದಲ್ಲಿ ಶಕ್ತಿವಂತನಾದ ಬುಧನು – ತನ್ನ ಆಶ್ರಮದ ಬಳಿಯಲ್ಲೇ ಅನೇಕ ಸ್ತ್ರೀಯರಿಂದ ಪರಿವೃತಳಾಗಿ ಸಂಚರಿಸುತ್ತಿದ್ದ ಸ್ತ್ರೀರತ್ನವನ್ನು ನೋಡಿದನು. ಅವಳ ಸೌಂದರ್ಯಕ್ಕೆ ಆಕರ್ಷಿತನಾಗಿ ಅವಳನ್ನು ತನ್ನವಳನ್ನಾಗಿಸಿಕೊಳ್ಳಬೇಕೆಂದು ಬಯಸಿದನು. ॥ ೩೪ ॥ ಆ ಸುಂದರಿಯೂ ಚಂದ್ರಕುಮಾರ ಬುಧನನ್ನು ಪತಿಯನ್ನಾಗಿ ವರಿಸಿದಳು. ಇದಾದ ಬಳಿಕ ಬುಧನು ಅವಳ ಗರ್ಭದಿಂದ ಪುರೂರವ ಎಂಬ ಪುತ್ರನನ್ನು ಪಡೆದನು. ॥ ೩೫ ॥ ಹೀಗೆ ಮನುಪುತ್ರನಾದ ಸುದ್ಯುಮ್ನನು ಸ್ತ್ರೀಯಾಗಿದ್ದ ಆ ಸ್ಥಿತಿಯಲ್ಲಿ ತನ್ನ ಕುಲಪುರೋಹಿತರಾದ ವಸಿಷ್ಠರನ್ನು ಸ್ಮರಿಸಿದನೆಂದು ಕೇಳಿದ್ದೇವೆ. ॥ ೩೬ ॥

ಸುದ್ಯುಮ್ನನ ಈ ಸ್ಥಿತಿಯನ್ನು ನೋಡಿ ವಸಿಷ್ಠರಿಗೆ ತುಂಬಾ ಕನಿಕರ ಉಂಟಾಯಿತು. ಅವರು ಸುದ್ಯುಮ್ನನನ್ನು ಪುನಃ ಪುರುಷನನ್ನಾಗಿಸಲು ಭಗವಾನ್ ಶಂಕರನನ್ನು ಆರಾಧಿಸಿದರು. ॥ ೩೭ ॥ ಪರೀಕ್ಷಿತನೇ! ಭಗವಾನ್ ಶಂಕರನು ವಸಿಷ್ಠರಲ್ಲಿ ಪ್ರಸನ್ನರಾಗಿ ಅವರ ಅಭಿಲಾಷೆಯನ್ನು ಪೂರ್ಣಗೊಳಿಸಲಿಕ್ಕಾಗಿ ತನ್ನ ಮಾತೂ ಸುಳ್ಳಾಗದ ರೀತಿಯಲ್ಲಿ ಹೀಗೆಂದನು – ॥ ೩೮ ॥

ವಸಿಷ್ಠರೇ! ನಿಮ್ಮ ಈ ಯಜಮಾನನು (ಯಜಮಾನನು ಪುರೋಹಿತರ ಗೋತ್ರದವನೆಂದೇ ಪರಿಗಣಿಸಲ್ಪಡುತ್ತಾನೆ) ಒಂದು ತಿಂಗಳು ಪುರುಷನಾಗಿರುವನು ಮತ್ತೊಂದು ತಿಂಗಳಲ್ಲಿ ಹೆಣ್ಣಾಗಿರುವನು. ಈ ವ್ಯವಸ್ಥೆಯಿಂದ ಸುದ್ಯುಮ್ನನು ಇಚ್ಛಾನುಸಾರವಾಗಿ ಭೂಮಂಡಲವನ್ನು ಪಾಲಿಸಲಿ. ॥ ೩೯ ॥ ಹೀಗೆ ವಸಿಷ್ಠರ ಅನುಗ್ರಹದಿಂದ ವ್ಯವಸ್ಥಾಪೂರ್ವಕ ಬಯಸಿದ ಪುರುಷತ್ವವನ್ನು ಪಡೆದು ಸುದ್ಯುಮ್ನನು ಪೃಥಿವಿಯನ್ನು ಪಾಲಿಸತೊಡಗಿದನು. ಆದರೂ ಪ್ರಜೆ ಅವನನ್ನು ಅಭಿನಂದಿಸುತ್ತಿರಲಿಲ್ಲ. ॥ ೪೦ ॥ ಅವನಿಗೆ ಉತ್ಕಲ, ಗಯ ಮತ್ತು ವಿಮಲ ಎಂಬ ಮೂವರು ಪುತ್ರರು ಹುಟ್ಟಿದರು. ರಾಜೇಂದ್ರಾ! ಅವರೆಲ್ಲರೂ ದಕ್ಷಿಣಾಪಥದ ರಾಜರಾದರು. ॥ ೪೧ ॥ ಅನೇಕ ದಿನಗಳ ಬಳಿಕ ಪ್ರತಿಷ್ಠಾನ ನಗರದ ಅಧಿಪತಿಯಾದ ಸುದ್ಯುಮ್ನನು ವೃದ್ಧನಾದಾಗ ತನ್ನ ಪುತ್ರ ಪುರೂರವನಿಗೆ ರಾಜ್ಯವನ್ನು ಒಪ್ಪಿಸಿ, ತಾನು ತಪಸ್ಸಿಗಾಗಿ ಕಾಡಿಗೆ ತೆರಳಿದನು. ॥ ೪೨ ॥

ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ
ಇಲೋಪಾಖ್ಯಾನೇ ಪ್ರಥಮೋಽಧ್ಯಾಯಃ ॥ ೧ ॥

# ಎರಡನೆಯ ಅಧ್ಯಾಯ

## ಪೃಷಧ್ರ ಮುಂತಾದ ಮನುವಿನ ಐವರು ಪುತ್ರರ ವಂಶ

*ಶ್ರೀಶುಕ ಉವಾಚ*

ಏವಂ ಗತೇಽಥ ಸುದ್ಯುಮ್ನೇ ಮನುರ್ವೈವಸ್ವತಃ ಸುತೇ ।
ಪುತ್ರಕಾಮಸ್ತಪಸ್ತೇಪೇ ಯಮುನಾಯಾಂ ಶತಂ ಸಮಾಃ ॥ ೧ ॥

ತತೋಽಯಜನ್ಮನುರ್ದೇವಮಪತ್ಯಾರ್ಥಂ ಹರಿಂ ಪ್ರಭುಮ್ ।
ಇಕ್ಷ್ವಾಕುಪೂರ್ವಜಾನ್ಪುತ್ರಾಲ್ಲೇಭೇ ಸ್ವಸದೃಶಾನ್ ದಶ ॥ ೨ ॥

ಪೃಷಧ್ರಸ್ತು ಮನೋಃ ಪುತ್ರೋ ಗೋಪಾಲೋ ಗುರುಣಾ ಕೃತಃ ।
ಪಾಲಯಾಮಾಸ ಗಾ ಯತ್ತೋ ರಾತ್ರ್ಯಾಂ ವೀರಾಸನವ್ರತಃ ॥ ೩ ॥

ಏಕದಾ ಪ್ರಾವಿಶದ್ಗೋಷ್ಠಂ ಶಾರ್ದೂಲೋ ನಿಶಿ ವರ್ಷತಿ ।
ಶಯಾನಾ ಗಾವ ಉತ್ಥಾಯ ಭೀತಾಸ್ತಾ ಬಭ್ರಮುರ್ವ್ರಜೇ ॥ ೪ ॥

ಏಕಾಂ ಜಗ್ರಾಹ ಬಲವಾನ್ ಸಾ ಚುಕ್ರೋಶ ಭಯಾತುರಾ ।
ತಸ್ಯಾಸ್ತತ್ಕ್ರಂದಿತಂ ಶ್ರುತ್ವಾ ಪೃಷಧ್ರೋಽಭಿಸಸಾರ ಹ ॥ ೫ ॥

ಖಡ್ಗಮಾದಾಯ ತರಸಾ ಪ್ರಲೀನೋಡುಗಣೇ ನಿಶಿ ।
ಅಜಾನನ್ನಹನದ್ಬಭ್ರೋಃ ಶಿರಃ ಶಾರ್ದೂಲಶಂಕಯಾ ॥ ೬ ॥

ವ್ಯಾಘ್ರೋಽಪಿ ವೃಕ್ಣಶ್ರವಣೋ ನಿಸ್ತ್ರಿಂಶಾಗ್ರಾಹತಸ್ತತಃ ।
ನಿಶ್ಚಕ್ರಾಮ ಭೃಶಂ ಭೀತೋ ರಕ್ತಂ ಪಥಿ ಸಮುತ್ಸೃಜನ್ ॥ ೭ ॥

ಮನ್ಯಮಾನೋ ಹತಂ ವ್ಯಾಘ್ರಂ ಪೃಷಧ್ರಃ ಪರವೀರಹಾ ।
ಅದ್ರಾಕ್ಷೀತ್ ಸ್ವಹತಾಂ ಬಭ್ರುಂ ವ್ಯುಷ್ಟಾಯಾಂ ನಿಶಿ ದುಃಖಿತಃ ॥ ೮ ॥

ತಂ ಶಶಾಪ ಕುಲಾಚಾರ್ಯಃ ಕೃತಾಗಸಮಕಾಮತಃ ।
ನ ಕ್ಷತ್ರಬಂಧುಃ ಶೂದ್ರಸ್ತ್ವಂ ಕರ್ಮಣಾ ಭವಿತಾಮುನಾ ॥ ೯ ॥

ಏವಂ ಶಪ್ತಸ್ತು ಗುರುಣಾ ಪ್ರತ್ಯಗೃಹ್ಣಾತ್ಕೃತಾಂಜಲಿಃ ।
ಅಧಾರಯದ್ವ್ರತಂ ವೀರ ಊರ್ಧ್ವರೇತಾ ಮುನಿಪ್ರಿಯಮ್ ॥ ೧೦ ॥

ವಾಸುದೇವೇ ಭಗವತಿ ಸರ್ವಾತ್ಮನಿ ಪರೇಽಮಲೇ ।
ಏಕಾಂತಿತ್ವಂ ಗತೋ ಭಕ್ತ್ಯಾ ಸರ್ವಭೂತಸುಹೃತ್ಸಮಃ ॥ ೧೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಹೀಗೆ ಸುದ್ಯುಮ್ನನು ತಪಸ್ಸಿಗಾಗಿ ಕಾಡಿಗೆ ಹೊರಟುಹೋದ ಬಳಿಕ ವೈವಸ್ವತಮನುವು ಪುತ್ರಕಾಮನಾಗಿ ಯಮುನಾನದಿಯ ತೀರದಲ್ಲಿ ನೂರು ವರ್ಷಗಳ ಕಾಲ ತಪಸ್ಸು ಮಾಡಿದನು. ॥ ೧ ॥ ಇದಾದ ಬಳಿಕ ಅವನು ಸಂತಾನವನ್ನು ಪಡೆಯಲು ಸರ್ವಶಕ್ತನಾದ ಭಗವಾನ್ ಶ್ರೀಹರಿಯನ್ನು ಆರಾಧಿಸಿದನು ಹಾಗೂ ತನಗೆ ಸಮಾನರಾದ ಇಕ್ಷ್ವಾಕುವೇ ಮೊದಲಾದ ಹತ್ತು ಪುತ್ರರನ್ನು ಪಡೆದನು.॥ ೨ ॥

ಮನುವಿನ ಹತ್ತುಪುತ್ರರಲ್ಲಿ ಒಬ್ಬನ ಹೆಸರು ಪೃಷಧ್ರ ಎಂದಿತ್ತು. ಗುರುಗಳಾದ ವಸಿಷ್ಠರು ಅವನನ್ನು ಗೋವುಗಳ ರಕ್ಷಣೆಗಾಗಿ ನೇಮಿಸಿದರು. ಆದ್ದರಿಂದ ಅವನು ರಾತ್ರಿಯಲ್ಲಿ ತುಂಬಾ ಎಚ್ಚರಿಕೆಯಿಂದ ವೀರಾಸನದಲ್ಲಿ ಕುಳಿತುಕೊಂಡು ಹಸುಗಳನ್ನು ಕಾಯುತ್ತಿದ್ದನು. ॥ ೩ ॥ ಒಂದು ರಾತ್ರಿಯಲ್ಲಿ ಮಳೆ ಬೀಳುತ್ತಿತ್ತು. ಆಗ ಆ ಹಸುಗಳ ಮಂದೆಯಲ್ಲಿ ಒಂದು ಹುಲಿಯು ನುಗ್ಗಿತು. ಇದರಿಂದ ಹೆದರಿದ ಹಸುಗಳು ಎದ್ದು ಗೋಶಾಲೆಯಲ್ಲಿ ಅತ್ತ-ಇತ್ತ ಓಡಲು ತೊಡಗಿದವು. ॥ ೪ ॥ ಬಲಶಾಲಿಯಾಗಿದ್ದ ಆ ಹುಲಿಯು ಒಂದು ಹಸುವನ್ನು ಹಿಡಿದುಕೊಂಡಿತು. ಅದು ಅತ್ಯಂತ ಭಯಗೊಂಡು 'ಅಂಬಾ' ಎಂದು ಕೂಗತೊಡಗಿತು. ಅದರ ಆ ಕರುಣಾಕ್ರಂದನವನ್ನು ಕೇಳಿದ ಪೃಷಧ್ರನು ಹಸುವಿನ ಬಳಿಗೆ ಓಡಿ ಬಂದನು. ॥ ೫ ॥ ಒಂದುಕಡೆ ರಾತ್ರಿಯ ಘೋರ ಅಂಧಕಾರ, ಮತ್ತೊಂದೆಡೆ ದಟ್ಟವಾದ ಮೋಡಗಳು ಕವಿದುದರಿಂದ ನಕ್ಷತ್ರಗಳೂ ಕಾಣುತ್ತಿರಲಿಲ್ಲ. ಅವನು ಕೈಯಲ್ಲಿ ಖಡ್ಗವನ್ನೆತ್ತಿಕೊಂಡು ಬಂದವನೇ ಹುಲಿಯನ್ನು ಕೊಲ್ಲಬೇಕೆಂದು ಖಡ್ಗಬೀಸಿದಾಗ ಹಸುವಿನ ಕತ್ತು ಕತ್ತರಿಸಿ ಹೋಯಿತು. ॥ ೬ ॥ ಹಸುವಿನ ತಲೆಯ ಜೊತೆಯಲ್ಲೇ ಖಡ್ಗದ ತುದಿಯಿಂದ ಹುಲಿಯ ಕಿವಿಯು ಕತ್ತರಿಸಿಹೋಯಿತು. ಅದು ಹೆದರಿ ದಾರಿಯಲ್ಲಿ ರಕ್ತವನ್ನು ಸುರಿಸುತ್ತಾ ಅಲ್ಲಿಂದ ಓಡಿಹೋಯಿತು. ॥ ೭ ॥ ಹುಲಿಯನ್ನೇ ಕೊಂದೆನೆಂದು ಶತ್ರುದಮನ ಪೃಷಧ್ರನು ತಿಳಿದನು. ಆದರೆ ರಾತ್ರಿಯು ಕಳೆಯುತ್ತಲೇ ನಾನು ಹಸುವನ್ನೇ ಕೊಂದಿದ್ದೇನೆ ಎಂದು ನೋಡಿದನು. ಇದರಿಂದ ಅವನಿಗೆ ಬಹಳ ದುಃಖವಾಯಿತು. ॥ ೮ ॥ ಪೃಷಧ್ರನು ತಿಳಿದು-ತಿಳಿದು ತಪ್ಪುಮಾಡದಿದ್ದರೂ ಕುಲಪುರೋಹಿತರಾದ ವಸಿಷ್ಠರು – 'ನೀನು ಈ ಗೋವಧೆಯಿಂದ ಕ್ಷತ್ರಿಯನಾಗಿ ಉಳಿಯಲಾರೆ; ಶೂದ್ರನಾಗಿ ಹೋಗು' ಎಂದು ಶಾಪವನ್ನಿತ್ತರು. ॥ ೯ ॥ ಪೃಷಧ್ರನು ಗುರುಗಳ ಶಾಪವನ್ನು ಅಂಜಲಿಬದ್ಧನಾಗಿ ಸ್ವೀಕರಿಸಿದನು. ಬಳಿಕ ಅವನು ಎಂದೆಂದಿಗೂ ಮುನಿಗಳಿಗೆ ಪ್ರಿಯವಾದ ನೈಷ್ಠಿಕ ಬ್ರಹ್ಮಚರ್ಯವನ್ನು ಕೈಗೊಂಡನು. ॥ ೧೦ ॥ ಅವನು ಸಮಸ್ತ ಪ್ರಾಣಿಗಳ ಅಹೈತುಕ ಹಿತೈಷಿಯಾಗಿ, ಎಲ್ಲರ ಕುರಿತು ಸಮಭಾವದಿಂದ ಕೂಡಿಕೊಂಡು ಭಕ್ತಿಯ ಮೂಲಕ ಪರಮ ವಿಶುದ್ಧನೂ, ಸರ್ವಾತ್ಮನೂ ಆದ ಭಗವಾನ್ ವಾಸುದೇವನ ಅನನ್ಯ ಪ್ರೇಮಿಯಾದನು. ॥ ೧೧ ॥

ವಿಮುಕ್ತಸಂಗಃ ಶಾಂತಾತ್ಮಾ ಸಂಯತಾಕ್ಷೋಽಪರಿಗ್ರಹಃ ।
ಯದೃಚ್ಛಯೋಪಪನ್ನೇನ ಕಲ್ಪಯನ್ ವೃತ್ತಿಮಾತ್ಮನಃ ॥ ೧೨ ॥

ಆತ್ಮನ್ಯಾತ್ಮಾನಮಾಧಾಯ ಜ್ಞಾನತೃಪ್ತಃ ಸಮಾಹಿತಃ ।
ವಿಚಚಾರ ಮಹೀಮೇತಾಂ ಜಡಾಂಧಬಧಿರಾಕೃತಿಃ ॥ ೧೩ ॥

ಏವಂವೃತ್ತೋ ವನಂ ಗತ್ವಾ ದೃಷ್ಟ್ವಾ ದಾವಾಗ್ನಿಮುತ್ಥಿತಮ್ ।
ತೇನೋಪಯುಕ್ತ ಕರಣೋ ಬ್ರಹ್ಮ ಪ್ರಾಪ ಪರಂ ಮುನಿಃ ॥ ೧೪ ॥

ಕವಿಃ ಕನೀಯಾನ್ವಿಷಯೇಷು ನಿಃಸ್ಪೃಹೋ
ವಿಸೃಜ್ಯ ರಾಜ್ಯಂ ಸಹ ಬಂಧುಭಿರ್ವನಮ್ ।
ನಿವೇಶ್ಯ ಚಿತ್ತೇ ಪುರುಷಂ ಸ್ವರೋಚಿಷಂ
ವಿವೇಶ ಕೈಶೋರವಯಾಃ ಪರಂ ಗತಃ ॥ ೧೫ ॥

ಕರೂಷಾನ್ಮಾನವಾದಾಸನ್ ಕಾರೂಷಾಃ ಕ್ಷತ್ರಜಾತಯಃ ।
ಉತ್ತರಾಪಥಗೋಪ್ತಾರೋ ಬ್ರಹ್ಮಣ್ಯಾ ಧರ್ಮವತ್ಸಲಾಃ ॥ ೧೬ ॥

ಧೃಷ್ಟಾದ್ಧಾರ್ಷ್ಟಮಭೂತ್ ಕ್ಷತ್ರಂ ಬ್ರಹ್ಮಭೂಯಂ ಗತಂ ಕ್ಷಿತೌ ।
ನೃಗಸ್ಯ ವಂಶಃ ಸುಮತಿರ್ಭೂತಜ್ಯೋತಿಸ್ತತೋ ವಸುಃ ॥ ೧೭ ॥

ವಸೋಃ ಪ್ರತೀಕಸ್ತತ್ಪುತ್ರ ಓಘವಾನೋಘವತ್ಪಿತಾ ।
ಕನ್ಯಾ ಚೌಘವತೀ ನಾಮ ಸುದರ್ಶನ ಉವಾಹ ತಾಮ್ ॥ ೧೮ ॥

ಚಿತ್ರಸೇನೋ ನರಿಷ್ಯಂತಾದೃಕ್ಷಸ್ತಸ್ಯ ಸುತೋಽಭವತ್ ।
ತಸ್ಯ ಮೀಢ್ವಾಂಸ್ತತಃ ಕೂರ್ಚ ಇಂದ್ರಸೇನಸ್ತು ತತ್ಸುತಃ ॥ ೧೯ ॥

ವೀತಿಹೋತ್ರಸ್ತ್ವಿಂದ್ರಸೇನಾತ್ತಸ್ಯ ಸತ್ಯಶ್ರವಾ ಅಭೂತ್ ।
ಉರುಶ್ರವಾಃ ಸುತಸ್ತಸ್ಯ ದೇವದತ್ತಸ್ತತೋಽಭವತ್ ॥ ೨೦ ॥

ತತೋಽಗ್ನಿವೇಶ್ಯೋ ಭಗವಾನಗ್ನಿಃ ಸ್ವಯಮಭೂತ್ಸುತಃ ।
ಕಾನೀನ ಇತಿ ವಿಖ್ಯಾತೋ ಜಾತೂಕರ್ಣ್ಯೋ ಮಹಾನೃಷಿಃ ॥ ೨೧ ॥

ತತೋ ಬ್ರಹ್ಮಕುಲಂ ಜಾತಮಾಗ್ನಿವೇಶ್ಯಾಯನಂ ನೃಪ ।
ನರಿಷ್ಯಂತಾನ್ವಯಃ ಪ್ರೋಕ್ತೋ ದಿಷ್ಟವಂಶಮತಃ ಶೃಣು ॥ ೨೨ ॥

ನಾಭಾಗೋ ದಿಷ್ಟಪುತ್ರೋಽನ್ಯಃ ಕರ್ಮಣಾ ವೈಶ್ಯತಾಂ ಗತಃ ।
ಭಲಂದನಃ ಸುತಸ್ತಸ್ಯ ವತ್ಸಪ್ರೀತಿರ್ಭಲಂದನಾತ್ ॥ ೨೩ ॥

ಅವನ ಎಲ್ಲ ಆಸಕ್ತಿಗಳು ಇಂಗಿಹೋದುವು. ವೃತ್ತಿಗಳು ಶಾಂತವಾದುವು. ಇಂದ್ರಿಯಗಳು ವಶವಾದುವು. ಅವನು ಎಂದೂ ಯಾವುದೇ ಸಂಗ್ರಹ-ಪರಿಗ್ರಹವನ್ನು ಇರಿಸಿಕೊಳ್ಳುತ್ತಿರಲಿಲ್ಲ. ದೈವವಶದಿಂದ ದೊರೆತುದರಲ್ಲೇ ತನ್ನ ಜೀವನ ನಿರ್ವಾಹ ನಡೆಸುತ್ತಿದ್ದನು. ॥ ೧೨ ॥ ಅವನು ಆತ್ಮಜ್ಞಾನದಿಂದ ತೃಪ್ತನಾಗಿ ತನ್ನ ಚಿತ್ತವನ್ನು ಪರಮಾತ್ಮನಲ್ಲಿ ನೆಲೆಗೊಳಿಸಿ ಸಾಧಾರಣವಾಗಿ ಸಮಾಧಿಸ್ಥಿತಿಯಲ್ಲೇ ಇರುತ್ತಿದ್ದನು. ಕೆಲವೊಮ್ಮೆ ಜಡನಂತೆಯೂ, ಕುರುಡನಂತೆಯೂ, ಕಿವುಡನಂತೆಯೂ ಇದ್ದು ಜಗತ್ತಿನಲ್ಲಿ ಸಂಚರಿಸುತ್ತಿದ್ದನು. ॥ ೧೩ ॥ ಹೀಗೆ ಜೀವನ ನಡೆಸುತ್ತಾ ಅವನು ಒಂದುದಿನ ಕಾಡಿಗೆ ಹೋದನು. ಅಲ್ಲಿ ಕಾಡ್ಗಿಚ್ಚು ಧಗ-ಧಗನೆ ಉರಿಯುತ್ತಿರುವುದನ್ನು ಕಂಡು, ಮನನಶೀಲನಾದ ಪೃಷಧ್ರನು ತನ್ನ ಶರೀರವನ್ನು ಅದೇ ಅಗ್ನಿಯಲ್ಲಿ ಭಸ್ಮಗೈಯ್ದು ಪರಬ್ರಹ್ಮ ಪರಮಾತ್ಮನನ್ನು ಹೊಂದಿದನು. ॥ ೧೪ ॥

ಮನುವಿನ ಎಲ್ಲಕ್ಕಿಂತ ಕಿರಿಯ ಮಗನಾದ ಕವಿಯು ವಿಷಯಗಳಿಂದ ಅತ್ಯಂತ ನಿಃಸ್ಪೃಹನಾಗಿದ್ದನು. ಅವನು ರಾಜ್ಯವನ್ನು ತ್ಯಜಿಸಿ ತನ್ನ ಬಂಧುಗಳೊಡನೆ ಕಾಡಿಗೆ ಹೊರಟುಹೋದನು ಮತ್ತು ಹೃದಯದಲ್ಲಿ ಸ್ವಯಂ ಪ್ರಕಾಶನಾದ ಪರಮಾತ್ಮನನ್ನು ಧ್ಯಾನದ ಮೂಲಕ ಕಂಡುಕೊಂಡು ಬಾಲ್ಯದಲ್ಲೇ ಪರಮಪದವನ್ನು ಪಡೆದನು. ॥ ೧೫ ॥

ಮನುವಿನ ಮತ್ತೊಬ್ಬ ಪುತ್ರ ಕರೂಷನಿಂದ ಕರೂಷರೆಂಬ ಕ್ಷತ್ರಿಯರು ಉತ್ಪನ್ನರಾದರು. ಅವರೆಲ್ಲರೂ ಬ್ರಾಹ್ಮಣಭಕ್ತರೂ, ಧರ್ಮಪ್ರೇಮಿಗಳೂ ಆಗಿದ್ದು, ಉತ್ತರ ದಿಕ್ಕಿನ ರಕ್ಷಕರಾದರು. ॥ ೧೬ ॥ ಮತ್ತೊಬ್ಬ ಮಗನಾದ ಧೃಷ್ಟನಿಂದ ಧಾರ್ಷ್ಟರೆಂಬ ಕ್ಷತ್ರಿಯರಾದರು. ಕೊನೆಗೆ ಅವನು ಈ ಶರೀರದಿಂದಲೇ (ಕ್ಷತ್ರಿಯ ಶರೀರದಿಂದಲೇ) ಬ್ರಾಹ್ಮಣರಾದರು. ನೃಗನಿಗೆ ಸುಮತಿ ಎಂಬ ಪುತ್ರನಾದನು. ಅವನ ಪುತ್ರ ಭೂತಜ್ಯೋತಿ ಮತು ಭೂತಜ್ಯೋತಿಯ ಪುತ್ರ ವಸು ಎಂಬುವನಿದ್ದನು. ॥ ೧೭ ॥ ವಸುವಿನ ಪುತ್ರ ಪ್ರತೀಕ ಹಾಗೂ ಪ್ರತೀಕನ ಮಗ ಓಘವಾನ್. ಓಘವಂತನ ಮಗನ ಹೆಸರೂ ಓಘವಂತ ಎಂದೇ ಇತ್ತು. ಅವನಿಗೆ ಓಘವತಿ ಎಂಬ ಓರ್ವ ಕನ್ನೆಯೂ ಇದ್ದಳು. ಅವಳ ವಿವಾಹವು ಸುದರ್ಶನನೊಂದಿಗೆಆಯಿತು. ॥ ೧೮ ॥ ಮನುಪುತ್ರ ನರಿಷ್ಯಂತನಿಂದ ಚಿತ್ರಸೇನ, ಅವನಿಂದ ಋಕ್ಷ, ಋಕ್ಷನಿಂದ ಮೀಢವಾನ್, ಮೀಢ್‌ವಂತನಿಂದ ಕೂರ್ಚ ಮತ್ತು ಅವನಿಂದ ಇಂದ್ರಸೇನ ಉತ್ಪತ್ತಿಯಾದರು. ॥ ೧೯ ॥ ಇಂದ್ರಸೇನನಿಂದ ವೀತಿಹೋತ್ರ, ಅವನಿಂದ ಸತ್ಯಶ್ರವಾ, ಸತ್ಯಶ್ರವಸ್ಸಿನಿಂದ ಉರುಶ್ರವಾ ಮತ್ತು ಅವನಿಂದ ದೇವದತ್ತನ ಉತ್ಪತ್ತಿಯಾಯಿತು. ॥ ೨೦ ॥

ದೇವದತ್ತನಿಗೆ ಅಗ್ನಿವೇಶ್ಯನೆಂಬ ಪುತ್ರನು ಜನಿಸಿದನು. ಅವನು ಸಾಕ್ಷಾತ್ ಅಗ್ನಿದೇವನೇ ಆಗಿದ್ದನು. ಮುಂದೆ ಅವನೇ ಕಾನೀನ ಮತ್ತು ಮಹರ್ಷಿ ಜಾತೂಕರ್ಣ್ಯ ಎಂಬ ಹೆಸರಿನಿಂದ ವಿಖ್ಯಾತನಾದನು. ॥ ೨೧ ॥ ಪರೀಕ್ಷಿತನೇ! ಬ್ರಾಹ್ಮಣರ 'ಅಗ್ನಿವೇಶ್ಯಾಯನ' ಎಂಬ ಗೋತ್ರ ಇವನಿಂದಲೇ ಪ್ರವರ್ತಿತವಾಯಿತು. ಹೀಗೆ ನರಿಷ್ಯಂತನ ವಂಶವನ್ನು ನಾನು ವರ್ಣಿಸಿದೆ. ಈಗ ದಿಷ್ಟನ ವಂಶವನ್ನು ಕೇಳು. ॥ ೨೨ ॥

ದಿಷ್ಟನ ಮಗನ ಹೆಸರು ನಾಭಾಗ ಎಂದಿತ್ತು. ನಾನು ಮುಂದೆ ವರ್ಣಿಸುವ ನಾಭಾಗನಿಂದ ಇವನು ಬೇರೆಯಾಗಿದ್ದನು. ಅವನು ತನ್ನ ಕರ್ಮದ ಕಾರಣದಿಂದಾಗಿ ವೈಶ್ಯನಾದನು. ಅವನ ಪುತ್ರ ಭಲಂದನ ಮತ್ತು ಅವನಿಗೆ ವತ್ಸಪ್ರೀತಿ ಹುಟ್ಟಿದನು. ॥ ೨೩ ॥

ವತ್ಸಪ್ರೀತೇಃ ಸುತಃ ಪ್ರಾಂಶುಸ್ತತ್ಸುತಂ ಪ್ರಮತಿಂ ವಿದುಃ ।
ಖನಿತ್ರಃ ಪ್ರಮತೇಸ್ತಸ್ಮಾಚ್ಚಾಕ್ಷುಷೋಽಥ ವಿವಿಂಶತಿಃ ॥ ೨೪ ॥

ವಿವಿಂಶತಿಸುತೋ ರಂಭಃ ಖನಿನೇತ್ರೋಽಸ್ಯ ಧಾರ್ಮಿಕಃ ।
ಕರಂಧಮೋ ಮಹಾರಾಜ ತಸ್ಯಾಸೀದಾತ್ಮಜೋ ನೃಪ ॥ ೨೫ ॥

ತಸ್ಯಾವೀಕ್ಷಿತ್ಸುತೋ ಯಸ್ಯ ಮರುತ್ತಶ್ಚಕ್ರವರ್ತ್ಯಭೂತ್ ।
ಸಂವರ್ತೋಽಯಾಜಯದ್ ಯಂ ವೈ ಮಹಾಯೋಗ್ಯಂಗಿರಃಸುತಃ ॥ ೨೬ ॥

ಮರುತ್ತಸ್ಯ ಯಥಾ ಯಜ್ಞೋ ನ ತಥಾನ್ಯಸ್ಯ ಕಶ್ಚನ ।
ಸರ್ವಂ ಹಿರಣ್ಮಯಂ ತ್ವಾಸೀದ್ಯತ್ಕಿಂಚಿಚ್ಚಾಸ್ಯ ಶೋಭನಮ್ ॥ ೨೭ ॥

ಅಮಾದ್ಯದಿಂದ್ರಃ ಸೋಮೇನ ದಕ್ಷಿಣಾಭಿರ್ದ್ವಿಜಾತಯಃ ।
ಮರುತಃ ಪರಿವೇಷ್ಟಾರೋ ವಿಶ್ವೇದೇವಾಃ ಸಭಾಸದಃ ॥ ೨೮ ॥

ಮರುತ್ತಸ್ಯ ದಮಃ ಪುತ್ರಸ್ತಸ್ಯಾಸೀದ್ರಾಜ್ಯವರ್ಧನಃ ।
ಸುಧೃತಿಸ್ತತ್ಸುತೋ ಜಜ್ಞೇ ಸೌಧೃತೇಯೋ ನರಃ ಸುತಃ ॥ ೨೯ ॥

ತತ್ಸುತಃ ಕೇವಲಸ್ತಸ್ಮಾದ್ಬಂಧುಮಾನ್ವೇಗವಾಂಸ್ತತಃ ।
ಬಂಧುಸ್ತಸ್ಯಾಭವದ್ಯಸ್ಯ ತೃಣಬಿಂದುರ್ಮಹೀಪತಿಃ ॥ ೩೦ ॥

ತಂ ಭೇಜೇಽಲಂಬುಷಾ ದೇವೀ ಭಜನೀಯಗುಣಾಲಯಮ್ ।
ವರಾಪ್ಸರಾ ಯತಃ ಪುತ್ರಾಃ ಕನ್ಯಾ ಚೇಡವಿಡಾಭವತ್ ॥ ೩೧ ॥

ತಸ್ಯಾಮುತ್ಪಾದಯಾಮಾಸ ವಿಶ್ರವಾ ಧನದಂ ಸುತಮ್ ।
ಪ್ರಾದಾಯ ವಿದ್ಯಾಂ ಪರಮಾಮೃಷಿರ್ಯೋಗೇಶ್ವರಾತ್ಪಿತುಃ ॥ ೩೨ ॥

ವಿಶಾಲಃ ಶೂನ್ಯಬಂಧುಶ್ಚ ಧೂಮ್ರಕೇತುಶ್ಚ ತತ್ಸುತಾಃ ।
ವಿಶಾಲೋ ವಂಶಕೃದ್ರಾಜಾ ವೈಶಾಲೀಂ ನಿರ್ಮಮೇ ಪುರೀಮ್ ॥ ೩೩ ॥

ಹೇಮಚಂದ್ರಃ ಸುತಸ್ತಸ್ಯ ಧೂಮ್ರಾಕ್ಷಸ್ತಸ್ಯ ಚಾತ್ಮಜಃ ।
ತತ್ಪುತ್ರಾತ್ಸಂಯಮಾದಾಸೀತ್ಕೃಶಾಶ್ವಃ ಸಹದೇವಜಃ ॥ ೩೪ ॥

ಕೃಶಾಶ್ವಾತ್ಸೋಮದತ್ತೋಽಭೂದ್ಯೋಽಶ್ವಮೇಧೈರಿಡಸ್ಪತಿಮ್ ।
ಇಷ್ಟ್ವಾ ಪುರುಷಮಾಪಾಗ್ರ್ಯಾಂ ಗತಿಂ ಯೋಗೇಶ್ವರಾಶ್ರಿತಃ ॥ ೩೫ ॥

ಸೌಮದತ್ತಿಸ್ತು ಸುಮತಿಸ್ತತ್ಸುತೋ ಜನಮೇಜಯಃ ।
ಏತೇ ವೈಶಾಲಭೂಪಾಲಾಸ್ತೃಣಬಿಂದೋರ್ಯಶೋಧರಾಃ ॥ ೩೬ ॥

ವತ್ಸಪ್ರೀತಿಯ ಪ್ರಾಂಶು, ಪ್ರಾಂಶುವಿನ ಪುತ್ರ ಪ್ರಮತಿಯಾದನು. ಪ್ರಮತಿಯಿಂದ ಖನಿತ್ರ, ಖನಿತ್ರನಿಂದ ಚಾಕ್ಷುಷ, ಅವನಿಗೆ ವಿವಿಂಶತಿ ಪುತ್ರನಾದನು. ॥ ೨೪ ॥ ವಿವಿಂಶತಿಯ ಪುತ್ರರಂಭ, ರಂಭನ ಪುತ್ರ ಖನಿನೇತ್ರ. ಇವರಿಬ್ಬರೂ ಪರಮ ಧಾರ್ಮಿಕರಾಗಿದ್ದರು. ಅವನ ಪುತ್ರ ಕರಂಧಮ, ಕರಂಧಮನ ಮಗ ಅವೀಕ್ಷಿತ್, ಪರೀಕ್ಷಿದ್ರಾಜನೇ ! ಅವೀಕ್ಷಿವಂತನ ಪುತ್ರ ಮರುತ್ತಮ ಚಕ್ರವರ್ತಿರಾಜನಾದನು. ಅವನಿಂದ ಅಂಗಿರಸ್ಸುವಿನ ಪುತ್ರ ಮಹಾಯೋಗಿ ಸಂವರ್ತಕ ಋಷಿಯು ಯಜ್ಞವನ್ನು ಮಾಡಿಸಿದ್ದನು. ॥ ೨೫-೨೬ ॥ ಮರುತ್ತ ಚಕ್ರವರ್ತಿಯ ಯಜ್ಞದಂತೆ ಬೇರೆಯಾವ ಯಜ್ಞವೂ ಆಗಲಿಲ್ಲ, ಆ ಯಜ್ಞದಲ್ಲಿ ಉಪಯೋಗಿಸುತ್ತಿದ್ದ ಸಮಸ್ತ ಪಾತ್ರೆಗಳು ಸುಂದರವಾಗಿಯೂ, ಸುವರ್ಣಮಯವಾಗಿಯೂ ಆಗಿದ್ದವು. ॥ ೨೭ ॥ ಆ ಯಜ್ಞದಲ್ಲಿ ಸೋಮಪಾನ ಮಾಡಿದ ಇಂದ್ರನು ಮತ್ತನಾಗಿದ್ದನು. ದಕ್ಷಿಣೆಗಳಿಂದ ಬ್ರಾಹ್ಮಣರು ತೃಪ್ತರಾಗಿದ್ದರು. ಅಲ್ಲಿ ಬಡಿಸುವವರು ಮರುದ್ಗಣರಾಗಿದ್ದು ಸಭಾಸದರು ವಿಶ್ವೇದೇವತೆಗಳಾಗಿದ್ದರು. ॥ ೨೮ ॥

ಮರುತ್ತನಿಗೆ ದಮನೆಂಬ ಪುತ್ರನಿದ್ದನು. ದಮನಿಂದ ರಾಜವರ್ಧನ, ಅವನಿಂದ ಸುಧೃತಿ ಮತ್ತು ಸುಧೃತಿಯಿಂದ ನರನೆಂಬ ಪುತ್ರನು ಹುಟ್ಟಿದನು. ॥ ೨೯ ॥ ನರನಿಂದ ಕೇವಲ, ಕೇವಲನಿಂದ ಬಂಧುಮಾನ್, ಬಂಧುಮಂತನಿಂದ ವೇಗವಾನ್, ವೇಗವಂತನಿಂದ ಬಂಧು ಹಾಗೂ ಬಂಧುವಿನಿಂದ ತೃಣಬಿಂದು ರಾಜನ ಜನ್ಮವಾಯಿತು. ॥ ೩೦ ॥ ತೃಣಬಿಂದುವು ಆದರ್ಶ ಗುಣಗಳ ಭಂಡಾರನಾಗಿದ್ದನು. ಅಪ್ಸರೆಯರಲ್ಲಿ ಶ್ರೇಷ್ಠಳಾದ ಅಲಂಬುಷಾದೇವಿಯು ಇವನನ್ನು ವರಿಸಿದಳು. ಅವಳಿಂದ ಅವನಿಗೆ ಕೆಲವು ಪುತ್ರರೂ ಮತ್ತು ಇಡವಿಡಾ ಎಂಬ ಒಂದು ಕನ್ಯೆಯೂ ಹುಟ್ಟಿದಳು. ॥ ೩೧ ॥ ಮುನಿಶ್ರೇಷ್ಠರಾದ ವಿಶ್ರವಸುವು ತನ್ನ ಯೋಗೇಶ್ವರ ತಂದೆಯಾದ ಪುಲಸ್ತ್ಯರಿಂದ ಉತ್ತಮ ವಿದ್ಯೆಯನ್ನು ಪಡೆದು, ಇಡವಿಡಾ ಗರ್ಭದಿಂದ ಲೋಕಪಾಲ ಕುಬೇರನನ್ನು ಪುತ್ರನನ್ನಾಗಿ ಪಡೆದನು. ॥ ೩೨ ॥ ತೃಣಬಿಂದು ಮಹಾರಾಜನು ತನ್ನ ಧರ್ಮಪತ್ನಿಯಿಂದ ವಿಶಾಲ, ಶೂನ್ಯಬಂಧು ಮತ್ತು ಧೂಮ್ರಕೇತು ಎಂಬ ಮೂವರು ಪುತ್ರರನ್ನು ಪಡೆದನು. ಅವರಲ್ಲಿ ವಿಶಾಲರಾಜನು ವಂಶಧರನಾದನು. ಅವನು ವೈಶಾಲಿ ಎಂಬ ನಗರವನ್ನು ಸ್ಥಾಪಿಸಿದನು. ॥ ೩೩ ॥ ವಿಶಾಲನಿಂದ ಹೇಮಚಂದ್ರ, ಹೇಮಚಂದ್ರನಿಂದ ಧೂಮ್ರಾಕ್ಷ, ಧೂಮ್ರಾಕ್ಷನಿಂದ ಸಂಯಮ ಮತ್ತು ಸಂಯಮನಿಂದ ಕೃಶಾಶ್ವ ಮತ್ತು ದೇವಜರೆಂಬ ಈರ್ವರು ಪುತ್ರರು ಉದಿಸಿದರು. ॥ ೩೪ ॥ ಕೃಶಾಶ್ವನಿಗೆ ಸೋಮದತ್ತನೆಂಬ ಪುತ್ರನಿದ್ದನು. ಅವನು ಅಶ್ವಮೇಧದ ಮೂಲಕ ಯಜ್ಞಪತಿ ಭಗವಂತನನ್ನು ಆರಾಧಿಸಿ, ಯೋಗೇಶ್ವರ ಮಹಾತ್ಮರ ಆಶ್ರಯ ಪಡೆದು ಉತ್ತಮಗತಿಯನ್ನು ಪಡೆದುಕೊಂಡನು. ॥ ೩೫ ॥ ಸೋಮದತ್ತನ ಮಗ ಸುಮತಿಯಾದನು ಮತ್ತು ಸುಮತಿಯಿಂದ ಜನಮೇಜಯನಾದನು. ಇವರೆಲ್ಲರೂ ತೃಣಬಿಂದುವಿನ ಕೀರ್ತಿಯನ್ನು ಬೆಳೆಸುವ ವಿಶಾಲ ವಂಶದ ರಾಜರಾಗಿದ್ದರು. ॥ ೩೬ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ಮಹರ್ಷಿ ಚ್ಯವನ ಮತ್ತು ಸುಕನ್ಯೆಯ ಚರಿತ್ರೆ, ಶರ್ಯಾತಿರಾಜನ ವಂಶವರ್ಣನೆ

*ಶ್ರೀಶುಕ ಉವಾಚ*

ಶರ್ಯಾತಿರ್ಮಾನವೋ ರಾಜಾ ಬ್ರಹ್ಮಿಷ್ಠಃ ಸ ಬಭೂವ ಹ ।
ಯೋ ವಾ ಅಂಗಿರಸಾಂ ಸತ್ರೇ ದ್ವಿತೀಯಮಹ ಊಚಿವಾನ್
॥ ೧ ॥

ಸುಕನ್ಯಾ ನಾಮ ತಸ್ಯಾಸೀತ್ಕನ್ಯಾ ಕಮಲಲೋಚನಾ ।
ತಯಾ ಸಾರ್ಧಂ ವನಗತೋ ಹ್ಯಗಮಚ್ಚ್ಯವನಾಶ್ರಮಮ್
॥ ೨ ॥

ಸಾ ಸಖೀಭಿಃ ಪರಿವೃತಾ ವಿಚಿನ್ವತ್ಯಂಘ್ರಿಪಾನ್ವನೇ ।
ವಲ್ಮೀಕರಂಧ್ರೇ ದದೃಶೇ ಖದ್ಯೋತೇ ಇವ ಜ್ಯೋತಿಷೀ
॥ ೩ ॥

ತೇ ದೈವಚೋದಿತಾ ಬಾಲಾ ಜ್ಯೋತಿಷೀ ಕಂಟಕೇನ ವೈ ।
ಅವಿಧ್ಯನ್ಮುಗ್ಧಭಾವೇನ ಸುಸ್ರಾವಾಸೃಕ್ ತತೋ ಬಹು
॥ ೪ ॥

ಶಕೃನ್ಮೂತ್ರನಿರೋಧೋಽಭೂತ್ ಸೈನಿಕಾನಾಂ ಚ ತತ್ಕ್ಷಣಾತ್ ।
ರಾಜರ್ಷಿಸ್ತಮುಪಾಲಕ್ಷ್ಯ ಪುರುಷಾನ್ವಿಸ್ಮಿತೋಽಬ್ರವೀತ್
॥ ೫ ॥

ಅಪ್ಯಭದ್ರಂ ನ ಯುಷ್ಮಾಭಿರ್ಭಾರ್ಗವಸ್ಯ ವಿಚೇಷ್ಟಿತಮ್ ।
ವ್ಯಕ್ತಂ ಕೇನಾಪಿ ನಸ್ತಸ್ಯ ಕೃತಮಾಶ್ರಮದೂಷಣಮ್
॥ ೬ ॥

ಸುಕನ್ಯಾ ಪ್ರಾಹ ಪಿತರಂ ಭೀತಾ ಕಿಂಚಿತ್ಕೃತಂ ಮಯಾ ।
ದ್ವೇ ಜ್ಯೋತಿಷೀ ಅಜಾನಂತ್ಯಾ ನಿರ್ಭಿನ್ನೇ ಕಂಟಕೇನ ವೈ
॥ ೭ ॥

ದುಹಿತುಸ್ತದ್ವಚಃ ಶ್ರುತ್ವಾ ಶರ್ಯಾತಿರ್ಜಾತಸಾಧ್ವಸಃ ।
ಮುನಿಂ ಪ್ರಸಾದಯಾಮಾಸ ವಲ್ಮೀಕಾಂತರ್ಹಿತಂ ಶನೈಃ
॥ ೮ ॥

ತದಭಿಪ್ರಾಯಮಾಜ್ಞಾಯ ಪ್ರಾದಾದ್ದುಹಿತರಂ ಮುನೇಃ ।
ಕೃಚ್ಛ್ರಾನ್ಮುಕ್ತಸ್ತಮಾಮಂತ್ರ್ಯ ಪುರಂ ಪ್ರಾಯಾತ್ಸಮಾಹಿತಃ
॥ ೯ ॥

ಸುಕನ್ಯಾ ಚ್ಯವನಂ ಪ್ರಾಪ್ಯ ಪತಿಂ ಪರಮಕೋಪನಮ್ ।
ಪ್ರೀಣಯಾಮಾಸ ಚಿತ್ತಜ್ಞಾ ಅಪ್ರಮತ್ತಾನುವೃತ್ತಿಭಿಃ
॥ ೧೦ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ಪರೀಕ್ಷಿತನೇ! ಮನುಪುತ್ರನಾದ ಶರ್ಯಾತಿರಾಜನು ವೇದಗಳ ನಿಷ್ಠಾವಂತ ವಿದ್ವಾಂಸನಾಗಿದ್ದನು. ಅವನು ಅಂಗಿರಾ ಗೋತ್ರದ ಋಷಿಗಳ ಯಜ್ಞದಲ್ಲಿ ಎರಡನೆಯ ದಿನದ ಕರ್ಮವನ್ನು ತಿಳಿಸಿದ್ದನು. ॥ ೧ ॥ ಅವನಿಗೆ ಕಮಲಲೋಚನೆಯಾದ ಸುಕನ್ಯೆ ಎಂಬ ಓರ್ವ ಮಗಳಿದ್ದಳು. ಒಂದು ದಿನ ಶರ್ಯಾತಿರಾಜನು ತನ್ನ ಕನ್ಯೆಯೊಂದಿಗೆ ವನದಲ್ಲಿ ಸುತ್ತಾಡುತ್ತಾ ಚ್ಯವನಋಷಿಯ ಆಶ್ರಮಕ್ಕೆ ಬಂದು ತಲುಪಿದನು. ॥ ೨ ॥ ಸುಕನ್ಯೆಯು ತನ್ನ ಸಖಿಯರೊಂದಿಗೆ ವನದಲ್ಲಿ ಅಲೆದಾಡುತ್ತಾ ವೃಕ್ಷಗಳ ಸೌಂದರ್ಯವನ್ನು ನೋಡುತ್ತಿದ್ದಳು. ವೃಕ್ಷದ ಬುಡದಲ್ಲಿದ್ದ ಒಂದು ಹುತ್ತದಲ್ಲಿ ಸುಕನ್ಯೆಯು ಮಿಣುಕುಹುಳುಗಳಂತೆ ಮಿನುಗುತ್ತಿದ್ದ ಎರಡು ಜ್ಯೋತಿಗಳನ್ನು (ಅವು ಚ್ಯವನ ಮಹರ್ಷಿಯ ಎರಡುಕಣ್ಣುಗಳಾಗಿದ್ದವು.) ನೋಡಿದಳು. ॥ ೩ ॥ ದೈವಪ್ರೇರಣೆಯಿಂದಾಗಿ ಅರಿವಿಲ್ಲದ ಆ ಬಾಲೆಯು ಹುಡುಗಾಟಕ್ಕಾಗಿ ಮಿನುಗುತ್ತಿದ್ದ ಆ ಬೆಳಕುಗಳನ್ನು ಮುಳ್ಳಿನಿಂದ ಚುಚ್ಚಿದಳು. ಇದರಿಂದ ಬೆಳಕಿದ್ದ ಸ್ಥಳದಿಂದ ರಕ್ತವು ಹರಿಯತೊಡಗಿತು. ॥ ೪ ॥ ಅದೇ ಸಮಯದಲ್ಲಿ ರಾಜಾ ಶರ್ಯಾತಿಯ ಸೈನಿಕರ ಮಲ-ಮೂತ್ರಗಳು ಅವರೋಧವಾದುವು. ರಾಜರ್ಷಿ ಶರ್ಯಾತಿಗೆ ಇದನ್ನು ನೋಡಿ ಬಹಳ ಆಶ್ಚರ್ಯವಾಯಿತು. ಅವನು ಸೈನಿಕರಲ್ಲಿ ಕೇಳಿದನು – ॥ ೫ ॥ ಸೈನಿಕರೇ! ನೀವೇನಾದರೂ ಚ್ಯವನಮಹರ್ಷಿಯ ವಿಷಯದಲ್ಲಿ ಅನುಚಿತವಾಗಿ ವ್ಯವಹರಿಸಿದಿರಾ? ನಮ್ಮಲ್ಲಿ ಯಾರಾದರೂ ಅವರ ಆಶ್ರಮದಲ್ಲಿ ದುಷ್ಕಾರ್ಯವನ್ನು ಮಾಡಿರಬಹುದೆಂದು ನನಗೆ ಸ್ಪಷ್ಟವಾಗಿ ಕಾಣುತ್ತಿದೆ. ॥ ೬ ॥ ಆಗ ಸುಕನ್ಯೆಯು ತಂದೆಯ ಬಳಿಯಲ್ಲಿ ಹೆದರುತ್ತಲೇ ಹೇಳಿದಳು – ಅಪ್ಪಾ! ನಾನೇ ಅಪರಾಧವನ್ನು ಮಾಡಿಬಿಟ್ಟಿದ್ದೇನೆ. ನಾನು ಅರಿವಿಲ್ಲದೆ ಹುತ್ತದಲ್ಲಿ ಫಳ-ಫಳಿಸುತ್ತಿದ್ದ ಎರಡು ಜ್ಯೋತಿಗಳನ್ನು ಮುಳ್ಳಿನಿಂದ ತಿವಿದುಬಿಟ್ಟಿರುವೆನು. ॥ ೭ ॥ ಮಗಳ ಈ ಮಾತನ್ನು ಕೇಳಿ ಶರ್ಯಾತಿಗೆ ಬಹಳ ಭಯವಾಯಿತು. ಅವನು ಹುತ್ತದಲ್ಲಿದ್ದ (ಕಣ್ಣುಗಳನ್ನು ಕಳಕೊಂಡ) ಚ್ಯವನಮಹರ್ಷಿಯನ್ನು ಸ್ತೋತ್ರಮಾಡುತ್ತಾ ಸ್ವಲ್ಪ-ಸ್ವಲ್ಪವಾಗಿ ಅವನನ್ನು ಸಮಾಧಾನಗೊಳಿಸಿದನು. ॥ ೮ ॥ ಅನಂತರ ಚ್ಯವನಮುನಿಯ ಅಭಿಪ್ರಾಯವನ್ನು ಅರಿತು ಅವನು ತನ್ನ ಮಗಳನ್ನು ವಿವಾಹಮಾಡಿಕೊಟ್ಟನು. ಚ್ಯವನನ ಅನುಗ್ರಹದಿಂದ ಈ ಸಂಕಟದಿಂದ ಬಿಡುಗಡೆಹೊಂದಿ, ಸಮಾಧಾನಗೊಂಡ ಶರ್ಯಾತಿಯು ಅವರ ಅನುಮತಿಯನ್ನು ಪಡೆದು ತನ್ನ ರಾಜಧಾನಿಗೆ ಮರಳಿದನು. ॥ ೯ ॥

ಇತ್ತ ಸುಕನ್ಯೆಯು ಪರಮಕ್ರೋಧಿಯಾದ ಚ್ಯವನಋಷಿಯನ್ನು ತನ್ನ ಪತಿಯನ್ನಾಗಿ ಪಡೆದುಕೊಂಡು ಬಹಳ ಎಚ್ಚರಿಕೆಯಿಂದ ಅವರ ಸೇವೆಮಾಡುತ್ತಾ ಅವರನ್ನು ಸಂತೋಷಪಡಿಸುತ್ತಿದ್ದಳು. ಅವಳು ಅವರ ಮನೋವೃತ್ತಿಯನ್ನು ಅರಿತುಕೊಂಡು ಅದಕ್ಕನುಸಾರವಾಗಿಯೇ ವರ್ತಿಸುತ್ತಿದ್ದಳು. ॥ ೧೦ ॥

ಕಸ್ಯಚಿತ್ತ್ವಥ ಕಾಲಸ್ಯ ನಾಸತ್ಯಾವಾಶ್ರಮಾಗತೌ ।
ತೌ ಪೂಜಯಿತ್ವಾ ಪ್ರೋವಾಚ ವಯೋ ಮೇ ದತ್ತಮೀಶ್ವರೌ ॥ ೧೧ ॥

ಗ್ರಹಂ ಗ್ರಹೀಷ್ಯೇ ಸೋಮಸ್ಯ
ಯಜ್ಞೇ ವಾಮಪ್ಯಸೋಮಪೋಃ ।
ಕ್ರಿಯತಾಂ ಮೇ ವಯೋ ರೂಪಂ
ಪ್ರಮದಾನಾಂ ಯದೀಪ್ಸಿತಮ್ ॥ ೧೨ ॥

ಬಾಢಮಿತ್ಯೂಚತುರ್ವಿಪ್ರಮಭಿನಂದ್ಯ ಭಿಷಕ್ತಮೌ ।
ನಿಮಜ್ಜತಾಂ ಭವಾನಸ್ಮಿನ್ ಹ್ರದೇ ಸಿದ್ಧವಿನಿರ್ಮಿತೇ ॥ ೧೩ ॥

ಇತ್ಯುಕ್ತ್ವಾ ಜರಯಾ ಗ್ರಸ್ತದೇಹೋ ಧಮನಿಸಂತತಃ ।
ಹ್ರದಂ ಪ್ರವೇಶಿತೋಽಶ್ವಿಭ್ಯಾಂ ವಲೀಪಲಿತವಿಪ್ರಿಯಃ ॥ ೧೪ ॥

ಪುರುಷಾಸ್ತ್ರಯ ಉತ್ತಸ್ಥುರಪೀಚ್ಯಾ ವನಿತಾಪ್ರಿಯಾಃ ।
ಪದ್ಮಸ್ರಜಃ ಕುಂಡಲಿನಸ್ತುಲ್ಯರೂಪಾಃ ಸುವಾಸಸಃ ॥ ೧೫ ॥

ತಾನ್ನಿರೀಕ್ಷ್ಯ ವರಾರೋಹಾ ಸರೂಪಾನ್ಸೂರ್ಯವರ್ಚಸಃ ।
ಅಜಾನತೀ ಪತಿಂ ಸಾಧ್ವೀ ಅಶ್ವಿನೌ ಶರಣಂ ಯಯೌ ॥ ೧೬ ॥

ದರ್ಶಯಿತ್ವಾ ಪತಿಂ ತಸ್ಯೈ ಪಾತಿವ್ರತ್ಯೇನ ತೋಷಿತೌ ।
ಋಷಿಮಾಮಂತ್ರ್ಯ ಯಯತುರ್ವಿಮಾನೇನ ತ್ರಿವಿಷ್ಟಪಮ್ ॥ ೧೭ ॥

ಯಕ್ಷ್ಯಮಾಣೋಽಥ ಶರ್ಯಾತಿಶ್ಚ್ಯವನಸ್ಯಾಶ್ರಮಂ ಗತಃ ।
ದದರ್ಶ ದುಹಿತುಃ ಪಾರ್ಶ್ವೇ ಪುರುಷಂ ಸೂರ್ಯವರ್ಚಸಮ್ ॥ ೧೮ ॥

ರಾಜಾ ದುಹಿತರಂ ಪ್ರಾಹ ಕೃತಪಾದಾಭಿವಂದನಾಮ್ ।
ಆಶಿಷಶ್ಚಾಪ್ರಯುಂಜಾನೋ ನಾತಿಪ್ರೀತಮನಾ ಇವ ॥ ೧೯ ॥

ಚಿಕೀರ್ಷಿತಂ ತೇ ಕಿಮಿದಂ ಪತಿಸ್ತ್ವಯಾ
ಪ್ರಲಂಭಿತೋ ಲೋಕನಮಸ್ಕೃತೋ ಮುನಿಃ ।
ಯತ್ತ್ವಂ ಜರಾಗ್ರಸ್ತಮಸತ್ಯಸಮ್ಮತಂ
ವಿಹಾಯ ಜಾರಂ ಭಜಸೇಽಮುಮಧ್ವಗಮ್ ॥ ೨೦ ॥

ಕೆಲವು ಕಾಲ ಕಳೆದ ಬಳಿಕ ಒಮ್ಮೆ ಚ್ಯವನರ ಆಶ್ರಮಕ್ಕೆ ಅಶ್ವಿನೀ ಕುಮಾರರಿಬ್ಬರೂ ಆಗಮಿಸಿದರು. ಚ್ಯವನರು ಅವರಿಗೆ ಯಥೋಚಿತವಾಗಿ ಸತ್ಕಾರಗೈದು ಹೇಳಿದರು – ನೀವಿಬ್ಬರೂ ಸಮರ್ಥರಾಗಿದ್ದೀರಿ. ಆದ್ದರಿಂದ ನನ್ನನ್ನು ಯುವಕನನ್ನಾಗಿಸಿರಿ. ನನ್ನ ರೂಪ ಹಾಗೂ ವಯಸ್ಸು ಯುವತಿಸ್ತ್ರೀಯರೂ ಬಯಸುವಂತೆ ಸುಂದರವಾಗಿಸಿರಿ. ನಿಮಗೆ ಸೋಮಪಾನದ ಅಧಿಕಾರವಿಲ್ಲ ಎಂಬುದನ್ನೂ ನಾನು ಬಲ್ಲೆನು. ಹೀಗಿದ್ದರೂ ನಾನು ನಿಮಗೆ ಸೋಮರಸದ ಪಾಲನ್ನು ಕೊಡುವೆನು. ॥ ೧೧-೧೨ ॥ ವೈದ್ಯಶಿರೋಮಣಿಗಳಾದ ಅಶ್ವಿನೀಕುಮಾರರು ಚ್ಯವನಮಹರ್ಷಿಯನ್ನು ಅಭಿನಂದಿಸುತ್ತಾ 'ಹಾಗೇ ಆಗಲಿ' ಎಂದು ಹೇಳಿದರು. ಅನಂತರ 'ಇದು ಸಿದ್ಧರ ಮೂಲಕ ನಿರ್ಮಾಣಗೊಂಡ ಒಂದು ಕುಂಡವಾಗಿದೆ. ಇದರಲ್ಲಿ ನೀವು ಸ್ನಾನಮಾಡಿರಿ' ಎಂದು ಹೇಳಿದರು. ॥ ೧೩ ॥ ಚ್ಯವನ ಮುನಿಯ ಶರೀರದಲ್ಲಿ ಮುದಿತನವು ಆವರಿಸಿತ್ತು. ಮೂಳೆ-ನರಗಳು ಎದ್ದು ಕಾಣುತ್ತಿದ್ದವು. ಚರ್ಮ ಸುಕ್ಕುಗಟ್ಟಿತ್ತು. ಕೂದಲು ಹಣ್ಣಾದ್ದರಿಂದ ಕುರೂಪಿಗಳಂತೆ ಕಾಣುತ್ತಿದ್ದರು. ಅಶ್ವಿನೀ ಕುಮಾರರು ಅವರನ್ನು ತನ್ನ ಜೊತೆಗೆ ಕರೆದುಕೊಂಡು ಹೋಗಿ ಕುಂಡದಲ್ಲಿ ಪ್ರವೇಶಿಸಿದರು. ॥ ೧೪ ॥ ಆ ಸಮಯದಲ್ಲಿ ಕುಂಡದಿಂದ ಮೂವರು ಪುರುಷರು ಹೊರಬಂದರು. ಅವರು ಮೂವರೂ ಕಮಲಗಳ ಮಾಲೆಯನ್ನೂ, ಕುಂಡಲ ಮತ್ತು ಸುಂದರವಾದ ವಸ್ತ್ರಗಳನ್ನು ಧರಿಸಿದ್ದು, ಒಂದೇ ರೀತಿಯಾಗಿ ಕಂಡು ಬರುತ್ತಿದ್ದರು. ಅವರು ಅತೀವ ಸುಂದರರಾಗಿದ್ದು ಸ್ತ್ರೀಯರಿಗೆ ಪ್ರಿಯದರ್ಶನರಾಗಿದ್ದರು. ॥ ೧೫ ॥ ಪರಮಸಾಧ್ವಿಯಾದ ಸುಂದರಿಯಾದ ಸುಕನ್ಯೆಯು – ಈ ಮೂವರೂ ಒಂದೇ ರೂಪವುಳ್ಳವರಾಗಿದ್ದು, ಸೂರ್ಯನಂತೆ ತೇಜಸ್ವಿಗಳಾಗಿರುವುದನ್ನು ನೋಡಿದಾಗ ತನ್ನ ಪತಿಯನ್ನು ಗುರುತಿಸಲಾರದೆ ಅವಳು ಅಶ್ವಿನೀ ಕುಮಾರರನ್ನೇ ಶರಣು ಹೊಂದಿದಳು. ॥ ೧೬ ॥ ಅವಳ ಪಾತಿವ್ರತ್ಯದಿಂದ ಅಶ್ವಿನೀಕುಮಾರರು ಪರಮಸಂತುಷ್ಟರಾದರು. ಅವರು ಅವಳ ಪತಿಯನ್ನು ತೋರಿಸಿಕೊಟ್ಟು, ಮತ್ತೆ ಚ್ಯವನರಿಂದ ಅನುಮತಿಯನ್ನು ಪಡೆದು ವಿಮಾನದ ಮೂಲಕ ಅವರು ಸ್ವರ್ಗಕ್ಕೆ ಹೊರಟು ಹೋದರು. ॥ ೧೭ ॥

ಕೆಲಕಾಲದ ನಂತರ ಯಜ್ಞಮಾಡುವ ಇಚ್ಛೆಯಿಂದ ಶರ್ಯಾತಿ ರಾಜನು ಚ್ಯವನಮುನಿಯ ಆಶ್ರಮಕ್ಕೆ ಬಂದನು. ಅಲ್ಲಿ ತನ್ನ ಮಗಳು ಸುಕನ್ಯೆಯ ಬಳಿಯಲ್ಲಿ ಸೂರ್ಯನಂತೆ ತೇಜಸ್ವಿ ಪುರುಷನೊಬ್ಬನು ಕುಳಿತಿರುವುದನ್ನು ಕಂಡನು. ॥ ೧೮ ॥ ಸುಕನ್ಯೆಯು ತಂದೆಯ ಚರಣಗಳಿಗೆ ವಂದಿಸಿಕೊಂಡಳು. ಶರ್ಯಾತಿಯು ಅವಳಿಗೆ ಆಶೀರ್ವದಿಸದೆ ಸ್ವಲ್ಪ ಅಸಂತೋಷವನ್ನು ವ್ಯಕ್ತಪಡಿಸುತ್ತಾ ಹೇಳಿದನು – ॥ ೧೯ ॥ ಎಲೈ ದುಷ್ಟಳೇ! ನೀನು ಇದೇನು ಮಾಡಿಬಿಟ್ಟೆ? ಲೋಕನಮಸ್ಕೃತನಾದ ಚ್ಯವನಮುನಿಯನ್ನು ವಂಚಿಸಿಬಿಟ್ಟೆಯಾ? ನೀನು ಖಂಡಿತವಾಗಿ ಇವನು ಮುದುಕನೂ, ನಿಷ್ಪ್ರಯೋಜಕನೂ ಎಂದು ತಿಳಿದು ತ್ಯಜಿಸಿ, ಈ ದಾರಿಹೋಕ ಜಾರ ಪುರುಷನನ್ನು ಸೇವಿಸುತ್ತಿರುವೆಯಲ್ಲ? ॥ ೨೦ ॥

ಕಥಂ ಮತಿಸ್ತೇಽವಗತಾನ್ಯಥಾ ಸತಾಂ
ಕುಲಪ್ರಸೂತೇ ಕುಲದೂಷಣಂ ತ್ವಿದಮ್ ।
ಬಿಭರ್ಷಿ ಜಾರಂ ಯದಪತ್ರಪಾ ಕುಲಂ
ಪಿತುಶ್ಚ ಭರ್ತುಶ್ಚ ನಯಸ್ಯಧಸ್ತಮಃ ॥ ೨೧ ॥

ಏವಂ ಬ್ರುವಾಣಂ ಪಿತರಂ ಸ್ಮಯಮಾನಾ ಶುಚಿಸ್ಮಿತಾ ।
ಉವಾಚ ತಾತ ಜಾಮಾತಾ ತವೈಷ ಭೃಗುನಂದನಃ ॥ ೨೨ ॥

ಶಶಂಸ ಪಿತ್ರೇ ತತ್ಸರ್ವಂ ವಯೋರೂಪಾಭಿಲಂಭನಮ್ ।
ವಿಸ್ಮಿತಃ ಪರಮಪ್ರೀತಸ್ತನಯಾಂ ಪರಿಷಸ್ವಜೇ ॥ ೨೩ ॥

ಸೋಮೇನ ಯಾಜಯನ್ವೀರಂ ಗ್ರಹಂ ಸೋಮಸ್ಯ ಚಾಗ್ರಹೀತ್ ।
ಅಸೋಮಪೋರಪ್ಯಶ್ವಿನೋಶ್ಚ್ಯವನಃ ಸ್ವೇನ ತೇಜಸಾ ॥ ೨೪ ॥

ಹಂತುಂ ತಮಾದದೇ ವಜ್ರಂ ಸದ್ಯೋಮನ್ಯುರಮರ್ಷಿತಃ ।
ಸವಜ್ರಂ ಸ್ತಂಭಯಾಮಾಸ ಭುಜಮಿಂದ್ರಸ್ಯ ಭಾರ್ಗವಃ ॥ ೨೫ ॥

ಅನ್ವಜಾನಂಸ್ತತಃ ಸರ್ವೇ ಗ್ರಹಂ ಸೋಮಸ್ಯ ಚಾಶ್ವಿನೋಃ ।
ಭಿಷಜಾವಿತಿ ಯತ್ಪೂರ್ವಂ ಸೋಮಾಹುತ್ಯಾ ಬಹಿಷ್ಕೃತೌ ॥ ೨೬ ॥

ಉತ್ತಾನಬರ್ಹಿರಾನರ್ತೋ ಭೂರಿಷೇಣ ಇತಿ ತ್ರಯಃ ।
ಶರ್ಯಾತೇರಭವನ್ಪುತ್ರಾ ಆನರ್ತಾದ್ ರೇವತೋಽಭವತ್ ॥ ೨೭ ॥

ಸೋಽಂತಃಸಮುದ್ರೇ ನಗರೀಂ ವಿನಿರ್ಮಾಯ ಕುಶಸ್ಥಲೀಮ್ ।
ಆಸ್ಥಿತೋಽಭುಂಕ್ತ ವಿಷಯಾನಾನರ್ತಾದೀನರಿಂದಮ ॥ ೨೮ ॥

ತಸ್ಯ ಪುತ್ರಶತಂ ಜಜ್ಞೇ ಕಕುದ್ಮಿಜ್ಯೇಷ್ಠಮುತ್ತಮಮ್ ।
ಕಕುದ್ಮೀ ರೇವತೀಂ ಕನ್ಯಾಂ ಸ್ವಾಮಾದಾಯ ವಿಭುಂ ಗತಃ ॥ ೨೯ ॥

ಕನ್ಯಾವರಂ ಪರಿಪ್ರಷ್ಟುಂ ಬ್ರಹ್ಮಲೋಕಮಪಾವೃತಮ್ ।
ಆವರ್ತಮಾನೇ ಗಾಂಧರ್ವೇ ಸ್ಥಿತೋಽಲಬ್ಧಕ್ಷಣಃ ಕ್ಷಣಮ್ ॥ ೩೦ ॥

ತದಂತ ಆದ್ಯಮಾನಮ್ಯ ಸ್ವಾಭಿಪ್ರಾಯಂ ನ್ಯವೇದಯತ್ ।
ತಚ್ಛ್ರುತ್ವಾ ಭಗವಾನ್ಬ್ರಹ್ಮಾ ಪ್ರಹಸ್ಯ ತಮುವಾಚ ಹ ॥ ೩೧ ॥

ಅಹೋ ರಾಜನ್ನಿರುದ್ಧಾಸ್ತೇ ಕಾಲೇನ ಹೃದಿ ಯೇ ಕೃತಾಃ ।
ತತ್ಪುತ್ರಪೌತ್ರನಪ್ತೄಣಾಂ ಗೋತ್ರಾಣಿ ಚ ನ ಶೃಣ್ಮಹೇ ॥ ೩೨ ॥

ನೀನು ಶ್ರೇಷ್ಠ ಕುಲದಲ್ಲಿ ಹುಟ್ಟಿದವಳು. ಇಂತಹ ವಿಪರೀತ ಬುದ್ಧಿಯು ನಿನಗೆ ಹೇಗೆ ಉಂಟಾಯಿತು ? ನಿನ್ನ ಈ ವ್ಯವಹಾರ ವಾದರೋ ಕುಲಕಲಂಕಿತವಾಗಿದೆ. ಅಯ್ಯೋ! ಶಿವ ! ಶಿವಾ !! ನೀನು ನಿರ್ಲಜ್ಜಳಾಗಿ ಜಾರಪುರುಷನ ಸೇವೆ ಮಾಡುತ್ತಿರುವೆ. ಹೀಗೆ ತಂದೆಯ ಮತ್ತು ಪತಿಯ ಎರಡೂ ವಂಶಗಳನ್ನೂ ಘೋರ ನರಕಕ್ಕೆ ತಳ್ಳಿ ಬಿಟ್ಟಿರುವೆಯಲ್ಲ! ॥ ೨೧ ॥ ಶುಚಿಸ್ಮಿತೆಯಾದ ಸುಕನ್ಯೆಯು ಮುಗುಳ್ನಗುತ್ತಾ ತನ್ನನ್ನು ನಿಂದಿಸುತ್ತಿದ್ದ ತಂದೆ ಶರ್ಯಾತಿಗೆ ಹೇಳಿದಳು – ಅಪ್ಪಾ! ಇವರು ನಿಮ್ಮ ಅಳಿಯ ಭೃಗುನಂದನ ಚ್ಯವನ ಮಹರ್ಷಿಗಳೇ ಆಗಿದ್ದಾರೆ. ॥ ೨೨ ॥ ಅನಂತರ ಅವಳು ಮಹರ್ಷಿ ಚ್ಯವನರ ಯೌವನ ಮತ್ತು ಸೌಂದರ್ಯವು ದೊರೆತ ಎಲ್ಲ ವೃತ್ತಾಂತವನ್ನು ತಂದೆಯ ಬಳಿಯಲ್ಲಿ ಹೇಳಿದಳು. ಅದೆಲ್ಲವನ್ನೂ ಕೇಳಿ ಶರ್ಯಾತಿರಾಜನಿಗೆ ಅತ್ಯಂತ ವಿಸ್ಮಯವಾಯಿತು. ಅವನು ತುಂಬಾ ಪ್ರೇಮದಿಂದ ತನ್ನ ಮಗಳನ್ನು ಅಪ್ಪಿಕೊಂಡನು.॥ ೨೩ ॥

ಮಹರ್ಷಿ ಚ್ಯವನರು ವೀರಶರ್ಯಾತಿಯಿಂದ ಸೋಮ ಯಜ್ಞದ ಅನುಷ್ಠಾನವನ್ನು ಮಾಡಿಸಿ, ಸೋಮರಸದ ಅಧಿಕಾರಿಗಳಲ್ಲದಿದ್ದರೂ ಅಶ್ವಿನೀಕುಮಾರರಿಗೆ ತನ್ನ ಪ್ರಭಾವದಿಂದ ಸೋಮ ಪಾನ ಮಾಡಿಸಿದರು. ॥ ೨೪ ॥ ಇದನ್ನು ಸಹಿಸಿಕೊಳ್ಳಲಾರದೆ ಇಂದ್ರನು ಪರಮಕ್ರುದ್ಧನಾದನು. ಶರ್ಯಾತಿಯನ್ನು ಕೊಲ್ಲಲಿಕ್ಕಾಗಿ ವಜ್ರಾಯುಧವನ್ನೇ ಮೇಲೆತ್ತಿಕೊಂಡನು. ಮಹರ್ಷಿಚ್ಯವನರು ವಜ್ರದೊಂದಿಗೆ ಅವನ ಕೈಯನ್ನು ಹಾಗೆಯೇ ಸ್ತಂಭಿಸಿಬಿಟ್ಟರು. ॥ ೨೫ ॥ ಆಗ ಎಲ್ಲ ದೇವತೆಗಳು ಅಶ್ವಿನೀಕುಮಾರರಿಗೆ ಸೋಮಪಾನದ ಪಾಲನ್ನು ಕೊಡಲು ಒಪ್ಪಿಕೊಂಡರು. ವೈದ್ಯರಾಗಿದ್ದ ಕಾರಣ ಮೊದಲು ಅವರು ಸೋಮಪಾನದಿಂದ ಬಹಿಷ್ಕೃತರಾಗಿದ್ದರು. ॥ ೨೬ ॥

ಪರೀಕ್ಷಿತನೇ! ಶರ್ಯಾತಿಗೆ ಉತ್ತಾನಬರ್ಹಿ, ಆನರ್ತ ಮತ್ತು ಭೂರಿಷೇಣರೆಂಬ ಮೂವರು ಪುತ್ರರಿದ್ದರು. ಆನರ್ತನಿಗೆ ರೇವತನೆಂಬ ಮಗನಿದ್ದನು. ॥ ೨೭ ॥ ರಾಜೇಂದ್ರ ! ರೇವತನು ಸಮುದ್ರದ ಮಧ್ಯದಲ್ಲಿ ಕುಶಸ್ಥಲೀ ಎಂಬ ಹೆಸರಿನ ಒಂದು ನಗರವನ್ನು ನಿರ್ಮಿಸಿದನು. ಅದರಲ್ಲೇ ವಾಸಿಸುತ್ತಾ ಆನರ್ತ ಮುಂತಾದ ದೇಶಗಳನ್ನು ಆಳುತ್ತಿದ್ದನು. ॥ ೨೮ ॥ ರೇವತನಿಗೆ ನೂರು ಮಂದಿ ಶ್ರೇಷ್ಠ ಮಕ್ಕಳು ಇದ್ದರು. ಅವರಲ್ಲಿ ಹಿರಿಯವನು ಕಕುದ್ಮಿಯಾಗಿದ್ದನು. ಕಕುದ್ಮಿಯು ತನ್ನ ಮಗಳಾದ ರೇವತಿಯನ್ನು ಕರೆದುಕೊಂಡು ಅವಳಿಗೆ ಯೋಗ್ಯನಾದ ವರನ ಕುರಿತು ವಿಚಾರಿಸಲು ಬ್ರಹ್ಮದೇವರ ಬಳಿಗೆ ಹೋದನು. ಆಗಿನ ಕಾಲದಲ್ಲಿ ಬ್ರಹ್ಮಲೋಕದ ರಹ ದಾರಿಯು ಇಂತಹವರಿಗೆ ಮುಕ್ತವಾಗಿತ್ತು. ಬ್ರಹ್ಮಲೋಕದಲ್ಲಿ ಆಗ ಸಂಗೀತ ಉತ್ಸವವು ನಡೆಯುತ್ತಿತ್ತು. ಅದರಿಂದ ಬ್ರಹ್ಮನೊಡನೆ ಮಾತನಾಡಲು ಅವಕಾಶ ಸಿಗಲಿಲ್ಲ; ಸ್ವಲ್ಪಹೊತ್ತು ಅಲ್ಲೇ ಕಾಯಬೇಕಾಯಿತು. ॥ ೨೯-೩೦ ॥ ಸಂಗೀತೋತ್ಸವದ ಕೊನೆಯಲ್ಲಿ ಬ್ರಹ್ಮದೇವರಿಗೆ ನಮಸ್ಕರಿಸಿ ಕಕುದ್ಮಿಯು ತನ್ನ ಅಭಿಪ್ರಾಯವನ್ನು ನಿವೇದಿಸಿಕೊಂಡನು. ಅವನ ಮಾತನ್ನು ಕೇಳಿ ಬ್ರಹ್ಮನು ನಕ್ಕು ಅವನಲ್ಲಿ ಹೇಳಿದರು –॥ ೩೧ ॥ 'ಮಹಾರಾಜನೇ! ನೀನು ಮನಸ್ಸಿನಲ್ಲಿ ಯಾವ ರಾಜಕುಮಾರರ ಕುರಿತು ಯೋಚಿಸಿದ್ದಿಯೋ ಅವರೆಲ್ಲರೂ ಕಾಲವಶರಾಗಿರುವರು. ಈಗ ಅವರ ಮಕ್ಕಳು, ಮೊಮ್ಮಕ್ಕಳು ಅಥವಾ ಸಂಬಂಧಿಗಳೇ ಏನು, ಆ ಗೋತ್ರದ ಹೆಸರೂ ಕೂಡ ಈಗ ಕೇಳುವಂತಿಲ್ಲ. ॥ ೩೨ ॥

ಕಾಲೋಽಭಿಯಾತಸ್ತ್ರಿಣವಚತುರ್ಯುಗವಿಕಲ್ಪಿತಃ ।
ತದ್ಗಚ್ಛ ದೇವದೇವಾಂಶೋ ಬಲದೇವೋ ಮಹಾಬಲಃ
॥ ೩೩ ॥

ಕನ್ಯಾರತ್ನಮಿದಂ ರಾಜನ್ ನರರತ್ನಾಯ ದೇಹಿ ಭೋಃ ।
ಭುವೋ ಭಾರಾವತಾರಾಯ ಭಗವಾನ್ಭೂತಭಾವನಃ
॥ ೩೪ ॥

ಅವತೀರ್ಣೋ ನಿಜಾಂಶೇನ ಪುಣ್ಯಶ್ರವಣಕೀರ್ತನಃ ।
ಇತ್ಯಾದಿಷ್ಟೋಽಭಿವಂದ್ಯಾಜಂ ನೃಪಃ ಸ್ವಪುರಮಾಗತಃ ।
ತ್ಯಕ್ತಂ ಪುಣ್ಯಜನತ್ರಾಸಾದ್ ಭ್ರಾತೃಭಿರ್ದಿಕ್ಷ್ವವಸ್ಥಿತೈಃ
॥ ೩೫ ॥

ಸುತಾಂ ದತ್ತ್ವಾನವದ್ಯಾಂಗೀಂ ಬಲಾಯ ಬಲಶಾಲಿನೇ ।
ಬದರ್ಯಾಖ್ಯಂ ಗತೋ ರಾಜಾ ತಪ್ತುಂ ನಾರಾಯಣಾಶ್ರಮಮ್
॥ ೩೬ ॥

ಇಷ್ಟರೊಳಗೆ ಇಪ್ಪತ್ತೇಳು ಚತುರ್ಯುಗಗಳ ಸಮಯವು ಕಳೆದುಹೋಗಿದೆ. ಆದಕ್ಕಾಗಿ ನೀನು ಭೂಲೋಕಕ್ಕೆ ಹೋಗು. ಈಗ ಭಗವಾನ್ ನಾರಾಯಣನ ಅಂಶಾವತಾರ ಮಹಾಬಲಾಢ್ಯನಾದ ಬಲರಾಮದೇವನು ಆಳುತ್ತಿದ್ದಾನೆ. ॥ ೩೩ ॥ ರಾಜನೇ! ಈ ಕನ್ಯಾರತ್ನವನ್ನು ಆ ನರಶ್ರೇಷ್ಠನಾದ ಬಲರಾಮನಿಗೆ ಸಮರ್ಪಿಸಿ ಬಿಡು. ಅವನ ನಾಮ, ಲೀಲಾದಿಗಳು, ಶ್ರವಣ-ಕೀರ್ತನಗಳು ಬಹಳ ಪವಿತ್ರವಾದವುಗಳು. ಪ್ರಾಣಿಗಳ ಜೀವನ ಸರ್ವಸ್ವನಾದ ಆ ಭಗವಂತನೇ ಭೂಭಾರವನ್ನು ಇಳುಹಲೋಸುಗ ತನ್ನ ಅಂಶದಿಂದ ಅವತರಿಸಿರುವನು.' ಕಕುದ್ಮಿ ಮಹಾರಾಜನು ಬ್ರಹ್ಮದೇವರ ಅಪ್ಪಣೆ ಯನ್ನು ಪಡೆದು, ಅವನ ಚರಣಗಳಿಗೆ ವಂದಿಸಿ ತನ್ನ ಊರಿಗೆ ಮರಳಿದನು. ಅವನ ವಂಶಜರು ಯಕ್ಷರ ಭಯದಿಂದ ಆ ನಗರ ವನ್ನು ಬಿಟ್ಟು ಅಲ್ಲಲ್ಲಿ ವಾಸಮಾಡುತ್ತಿದ್ದಾರೆ. ॥ ೩೪-೩೫ ॥ ರಾಜಾ ಕಕುದ್ಮಿಯು ಸರ್ವಾಂಗಸುಂದರಿಯಾದ ತನ್ನ ಮಗಳನ್ನು ಮಹಾ ಬಲಶಾಲಿಯಾದ ಬಲರಾಮದೇವನಿಗೆ ವಿವಾಹಮಾಡಿ ಕೊಟ್ಟು, ತಾನು ತಪಸ್ಸಿಗಾಗಿ ಭಗವಾನ್ ನರ-ನಾರಾಯಣರ ಬದರಿ ಕಾಶ್ರಮಕ್ಕೆ ತೆರಳಿದನು. ॥ ೩೬ ॥

*ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ
ತೃತೀಯೋಽಧ್ಯಾಯಃ ॥ ೩ ॥

# ನಾಲ್ಕನೆಯ ಅಧ್ಯಾಯ

## ನಾಭಾಗ ಮತ್ತು ಅಂಬರೀಷರ ಕಥೆ

*ಶ್ರೀಶುಕ ಉವಾಚ*

ನಾಭಾಗೋ ನಭಗಾಪತ್ಯಂ ಯಂ ತತಂ ಭ್ರಾತರಃ ಕವಿಮ್ ।
ಯವಿಷ್ಠಂ ವ್ಯಭಜನ್ ದಾಯಂ ಬ್ರಹ್ಮಚಾರಿಣಮಾಗತಮ್
॥ ೧ ॥

ಭ್ರಾತರೋಽಭಾಂಕ್ತ ಕಿಂ ಮಹ್ಯಂ ಭಜಾಮ ಪಿತರಂ ತವ ।
ತ್ವಾಂ ಮಮಾರ್ಯಾಸ್ತತಾಭಾಂಕ್ಷುರ್ಮಾ ಪುತ್ರಕ ತದಾದೃಥಾಃ
॥ ೨ ॥

ಇಮೇ ಅಂಗಿರಸಃ ಸತ್ರಮಾಸತೇಽದ್ಯ ಸುಮೇಧಸಃ ।
ಷಷ್ಠಂ ಷಷ್ಠಮುಪೇತ್ಯಾಹಃ ಕವೇ ಮುಹ್ಯಂತಿ ಕರ್ಮಣಿ
॥ ೩ ॥

ತಾಂಸ್ತ್ವಂ ಶಂಸಯ ಸೂಕ್ತೇ ದ್ವೇ ವೈಶ್ವದೇವೇ ಮಹಾತ್ಮನಃ ।
ತೇ ಸ್ವರ್ಯಂತೋ ಧನಂ ಸತ್ರಪರಿಶೇಷಿತಮಾತ್ಮನಃ
॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಮನುಪುತ್ರನಾದ ನಭಗನಿಗೆ ನಾಭಾಗನೆಂಬ ಕಿರಿಯ ಮಗನಿದ್ದನು. ಅವನು ಬಹಳ ಕಾಲದವರೆಗೆ ಬ್ರಹ್ಮಚರ್ಯವ್ರತದಲ್ಲಿದ್ದು ಮಹಾ ವಿದ್ವಾಂಸನಾಗಿ ಮನೆಗೆ ಮರಳಿದನು. ॥ ೧ ॥ ಆಗ ಅವನು ಕೇಳಿ ದನು – ಸೋದರರೇ! ನೀವು ನನ್ನ ಪಾಲನ್ನು ಏನು ಕೊಟ್ಟಿರುವಿರಿ? ಆಗ ಅವರು ನಿನಗೆ ನಿನ್ನ ಪಾಲಾಗಿ ತಂದೆಯವರನ್ನೇ ಕೊಟ್ಟಿರುವೆವು ಎಂದು ಹೇಳಿದರು. ಅವನು ತಂದೆಯ ಬಳಿಗೆ ಹೋಗಿ ವಿಚಾರಿಸಿ ದನು – ಅಪ್ಪಾ! ನನ್ನ ಅಣ್ಣಂದಿರು ನನ್ನ ಪಾಲಿನಲ್ಲಿ ನಿಮ್ಮನ್ನೇ ಕೊಟ್ಟಿರುವರು. ತಂದೆ ಹೇಳಿದನು – 'ಮಗೂ! ನೀನು ಇವರ ಮಾತನ್ನು ಕೇಳಬೇಡ. ॥ ೨ ॥ ನಿನ್ನ ಜೀವನೋಪಾಯಕ್ಕೊಂದು ಮಾರ್ಗವನ್ನು ಸೂಚಿಸುವೆನು. ಒಳ್ಳೆಯ ಮೇಧಾವಂತರಾದ ಅಂಗಿರಸರು ಈಗ ಒಂದು ದೊಡ್ಡ ಯಜ್ಞವನ್ನು ಮಾಡುತ್ತಿದ್ದಾರೆ. ಅವರು ಬುದ್ಧಿವಂತರೆಂಬುದೂ ಸತ್ಯ. ಆದರೆ ಅವರು ಆರನೆಯ ದಿನ ತಮ್ಮ ಕರ್ಮಗಳನ್ನು ಮರೆತು ಕಿಂಕರ್ತವ್ಯಮೂಢ ರಾಗುವರು. ॥ ೩ ॥ ಮಗೂ! ನೀನು ಆ ಮಹಾತ್ಮರ ಬಳಿಗೆ ಹೋಗಿ ಅವರಿಗೆ ವೈಶ್ವದೇವ ಸಂಬಂಧಿ ಎರಡು ಸೂಕ್ತಗಳನ್ನು ಉಪ ದೇಶಿಸು. ಆದರಿಂದ ಅವರು ಸ್ವರ್ಗಕ್ಕೆ ಹೋಗುವಾಗ ಯಜ್ಞದಲ್ಲಿ ಉಳಿದಿರುವ ತಮ್ಮ ಸಕಲ ಧನವನ್ನೂ ನಿನಗೆ ಕೊಡುವರು.

ದಾಸ್ಯಂತಿ ತೇಽಥ ತಾನ್ ಗಚ್ಛ ತಥಾ ಸ ಕೃತವಾನ್ಯಥಾ ।
ತಸ್ಮೈ ದತ್ತ್ವಾ ಯಯುಃ ಸ್ವರ್ಗಂ ತೇ ಸತ್ರಪರಿಶೇಷಿತಮ್
॥ ೫ ॥

ತಂ ಕಶ್ಚಿತ್ ಸ್ವೀಕರಿಷ್ಯಂತಂ ಪುರುಷಃ ಕೃಷ್ಣದರ್ಶನಃ ।
ಉವಾಚೋತ್ತರತೋಽಭ್ಯೇತ್ಯ ಮಮೇದಂ ವಾಸ್ತುಕಂ ವಸು
॥ ೬ ॥

ಮಮೇದಮೃಷಿಭಿರ್ದತ್ತಮಿತಿ ತರ್ಹಿ ಸ್ಮ ಮಾನವಃ ।
ಸ್ಯಾನ್ನೌ ತೇ ಪಿತರಿ ಪ್ರಶ್ನಃ ಪೃಷ್ಟವಾನ್ ಪಿತರಂ ತಥಾ
॥ ೭ ॥

ಯಜ್ಞವಾಸ್ತುಗತಂ ಸರ್ವಮುಚ್ಛಿಷ್ಟಮೃಷಯಃ ಕ್ವಚಿತ್ ।
ಚಕ್ರುರ್ವಿಭಾಗಂ ರುದ್ರಾಯ ಸ ದೇವಃ ಸರ್ವಮರ್ಹತಿ
॥ ೮ ॥

ನಾಭಾಗಸ್ತಂ ಪ್ರಣಮ್ಯಾಹ ತವೇಶ ಕಿಲ ವಾಸ್ತುಕಮ್ ।
ಇತ್ಯಾಹ ಮೇ ಪಿತಾ ಬ್ರಹ್ಮಂಛಿರಸಾ ತ್ವಾಂ ಪ್ರಸಾದಯೇ
॥ ೯ ॥

ಯತ್ತೇ ಪಿತಾವದದ್ಧರ್ಮಂ ತ್ವಂ ಚ ಸತ್ಯಂ ಪ್ರಭಾಷಸೇ ।
ದದಾಮಿ ತೇ ಮಂತ್ರದೃಶೇ ಜ್ಞಾನಂ ಬ್ರಹ್ಮ ಸನಾತನಮ್
॥ ೧೦ ॥

ಗೃಹಾಣ ದ್ರವಿಣಂ ದತ್ತಂ ಮತ್ಸತ್ರೇ ಪರಿಶೇಷಿತಮ್ ।
ಇತ್ಯುಕ್ತ್ವಾಂತರ್ಹಿತೋ ರುದ್ರೋ ಭಗವಾನ್ ಸತ್ಯವತ್ಸಲಃ
॥ ೧೧ ॥

ಯ ಏತತ್ಸಂಸ್ಮರೇತ್ ಪ್ರಾತಃ ಸಾಯಂ ಚ ಸುಸಮಾಹಿತಃ ।
ಕವಿರ್ಭವತಿ ಮಂತ್ರಜ್ಞೋ ಗತಿಂ ಚೈವ ತಥಾಽಽತ್ಮನಃ
॥ ೧೨ ॥

ನಾಭಾಗಾದಂಬರೀಷೋಽಭೂನ್ಮಹಾಭಾಗವತಃ ಕೃತೀ ।
ನಾಸ್ಪೃಶದ್ ಬ್ರಹ್ಮಶಾಪೋಽಪಿ ಯಂ ನ ಪ್ರತಿಹತಃ ಕ್ವಚಿತ್
॥ ೧೩ ॥

ರಾಜೋವಾಚ

ಭಗವನ್ ಶ್ರೋತುಮಿಚ್ಛಾಮಿ ರಾಜರ್ಷೇಸ್ತಸ್ಯ ಧೀಮತಃ ।
ನ ಪ್ರಾಭೂದ್ಯತ್ರ ನಿರ್ಮುಕ್ತೋ ಬ್ರಹ್ಮದಂಡೋ ದುರತ್ಯಯಃ
॥ ೧೪ ॥

ಅದಕ್ಕಾಗಿ ನೀನು ಈಗಲೇ ಅವರ ಬಳಿಗೆ ಹೋಗು.' ತಂದೆಯ ಆದೇಶದಂತೆ ನಾಭಾಗನು ಹಾಗೆ ಮಾಡಿದನು. ಆ ಅಂಗೀರಸರೂ ಕೂಡ ಯಜ್ಞಶಿಷ್ಟಭಾಗವನ್ನು ಅವನಿಗೆ ಕೊಟ್ಟು ಸ್ವರ್ಗಕ್ಕೆ ಹೊರಟುಹೋದರು. ॥ ೪-೫ ॥

ನಾಭಾಗನು ಆ ಧನವನ್ನು ತೆಗೆದುಕೊಳ್ಳತೊಡಗಿದಾಗ ಉತ್ತರದ ಕಡೆಯಿಂದ ಓರ್ವ ಕಪ್ಪಾದ ಪುರುಷನು ಬಂದನು. ಅವನು ಹೇಳಿದನು – 'ಈ ಯಜ್ಞಭೂಮಿಯಲ್ಲಿ ಉಳಿದೆಲ್ಲ ಧನಭಾಗವೂ ನನ್ನದಾಗಿದೆ.' ॥ ೬ ॥

ನಾಭಾಗನು ಹೇಳಿದನು – 'ಋಷಿಗಳು ಈ ಧನವನ್ನು ನನಗೆ ಕೊಟ್ಟಿರುವರು, ಅದಕ್ಕಾಗಿ ನನ್ನದಾಗಿದೆ.' ಆಗ ಆ ಪುರುಷನು ಹೇಳಿದನು – ನಮ್ಮ ಈ ವಿವಾದವು ನಿನ್ನ ತಂದೆಯಮುಂದೆ ಇಡಲ್ಪಡಲಿ. ನಾಭಾಗನು ಅದರಂತೆ ತಂದೆಯ ಬಳಿಗೆ ಹೋಗಿ ಕೇಳಿದನು – ॥ ೭ ॥ ತಂದೆಯು ಹೇಳಿದನು – 'ಒಮ್ಮೆ ದಕ್ಷ ಪ್ರಜಾಪತಿಯ ಯಜ್ಞದಲ್ಲಿ – 'ಯಜ್ಞಭೂಮಿಯಲ್ಲಿ ಉಳಿದೆಲ್ಲವೂ ರುದ್ರದೇವರ ಪಾಲು ಆಗಿದೆ' ಎಂದು ನಿಶ್ಚಯಿಸಿಬಿಟ್ಟಿರುವರು. ಅದಕ್ಕಾಗಿ ಈ ಧನವಾದರೋ ಮಹಾದೇವನಿಗೇ ಸಿಗಬೇಕು.' ॥ ೮ ॥ ನಾಭಾಗನು ಹೋಗಿ ಆ ಕಪ್ಪಾದ ಪುರುಷನಾದ ಭಗವಾನ್ ರುದ್ರದೇವರಿಗೆ ನಮಸ್ಕಾರಮಾಡಿ ಹೇಳಿದನು – ಸ್ವಾಮಿ ! ಯಜ್ಞಭೂಮಿಯ ಎಲ್ಲ ವಸ್ತುಗಳೂ ತಮ್ಮದೇ ಆಗಿವೆ ಎಂದು ನನ್ನ ತಂದೆಯವರು ಹೇಳಿರುವರು. ಭಗವಂತಾ ! ನನ್ನಿಂದ ಅಪರಾಧವಾಯಿತು. ನಾನು ತಲೆಬಾಗಿ ತಮ್ಮಲ್ಲಿ ಕ್ಷಮೆಯನ್ನು ಯಾಚಿಸುತ್ತೇನೆ. ॥ ೯ ॥ ಆಗ ಭಗವಾನ್ ರುದ್ರದೇವರು ಹೇಳಿದರು – 'ನಿನ್ನ ತಂದೆಯು ಧರ್ಮಕ್ಕೆ ಅನುಕೂಲವಾದ ನಿರ್ಣಯವನ್ನೇ ಕೊಟ್ಟಿರುವನು. ನೀನೂ ಕೂಡ ನನ್ನಲ್ಲಿ ಸತ್ಯವನ್ನೇ ನುಡಿದಿರುವೆ. ನೀನು ವೇದಗಳ ಅರ್ಥವನ್ನಾದರೋ ಮೊದಲಿನಿಂದಲೇ ತಿಳಿದಿರುವೆ. ಈಗ ನಾನು ನಿನಗೆ ಸನಾತನ ಬ್ರಹ್ಮತತ್ತ್ವದ ಜ್ಞಾನವನ್ನು ಉಪದೇಶಿಸುವೆನು. ॥ ೧೦ ॥ ಇಲ್ಲಿ ಯಜ್ಞದಲ್ಲಿ ಉಳಿದಿರುವ ನನ್ನ ಅಂಶವಾದ ಈ ಧನವನ್ನೂ ನಿನಗೇ ಕೊಡುತ್ತಿದ್ದೇನೆ. ನೀನು ಇದನ್ನು ಸ್ವೀಕರಿಸು.' ಇಷ್ಟು ಹೇಳಿ ಸತ್ಯಪ್ರಿಯ ಭಗವಾನ್ ರುದ್ರದೇವನು ಅಂತರ್ಧಾನನಾದನು. ॥ ೧೧ ॥ ಪ್ರಾತಃಕಾಲ-ಸಾಯಂಕಾಲಗಳಲ್ಲಿ ಏಕಾಗ್ರ ಚಿತ್ತದಿಂದ ಈ ಆಖ್ಯಾನವನ್ನು ಸ್ಮರಿಸುವ ಮನುಷ್ಯನು ಪ್ರತಿಭಾಶಾಲಿಯಾಗಿ, ವೇದಜ್ಞನಾಗುವನು ; ಜೊತೆಗೆ ತನ್ನ ಸ್ವಸ್ವರೂಪವನ್ನೂ ಅರಿತುಕೊಳ್ಳುವನು. ॥ ೧೨ ॥ ನಾಭಾಗನಿಗೆ ಅಂಬರೀಷನೆಂಬ ಪುತ್ರನಾದನು. ಅವನು ಭಗವತ್ಪ್ರೇಮಿಯೂ, ಧರ್ಮಾತ್ಮನೂ, ಭಾಗವತೋತ್ತಮನೂ ಆಗಿದ್ದನು. ಎಂದಿಗೂ ತಡೆಯಲು ಅಶಕ್ಯವಾದ ಬ್ರಹ್ಮಶಾಪವೂ ಕೂಡ ಅಂಬರೀಷನನ್ನು ಸ್ಪರ್ಶಿಸಲಾರದೆ ಹೋಯಿತು. ॥ ೧೩ ॥

ಪರೀಕ್ಷಿದ್ರಾಜನು ಕೇಳಿದನು – ಮಹಾಮುನಿಗಳೇ ! ಪರಮ ಜ್ಞಾನಿಯಾದ ರಾಜರ್ಷಿ ಅಂಬರೀಷನ ಚರಿತ್ರವನ್ನು ನಾನು ಕೇಳಲು ಬಯಸುತ್ತಿರುವೆನು. ಬ್ರಾಹ್ಮಣನು ಕ್ರೋಧಗೊಂಡು ಯಾವ ರೀತಿಯಿಂದಲೂ ನಿವಾರಿಸಲು ಸಾಧ್ಯವಿಲ್ಲದ ಬ್ರಹ್ಮದಂಡವನ್ನು ವಿಧಿಸಿದರೂ ಅಂಬರೀಷನ ಕೂದಲೂ ಕೊಂಕಿಸಲಾಗಲಿಲ್ಲ, ಇಂತಹವನ ಚರಿತ್ರೆಯನ್ನು ಹೇಳಿರಿ. ॥ ೧೪ ॥

ಶ್ರೀಶುಕ ಉವಾಚ

ಅಂಬರೀಷೋ ಮಹಾಭಾಗಃ ಸಪ್ತದ್ವೀಪವತೀಂ ಮಹೀಮ್ ।
ಅವ್ಯಯಾಂ ಚ ಶ್ರಿಯಂ ಲಬ್ಧ್ವಾ ವಿಭವಂ ಚಾತುಲಂ ಭುವಿ ॥ ೧೫ ॥

ಮೇನೇಽತಿದುರ್ಲಭಂ ಪುಂಸಾಂ ಸರ್ವಂ ತತ್ ಸ್ವಪ್ನಸಂಸ್ತುತಮ್ ।
ವಿದ್ವಾನ್ವಿಭವನಿರ್ವಾಣಂ ತಮೋ ವಿಶತಿ ಯತ್ಪುಮಾನ್ ॥ ೧೬ ॥

ವಾಸುದೇವೇ ಭಗವತಿ ತದ್ಭಕ್ತೇಷು ಚ ಸಾಧುಷು ।
ಪ್ರಾಪ್ತೋ ಭಾವಂ ಪರಂ ವಿಶ್ವಂ ಯೇನೇದಂ ಲೋಷ್ಟವತ್ ಸ್ಮೃತಮ್ ॥ ೧೭ ॥

ಸ ವೈ ಮನಃ ಕೃಷ್ಣಪದಾರವಿಂದಯೋ-
ರ್ವಚಾಂಸಿ ವೈಕುಂಠ ಗುಣಾನುವರ್ಣನೇ ।
ಕರೌ ಹರೇರ್ಮಂದಿರಮಾರ್ಜನಾದಿಷು
ಶ್ರುತಿಂ ಚಕಾರಾಚ್ಯುತಸತ್ಕಥೋದಯೇ ॥ ೧೮ ॥

ಮುಕುಂದಲಿಂಗಾಲಯದರ್ಶನೇ ದೃಶೌ
ತದ್ಭೃತ್ಯಗಾತ್ರಸ್ಪರ್ಶೇಽಙ್ಗ ಸಂಗಮಮ್ ।
ಘ್ರಾಣಂ ಚ ತತ್ಪಾದಸರೋಜಸೌರಭೇ
ಶ್ರೀಮತ್ತುಲಸ್ಯಾ ರಸನಾಂ ತದರ್ಪಿತೇ ॥ ೧೯ ॥

ಪಾದೌ ಹರೇಃ ಕ್ಷೇತ್ರಪದಾನುಸರ್ಪಣೇ
ಶಿರೋ ಹೃಷಿಕೇಶಪದಾಭಿವಂದನೇ ।
ಕಾಮಂ ಚ ದಾಸ್ಯೇ ನ ತು ಕಾಮಕಾಮ್ಯಯಾ
ಯಥೋತ್ತಮಶ್ಲೋಕಜನಾಶ್ರಯಾ ರತಿಃ ॥ ೨೦ ॥

ಏವಂ ಸದಾ ಕರ್ಮಕಲಾಪಮಾತ್ಮನಃ
ಪರೇಽಧಿಯಜ್ಞೇ ಭಗವತ್ಯಧೋಕ್ಷಜೇ ।
ಸರ್ವಾತ್ಮಭಾವಂ ವಿದಧನ್ಮಹೀಮಿಮಾಂ
ತನ್ನಿಷ್ಠವಿಪ್ರಾಭಿಹಿತಃ ಶಶಾಸ ಹ ॥ ೨೧ ॥

ಈಜೇಽಶ್ವಮೇಧೈರಧಿಯಜ್ಞಮೀಶ್ವರಂ
ಮಹಾವಿಭೂತ್ಯೋಪಚಿತಾಂಗ ದಕ್ಷಿಣೈಃ ।
ತತೈರ್ವಸಿಷ್ಠಾಸಿತಗೌತಮಾದಿಭಿ-
ರ್ಧನ್ವನ್ಯಭಿಸ್ರೋತಮಸೌ ಸರಸ್ವತೀಮ್ ॥ ೨೨ ॥

ಶ್ರೀಶುಕಮಹಾಮುನಿಗಳು ಹೇಳಿದರು – ಪರೀಕ್ಷಿದ್ರಾಜನೇ! ಅಂಬರೀಷನು ಮಹಾಭಾಗ್ಯಶಾಲಿಯಾಗಿದ್ದನು. ಸಪ್ತದ್ವೀಪಗಳಿಂದೊಡಗೊಂಡ ಅಖಂಡ ಭೂಮಂಡಲಕ್ಕೆ ಒಡೆಯನಾಗಿ ಅಚಲ ಸಂಪತ್ತು ಮತ್ತು ಅತುಲ ಐಶ್ವರ್ಯವು ಅವನಿಗೆ ಪ್ರಾಪ್ತವಾಗಿತ್ತು. ಇವೆಲ್ಲವೂ ಸಾಮಾನ್ಯ ಮನುಷ್ಯರಿಗೆ ಅತ್ಯಂತ ದುರ್ಲಭವಾಗಿದ್ದರೂ ಅವನು ಇವನ್ನು ಸ್ವಪ್ನದಂತೆ ಕ್ಷಣಿಕವೆಂದೇ ತಿಳಿಯುತ್ತಿದ್ದನು. ಏಕೆಂದರೆ, ಯಾವ ವೈಭವ-ಸಂಪತ್ತಿನ ಲೋಭದಿಂದ ಮನುಷ್ಯನು ತಮೋಗುಣದಲ್ಲಿ ಮುಳುಗಿ ನರಕಕ್ಕೆ ಹೋಗುತ್ತಾನೋ, ಅಂತಹ ವೈಭವಗಳೆಲ್ಲವೂ ಒಂದುದಿನ ನಾಶವಾಗುವುದೆಂಬುದನ್ನು ಅಂಬರೀಷನು ಅರಿತಿದ್ದನು. ॥ ೧೫-೧೬ ॥ ಭಗವಾನ್ ವಾಸುದೇವನಲ್ಲಿ ಹಾಗೂ ಅವನ ಏಕಾಂತ ಭಕ್ತರಲ್ಲಿ ಅಂಬರೀಷನಿಗೆ ಪರಮ ಪ್ರೀತಿ-ಭಕ್ತಿಯಿತ್ತು. ಅಂತಹ ಭಕ್ತಿಯು ಪ್ರಾಪ್ತವಾದ ಮೇಲಂತೂ ಈ ಇಡೀ ವಿಶ್ವ ಮತ್ತು ಸಮಸ್ತ ಸಂಪತ್ತು ಮಣ್ಣಿನಹೆಂಟೆಯಂತೆ ಕಂಡು ಬರುತ್ತಿತ್ತು. ॥ ೧೭ ॥ ಪರಮಭಾಗವತನಾದ ಅಂಬರೀಷನು ಮನಸ್ಸನ್ನು ಭಗವಾನ್ ಶ್ರೀಕೃಷ್ಣನ ಚರಣಾರವಿಂದಗಳಲ್ಲಿ ಲೀನಗೊಳಿಸಿದ್ದನು. ವಾಣಿಯನ್ನು ಭಗವದ್ಗುಣ ಕೀರ್ತನೆಯಲ್ಲಿ, ಕೈಗಳನ್ನು ಶ್ರೀಹರಿಮಂದಿರವನ್ನು ಗುಡಿಸುವುದು, ಸಾರಿಸುವುದರಲ್ಲಿ, ತನ್ನ ಕಿವಿಗಳನ್ನು ಭಗವಾನ್ ಅಚ್ಯುತನ ಮಂಗಲಮಯ ಕಥಾಶ್ರವಣದಲ್ಲಿ ತೊಡಗಿಸಿದ್ದನು. ॥ ೧೮ ॥ ಅವನು ತನ್ನ ಕಣ್ಣುಗಳನ್ನು ಮುಕುಂದನ ಮೂರ್ತಿಯನ್ನೂ, ಮಂದಿರಗಳನ್ನೂ ದರ್ಶಿಸಲು, ಅಂಗ-ಸಂಗವನ್ನು ಭಗವದ್ಭಕ್ತರ ಶರೀರಸ್ಪರ್ಶದಲ್ಲಿಯೂ, ಮೂಗನ್ನು ಭಗವಂತನ ಚರಣಕಮಲಗಳಲ್ಲಿ ಅರ್ಪಿಸಿದ ತುಲಸಿಯ ದಿವ್ಯ ಪರಿಮಳವನ್ನು ಆಘ್ರಾಣಿಸಲು, ನಾಲಿಗೆಯನ್ನು ಪರಮಾತ್ಮನಿಗೆ ಅರ್ಪಿಸಿದ ನೈವೇದ್ಯ-ಪ್ರಸಾದ ಸೇವಿಸಲು ಮೀಸಲಾಗಿಟ್ಟಿದ್ದನು. ॥ ೧೯ ॥ ಅಂಬರೀಷನು ತನ್ನ ಕಾಲುಗಳನ್ನು ಭಗವಂತನ ದಿವ್ಯ ತೀರ್ಥಕ್ಷೇತ್ರಯಾತ್ರೆ ಮಾಡುವುದಕ್ಕೂ ತೊಡಗಿಸಿದ್ದನು. ಅವನು ಸದಾಕಾಲ ತಲೆಯಿಂದ ಭಗವಾನ್ ಶ್ರೀಕೃಷ್ಣನ ಚರಣಕಮಲಗಳ ವಂದನೆಯನ್ನು ಮಾಡುತ್ತಿದ್ದನು. ಭಗವಂತನ ದಾಸ್ಯ ಮಾಡಬೇಕೆಂಬುದೇ ಅವನ ಮುಖ್ಯ ಕಾಮನೆಯಾಗಿತ್ತು. ಆ ದಾಸ್ಯವೂ ನಿಷ್ಕಾಮದಾಸ್ಯವಾಗಿದ್ದು ಹರಿಪ್ರೀತ್ಯರ್ಥವಾಗಿಯೇ ಇತ್ತು. ಉತ್ತಮ ಕೀರ್ತಿಯುಳ್ಳ ಭಗವದ್ಭಕ್ತರನ್ನು ಅವನ ಪ್ರೀತಿಯು ಆಶ್ರಯಿಸಿತ್ತು. ಶ್ರೀಕೃಷ್ಣನ ಭಕ್ತರಲ್ಲಿ ಅಂಬರೀಷನಿಗೆ ಅಪಾರವಾದ ಭಕ್ತಿಯಿತ್ತು. ॥ ೨೦ ॥ ಹೀಗೆ ಅವನು ತನ್ನ ಸಮಸ್ತ ಕರ್ಮಗಳನ್ನು – ಯಜ್ಞಪುರುಷ, ಇಂದ್ರಿಯಾತೀತ ಭಗವಂತನನ್ನು ಸರ್ವಾತ್ಮಾ ಸರ್ವಸ್ವರೂಪನೆಂದು ತಿಳಿದು ಅರ್ಪಿಸಿಬಿಟ್ಟಿದ್ದನು. ಭಗವದ್ಭಕ್ತ ಬ್ರಾಹ್ಮಣರ ಅನುಶಾಸನದಂತೆ ಅವನು ರಾಜ್ಯವನ್ನಾಳುತ್ತಿದ್ದನು. ॥ ೨೧ ॥ ಅವನು 'ಧನ್ವ' ಎಂಬ ಮರುಭೂಮಿಯಲ್ಲಿ ಸರಸ್ವತಿಯ ನದಿಯ ಪ್ರವಾಹಕ್ಕೆ ಎದುರಾಗಿ ವಸಿಷ್ಠ ಅಸಿತ, ಗೌತಮ ಮೊದಲಾದ ಮಹಾ ಆಚಾರ್ಯರ ಮೂಲಕ ಬಹು ದಕ್ಷಿಣೆಗಳುಳ್ಳ, ಸರ್ವಾಂಗ ಪರಿಪೂರ್ಣವಾದ ಹಲವಾರು ಅಶ್ವಮೇಧ ಯಜ್ಞಗಳನ್ನು ಮಾಡಿ ಯಜ್ಞಪತಿಯಾದ ಭಗವಂತನನ್ನು ಆರಾಧಿಸಿದ್ದನು. ॥ ೨೨ ॥

ಯಸ್ಯ ಕ್ರತುಷು ಗೀರ್ವಾಣೈಃ ಸದಸ್ಯಾ ಋತ್ವಿಜೋ ಜನಾಃ ।
ತುಲ್ಯರೂಪಾಶ್ಚಾನಿಮಿಷಾ ವ್ಯದೃಶ್ಯಂತ ಸುವಾಸಸಃ ॥ ೨೩ ॥

ಸ್ವರ್ಗೋ ನ ಪ್ರಾರ್ಥಿತೋ ಯಸ್ಯ ಮನುಜೈರಮರಪ್ರಿಯಃ ।
ಶೃಣ್ವದ್ಭಿರುಪಗಾಯದ್ಭಿರುತ್ತಮಶ್ಲೋಕಚೇಷ್ಟಿತಮ್ ॥ ೨೪ ॥

ಸಮರ್ದ್ಧಯಂತಿ ತಾನ್ಕಾಮಾಃ ಸ್ವಾರಾಜ್ಯಪರಿಭಾವಿತಾಃ ।
ದುರ್ಲಭಾ ನಾಪಿ ಸಿದ್ಧಾನಾಂ ಮುಕುಂದಂ ಹೃದಿ ಪಶ್ಯತಃ ॥ ೨೫ ॥

ಸ ಇತ್ಥಂ ಭಕ್ತಿಯೋಗೇನ ತಪೋಯುಕ್ತೇನ ಪಾರ್ಥಿವಃ ।
ಸ್ವಧರ್ಮೇಣ ಹರಿಂ ಪ್ರೀಣನ್ ಸಂಗಾನ್ ಸರ್ವಾನ್ ಶನೈರ್ಜಹೌ ॥ ೨೬ ॥

ಗೃಹೇಷು ದಾರೇಷು ಸುತೇಷು ಬಂಧುಷು
ದ್ವಿಪೋತ್ತಮಸ್ಯಂದನವಾಜಿಪತ್ತಿಷು ।
ಅಕ್ಷಯ್ಯರತ್ನಾಭರಣಾಯುಧಾದಿ-
ಷ್ವನಂತಕೋಶೇಷ್ವಕರೋದಸನ್ಮತಿಮಮ್ ॥ ೨೭ ॥

ತಸ್ಮಾ ಅದಾದ್ಧರಿಶ್ಚಕ್ರಂ ಪ್ರತ್ಯನೀಕಭಯಾವಹಮ್ ।
ಏಕಾಂತಭಕ್ತಿಭಾವೇನ ಪ್ರೀತೋ ಭೃತ್ಯಾಭಿರಕ್ಷಣಮ್ ॥ ೨೮ ॥

ಆರಿರಾಧಯಿಷುಃ ಕೃಷ್ಣಂ ಮಹಿಷ್ಯಾ ತುಲ್ಯಶೀಲಯಾ ।
ಯುಕ್ತಃ ಸಾಂವತ್ಸರಂ ವೀರೋ ದಧಾರ ದ್ವಾದಶೀವ್ರತಮ್ ॥ ೨೯ ॥

ವ್ರತಾಂತೇ ಕಾರ್ತಿಕೇ ಮಾಸಿ ತ್ರಿರಾತ್ರಂ ಸಮುಪೋಷಿತಃ ।
ಸ್ನಾತಃ ಕದಾಚಿತ್ಕಾಲಿಂದ್ಯಾಂ ಹರಿಂ ಮಧುವನೇಽರ್ಚಯತ್ ॥ ೩೦ ॥

ಮಹಾಭಿಷೇಕವಿಧಿನಾ ಸರ್ವೋಪಸ್ಕರಸಂಪದಾ ।
ಅಭಿಷಿಚ್ಯಾಂಬರಾಕಲ್ಪೈರ್ಗಂಧಮಾಲ್ಯಾರ್ಹಣಾದಿಭಿಃ ॥ ೩೧ ॥

ತದ್ಗತಾಂತರಭಾವೇನ ಪೂಜಯಾಮಾಸ ಕೇಶವಮ್ ।
ಬ್ರಾಹ್ಮಣಾಂಶ್ಚ ಮಹಾಭಾಗಾನ್ ಸಿದ್ಧಾರ್ಥಾನಪಿ ಭಕ್ತಿತಃ ॥ ೩೨ ॥

ಅವನ ಯಜ್ಞದಲ್ಲಿ ದೇವತೆಗಳೊಂದಿಗೆ ಸದಸ್ಯರು ಮತ್ತು ಋತ್ವಿಜರು ಕುಳಿತಿದ್ದಾಗ ಅವನು ತನ್ನ ಸುಂದರ ವಸ್ತ್ರ ಮತ್ತು ದಿವ್ಯರೂಪದಿಂದ ರೆಪ್ಪೆ ಮಿಟುಕಿಸದೆ ದೇವತೆಗಳಂತೆ ಕಾಣುತ್ತಿದ್ದನು. ॥ ೨೩ ॥ ಅವನ ಪ್ರಜೆಗಳು ಕೆಲವೊಮ್ಮೆ ಮಹಾತ್ಮರಿಂದ ಹಾಡಲ್ಪಟ್ಟ ಭಗವಂತನ ಉತ್ತಮ ಚರಿತ್ರೆಗಳನ್ನು ಭಕ್ತಿಯಿಂದ ಶ್ರವಣಿಸುತ್ತಿದ್ದರೆ, ಕೆಲವೊಮ್ಮೆ ಭಗವದ್ಗುಣಗಳನ್ನು ಕೀರ್ತಿಸುತ್ತಿದ್ದರು. ಈ ವಿಧವಾಗಿ ಅವನ ರಾಜ್ಯದ ಪ್ರಜೆಗಳು ದೇವತೆಗಳ ಅತ್ಯಂತ ಪ್ರಿಯವಾದ ಸ್ವರ್ಗವನ್ನೂ ಕೂಡ ಬಯಸುತ್ತಿರಲಿಲ್ಲ. ॥ ೨೪ ॥ ಅಂಬರೀಷನ ಪ್ರಜೆಗಳು ನಿತ್ಯ-ನಿರಂತರವಾಗಿ ತಮ್ಮ ಹೃದಯಮಂದಿರದಲ್ಲಿ ಶ್ರೀಕೃಷ್ಣನನ್ನು ಕಾಣುತ್ತಿದ್ದರು. ಅದರಿಂದಲೇ ಅವರಿಗೆ ಸಿದ್ಧರಿಗೂ ದುರ್ಲಭವಾದ ಅಣಿಮಾದಿ ಅಷ್ಟೈಶ್ವರ್ಯಗಳೂ ಹರ್ಷವನ್ನುಂಟು ಮಾಡುತ್ತಿರಲಿಲ್ಲ. ಆತ್ಮಾನಂದದ ಮುಂದೆ ಇವೆಲ್ಲ ವಸ್ತುಗಳೂ ಅವರಿಗೆ ತುಚ್ಛವಾಗಿ ಕಾಣುತ್ತಿದ್ದವು, ತಿರಸ್ಕೃತವಾಗಿದ್ದವು. ॥ ೨೫ ॥ ಹೀಗೆ ಅಂಬರೀಷಮಹಾರಾಜನು ತಪಸ್ಸಿನಿಂದ ಕೂಡಿದ ಭಕ್ತಿಯೋಗದಿಂದಲೂ, ಪ್ರಜಾಪಾಲನರೂಪವಾದ ಸ್ವಧರ್ಮದ ಮೂಲಕವಾಗಿ ಭಗವಂತನನ್ನು ಪ್ರಸನ್ನಗೊಳಿಸಿ, ನಿಧಾನವಾಗಿ ಅವನು ಎಲ್ಲ ವಿಧದ ಆಸಕ್ತಿಗಳನ್ನು ಪರಿತ್ಯಾಗ ಮಾಡಿದನು. ॥ ೨೬ ॥ ಅರಮನೆ, ಪತ್ನೀ, ಪುತ್ರರು, ಬಂಧು-ಬಾಂಧವರು, ಶ್ರೇಷ್ಠವಾದ ಆನೆ, ಕುದುರೆ, ರಥ, ಕಾಲಾಳುಗಳೆಂಬ ಚತುರಂಗ ಸೈನ್ಯ, ಅಕ್ಷಯವಾದ ಭಂಡಾರ – ಇವೆಲ್ಲವೂ ಅನಿತ್ಯವಾದುವುಗಳೆಂದು ಭಾವಿಸಿ ಇವೆಲ್ಲವುಗಳಿಂದ ವಿರಕ್ತನಾದನು. ॥ ೨೭ ॥ ಅವನ ಅನನ್ಯ ಪ್ರೇಮಮಯವಾದ ಭಕ್ತಿಯಿಂದ ಸುಪ್ರೀತನಾದ ಶ್ರೀಹರಿಯು ಅವನ ರಕ್ಷಣೆಗಾಗಿ ವಿರೋಧಿಗಳಿಗೆ ಭಯವನ್ನುಂಟು ಮಾಡುವ, ಭಗವದ್ಭಕ್ತರಿಗೆ ರಕ್ಷಕವಾಗಿದ್ದ ಸುದರ್ಶನ ಚಕ್ರವನ್ನು ನಿಯಮಿಸಿದ್ದನು. ॥ ೨೮ ॥

ಅಂಬರೀಷರಾಜನ ಪತ್ನಿಯೂ ಅವನಂತೆಯೇ ಧರ್ಮಶೀಲಳೂ, ಸಂಸಾರದಿಂದ ವಿರಕ್ತಳೂ, ಭಕ್ತಿಪರಾಯಣಳೂ ಆಗಿದ್ದಳು. ಒಮ್ಮೆ ಅವನು ಪತ್ನಿಯೊಡನೆ ಭಗವಾನ್ ಶ್ರೀಕೃಷ್ಣನನ್ನು ಆರಾಧಿಸಲಿಕ್ಕಾಗಿ ಒಂದು ವರ್ಷದ ದ್ವಾದಶೀ ಪ್ರಧಾನವಾದ ಏಕಾದಶೀ ವ್ರತವನ್ನು ಕೈಗೊಂಡನು. ॥ ೨೯ ॥ ವ್ರತದ ಸಮಾಪ್ತಿಯಾದಾಗ ಕಾರ್ತೀಕ ಮಾಸದಲ್ಲಿ ರಾಜನು ಮೂರು ರಾತ್ರಿಗಳು ಉಪವಾಸವಿದ್ದು ಯಮುನಾನದಿಯಲ್ಲಿ ಸ್ನಾನಮಾಡಿ ಮಧುವನದಲ್ಲಿ ಭಗವಾನ್ ಶ್ರೀಹರಿಯನ್ನು ಪೂಜಿಸಿದನು. ॥ ೩೦ ॥ ರಾಜನು ಮಹಾಭಿಷೇಕವಿಧಿಯಿಂದಲೂ ಸಮಸ್ತ ಪರಿಕರಗಳೊಂದಿಗೆ ಹಾಗೂ ಸಂಪತ್ತಿನ ಮೂಲಕ ಭಗವಂತನಿಗೆ ಅಭಿಷೇಕಮಾಡಿ, ತನ್ಮಯವಾದ ಮನಸ್ಸಿನಿಂದ ವಸ್ತ್ರ, ಭೂಷಣ, ಚಂದನ, ಹೂಮಾಲೆಗಳಿಂದಲೂ, ಅರ್ಘ್ಯ-ಪಾದ್ಯಾದಿಗಳಿಂದಲೂ ಹರಿಯನ್ನು ಪೂಜಿಸಿದನು. ಅಂತೆಯೇ ಮಹಾಭಾಗ್ಯಶಾಲಿಗಳಾದ ಸಿದ್ಧಾರ್ಥರಾದ ಬ್ರಾಹ್ಮಣಶ್ರೇಷ್ಠರನ್ನೂ ಭಕ್ತಿಪೂರ್ವಕವಾಗಿ ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಿದನು. ಬಳಿಕ ರಾಜನು ಬ್ರಾಹ್ಮಣರಿಗೆ ರುಚಿಕರವಾದ ಮತ್ತು ಗುಣವತ್ತರವಾದ ಭೋಜನವನ್ನು ಮಾಡಿಸಿ, ಸಮಲಂಕೃತವಾದ ಅರವತ್ತು ಕೋಟಿ ಗೋವುಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಆ ಗೋವುಗಳ ಕೊಂಬುಗಳು ಸುವರ್ಣದಿಂದಲೂ,

ಗವಾಂ ರುಕ್ಮವಿಷಾಣೀನಾಂ ರೂಪ್ಯಾಂಘ್ರೀಣಾಂ ಸುವಾಸಸಾಮ್ ।
ಪಯಃಶೀಲವಯೋರೂಪವತ್ಸೋಪಸ್ಕರಸಂಪದಾಮ್
॥ ೩೩ ॥

ಪ್ರಾಹಿಣೋತ್ಸಾಧುವಿಪ್ರೇಭ್ಯೋ ಗೃಹೇಷು ನ್ಯರ್ಬುದಾನಿ ಷಟ್ ।
ಭೋಜಯಿತ್ವಾ ದ್ವಿಜಾನಗ್ರೇ ಸ್ವಾದ್ವನ್ನಂ ಗುಣವತ್ತಮಮ್
॥ ೩೪ ॥

ಲಬ್ಧಕಾಮೈರನುಜ್ಞಾತಃ ಪಾರಣಾಯೋಪಚಕ್ರಮೇ ।
ತಸ್ಯ ತರ್ಹ್ಯತಿಥಿಃ ಸಾಕ್ಷಾದ್ದುರ್ವಾಸಾ ಭಗವಾನಭೂತ್
॥ ೩೫ ॥

ತಮಾನರ್ಚಾತಿಥಿಂ ಭೂಪಃ ಪ್ರತ್ಯುತ್ಥಾನಾಸನಾರ್ಹಣೈಃ ।
ಯಯಾಚೇಽಭ್ಯವಹಾರಾಯ ಪಾದಮೂಲಮುಪಾಗತಃ
॥ ೩೬ ॥

ಪ್ರತಿನಂದ್ಯ ಸ ತದ್ ಯಾಞ್ಚಾಂ ಕರ್ತುಮಾವಶ್ಯಕಂ ಗತಃ ।
ನಿಮಮಜ್ಜ ಬೃಹದ್ಧ್ಯಾಯನ್ ಕಾಲಿಂದೀಸಲಿಲೇ ಶುಭೇ
॥ ೩೭ ॥

ಮುಹೂರ್ತಾರ್ಧಾವಶಿಷ್ಟಾಯಾಂ ದ್ವಾದಶ್ಯಾಂ ಪಾರಣಂ ಪ್ರತಿ ।
ಚಿಂತಯಾಮಾಸ ಧರ್ಮಜ್ಞೋ ದ್ವಿಜೈಸ್ತದ್ಧರ್ಮಸಂಕಟೇ
॥ ೩೮ ॥

ಬ್ರಾಹ್ಮಣಾತಿಕ್ರಮೇ ದೋಷೋ
ದ್ವಾದಶ್ಯಾಂ ಯದಪಾರಣೇ ।
ಯತ್ಕೃತ್ವಾ ಸಾಧು ಮೇ ಭೂಯಾದ-
ಧರ್ಮೋ ವಾ ನ ಮಾಂ ಸ್ಪೃಶೇತ್ ॥ ೩೯ ॥

ಅಂಭಸಾ ಕೇವಲೇನಾಥ ಕರಿಷ್ಯೇ ವ್ರತಪಾರಣಮ್ ।
ಪ್ರಾಹುರಬ್ಭಕ್ಷಣಂ ವಿಪ್ರಾ ಹ್ಯಶಿತಂ ನಾಶಿತಂ ಚ ತತ್
॥ ೪೦ ॥

ಇತ್ಯಪಃ ಪ್ರಾಶ್ಯ ರಾಜರ್ಷಿಶ್ಚಿಂತಯನ್ಮನಸಾಚ್ಯುತಮ್ ।
ಪ್ರತ್ಯಚಷ್ಟ ಕುರುಶ್ರೇಷ್ಠ ದ್ವಿಜಾಗಮನಮೇವ ಸಃ
॥ ೪೧ ॥

ದುರ್ವಾಸಾ ಯಮುನಾಕೂಲಾತ್ಕೃತಾವಶ್ಯಕ ಆಗತಃ ।
ರಾಜ್ಞಾಭಿನಂದಿತಸ್ತಸ್ಯ ಬುಬುಧೇ ಚೇಷ್ಟಿತಂ ಧಿಯಾ
॥ ೪೨ ॥

ಮನ್ಯುನಾ ಪ್ರಚಲದ್ಗಾತ್ರೋ ಭ್ರುಕುಟೀಕುಟಿಲಾನನಃ ।
ಬುಭುಕ್ಷಿತಶ್ಚ ಸುತರಾಂ ಕೃತಾಂಜಲಿಮಭಾಷತ
॥ ೪೩ ॥

ಕಾಲುಗಳು ಬೆಳ್ಳಿಯಿಂದಲೂ ಅಲಂಕೃತವಾಗಿತ್ತು. ಅವುಗಳಿಗೆ ಸುಂದರವಾದ ವಸ್ತ್ರಗಳನ್ನು ಹೊದಿಸಿದ್ದರು. ಅವೆಲ್ಲವೂ ಹೇರಳ ವಾಗಿ ಹಾಲುಕೊಡುತ್ತಿದ್ದವು. ಒಳ್ಳೆಯ ಸ್ವಭಾವದವುಗಳಾಗಿದ್ದು ಪಡ್ಡೆ ಹಸುಗಳಾಗಿದ್ದವು. ನೋಡಲು ಸುಂದರವಾಗಿದ್ದವು. ಕರುಗಳ ಸಮೇತವಾಗಿದ್ದವು. ಜೊತೆಗೆ ಹಾಲುಕರೆಯುವ ಪಾತ್ರೆಗಳನ್ನೂ ರಾಜನು ಬ್ರಾಹ್ಮಣರಿಗೆ ದಾನವಾಗಿಕೊಟ್ಟನು. ॥ ೩೧-೩೪ ॥ ಗೋವುಗಳನ್ನು ಪಡೆದು ಕಾಮನೆಗಳನ್ನು ಪೂರೈಸಿಕೊಂಡ ಬ್ರಾಹ್ಮಣ ರಿಂದ ಅನುಜ್ಞೆಯನ್ನು ಪಡೆದು ರಾಜನು ವ್ರತಪಾರಣೆಗಾಗಿ ಸಿದ್ಧನಾಗುತ್ತಿದ್ದನು. ಅದೇ ಸಮಯದಲ್ಲಿ ಶಾಪಾನುಗ್ರಹ ಸಮರ್ಥರಾದ ದುರ್ವಾಸರು ಅವನಲ್ಲಿಗೆ ಅತಿಥಿಗಳಾಗಿ ಆಗಮಿಸಿದರು. ॥ ೩೫ ॥

ಅಂಬರೀಷ ಮಹಾರಾಜನು ಅವರನ್ನೂ ನೋಡುತ್ತಲೇ ಎದ್ದು ನಿಂತು, ಆದರದಿಂದ ಆಸನವನ್ನಿತ್ತು ಕುಳ್ಳಿರಿಸಿ ಅತಿಥಿಯಾಗಿ ಬಂದಿರುವ ದುರ್ವಾಸರನ್ನು ವಿಧ-ವಿಧವಾಗಿ ಪೂಜಿಸಿದನು. ಅವರ ಚರಣಗಳಲ್ಲಿ ನಮಸ್ಕಾರಮಾಡಿ ರಾಜನು ಭೋಜನಕ್ಕಾಗಿ ಪ್ರಾರ್ಥಿಸಿಕೊಂಡನು. ॥ ೩೬ ॥ ದುರ್ವಾಸರು ಅಂಬರೀಷನ ಪ್ರಾರ್ಥನೆ ಯನ್ನು ಸ್ವೀಕರಿಸಿ ಆವಶ್ಯಕ ಕರ್ಮಗಳನ್ನು ಪೂರೈಸಲಿಕ್ಕಾಗಿ ನದೀ ತೀರಕ್ಕೆ ಹೋದರು. ಅವರು ಬ್ರಹ್ಮವಸ್ತುವನ್ನು ಧ್ಯಾನಿಸುತ್ತಾ ಯಮುನೆಯ ಪವಿತ್ರತೀರ್ಥದಲ್ಲಿ ಸ್ನಾನ ಮಾಡತೊಡಗಿದರು. ॥ ೩೭ ॥ ಇತ್ತ ದ್ವಾದಶಿಯು ಕೇವಲ ಒಂದುಗಳಿಗೆ ಮಾತ್ರ ಉಳಿದಿತ್ತು. ಧರ್ಮಜ್ಞನಾದ ಅಂಬರೀಷನು ಧರ್ಮ-ಸಂಕಟ ಕ್ಕೊಳಗಾಗಿ ಬ್ರಾಹ್ಮಣರೊಂದಿಗೆ ವಿಚಾರ ವಿಮರ್ಶೆ ಮಾಡಿದನು. ॥ ೩೮ ॥ ರಾಜನೆಂದನು – ಬ್ರಾಹ್ಮಣೋತ್ತಮರೇ! ಅತಿಥಿಯಾದ ಬ್ರಾಹ್ಮಣನಿಗೆ ಭೋಜನಮಾಡಿಸದೆ ಭೋಜನ ಮಾಡುವುದು ಮತ್ತು ದ್ವಾದಶಿ ಕಳೆದಮೇಲೆ ಪಾರಣೆಮಾಡುವುದು ಎರಡೂ ದೋಷವಾಗಿದೆ. ಆದಕ್ಕಾಗಿ ಇಂತಹ ಸಮಯದಲ್ಲಿ ನನಗೆ ಪಾಪವು ತಟ್ಟದೆ ಶ್ರೇಯಸ್ಸಾಗುವಂತಹ ಯಾವ ಕಾರ್ಯವನ್ನು ಮಾಡ ಬೇಕು? ॥ ೩೯ ॥ ಆಗ ಬ್ರಾಹ್ಮಣರೊಂದಿಗೆ ವಿಚಾರ ವಿಮರ್ಶಿಸಿ ಅವನೆಂದನು – ಬ್ರಾಹ್ಮಣಶ್ರೇಷ್ಠರೇ! ಕೇವಲ ನೀರು ಕುಡಿ ಯುವುದರಿಂದ ಭೋಜನ ಮಾಡಿದಂತೆಯೂ, ಮಾಡ ದಂತೆಯೂ ಇದೆ ಎಂದು ಶ್ರುತಿಗಳಲ್ಲಿ ಹೇಳಿದೆ. ಆದಕ್ಕಾಗಿ ಈ ಸಮಯದಲ್ಲಿ ಕೇವಲ ನೀರು ಕುಡಿದು ಪಾರಣೆ ಮಾಡುತ್ತೇನೆ ಎಂದು ಹೇಳಿಕೊಂಡನು. ॥ ೪೦ ॥ ಹೀಗೆ ನಿಶ್ಚಯಿಸಿ ಮನಸ್ಸಿನಲ್ಲೇ ಭಗವಂತನನ್ನು ಚಿಂತಿಸುತ್ತಾ ರಾಜರ್ಷಿ ಅಂಬರೀಷನು ಜಲಪ್ರಾಶನ ಮಾಡಿದನು ಹಾಗೂ ಪರೀಕ್ಷಿತನೇ! ದುರ್ವಾಸರ ಆಗಮನವನ್ನೇ ಎದುರು ನೋಡುತ್ತಿದ್ದನು. ॥ ೪೧ ॥ ದುರ್ವಾಸರು ಆವಶ್ಯಕ ಕರ್ಮಗಳಿಂದ ನಿವೃತ್ತರಾಗಿ ಯಮುನಾ ನದಿಯಿಂದ ಮರಳಿದರು. ರಾಜನು ಮುಂದೆ ಹೋಗಿ ಅವರಿಗೆ ಅಭಿನಂದಿಸಿದಾಗ ಅವರು – ರಾಜನು ಪಾರಣೆಮಾಡಿರುವನೆಂದು ಅನುಮಾನದಿಂದಲೇ ತಿಳಿದುಕೊಂಡರು. ॥ ೪೨ ॥ ಆ ಸಮಯದಲ್ಲಿ ದುರ್ವಾಸರು ಬಹಳ ಹಸಿದಿದ್ದರು. ಇದರಿಂದ ರಾಜನು ಪಾರಣೆ ಮಾಡಿರುವ ನೆಂದು ತಿಳಿದು ಅವರ ಶರೀರವೆಲ್ಲವೂ ಕೋಪದಿಂದ ಥರ-ಥರನೆ ನಡುಗುತ್ತಿತ್ತು. ಹುಬ್ಬುಗಂಟಿಕ್ಕಿದ್ದರಿಂದ ಮುಖವು ವಿಕಟವಾಗಿತ್ತು. ಕೈಜೋಡಿಸಿ ನಿಂತುಕೊಂಡಿದ್ದ ಅಂಬರೀಷನನ್ನು ಗದರಿಸುತ್ತಾ ಅವರು ಹೇಳಿದರು – ॥ ೪೩ ॥

ಅಹೋ ಅಸ್ಯ ನೃಶಂಸಸ್ಯ ಶ್ರೀಯೋನ್ಮತ್ತಸ್ಯ ಪಶ್ಯತ ।
ಧರ್ಮವ್ಯತಿಕ್ರಮಂ ವಿಷ್ಣೋರಭಕ್ತಸ್ಯೇಶಮಾನಿನಃ
॥ ೪೪ ॥

ಯೋ ಮಾಮತಿಥಿಮಾಯಾತಮಾತಿಥ್ಯೇನ ನಿಮಂತ್ರ್ಯ ಚ ।
ಅದತ್ತ್ವಾ ಭುಕ್ತವಾಂಸ್ತಸ್ಯ ಸದ್ಯಸ್ತೇ ದರ್ಶಯೇ ಫಲಮ್
॥ ೪೫ ॥

ಏವಂ ಬ್ರುವಾಣ ಉತ್ಕೃತ್ಯ ಜಟಾಂ ರೋಷವಿದೀಪಿತಃ ।
ತಯಾ ಸ ನಿರ್ಮಮೇ ತಸ್ಮೈ ಕೃತ್ಯಾಂ ಕಾಲಾನಲೋಪಮಾಮ್
॥ ೪೬ ॥

ತಾಮಾಪತಂತೀಂ ಜ್ವಲತೀಮಸಿಹಸ್ತಾಂ ಪದಾ ಭುವಮ್ ।
ವೇಪಯಂತೀಂ ಸಮುದ್ವೀಕ್ಷ್ಯ ನ ಚಚಾಲ ಪದಾನ್ನೃಪಃ
॥ ೪೭ ॥

ಪ್ರಾಗ್ದಿಷ್ಟಂ ಭೃತ್ಯರಕ್ಷಾಯಾಂ ಪುರುಷೇಣ ಮಹಾತ್ಮನಾ ।
ದದಾಹ ಕೃತ್ಯಾಂ ತಾಂ ಚಕ್ರಂ ಕ್ರುದ್ಧಾಹಿಮಿವ ಪಾವಕಃ
॥ ೪೮ ॥

ತದಭಿದ್ರವದುದ್ವೀಕ್ಷ್ಯ ಸ್ವಪ್ರಯಾಸಂ ಚ ನಿಷ್ಫಲಮ್ ।
ದುರ್ವಾಸಾ ದುದ್ರುವೇ ಭೀತೋ ದಿಕ್ಷು ಪ್ರಾಣಪರೀಪ್ಸಯಾ
॥ ೪೯ ॥

ತಮನ್ವಧಾವದ್ಭಗವದ್ರಥಾಙ್ಗಂ
ದಾವಾಗ್ನಿರುದ್ಧೂತಶಿಖೋ ಯಥಾಹಿಮ್ ।
ತಥಾನುಷಕ್ತಂ ಮುನಿರೀಕ್ಷಮಾಣೋ
ಗುಹಾಂ ವಿವಿಕ್ಷುಃ ಪ್ರಸಸಾರ ಮೇರೋಃ ॥ ೫೦ ॥

ದಿಶೋ ನಭಃ ಕ್ಷ್ಮಾಂ ವಿವರಾನ್ ಸಮುದ್ರಾನ್
ಲೋಕಾನ್ಸಪಾಲಾಂಸ್ತ್ರಿದಿವಂ ಗತಃ ಸಃ ।
ಯತೋ ಯತೋ ಧಾವತಿ ತತ್ರ ತತ್ರ
ಸುದರ್ಶನಂ ದುಷ್ಪ್ರಸಹಂ ದದರ್ಶ ॥ ೫೧ ॥

ಅಲಬ್ಧನಾಥಃ ಸ ಯದಾ ಕುತಶ್ಚಿತ್
ಸಂತ್ರಸ್ತಚಿತ್ತೋಽರಣಮೇಷಮಾಣಃ ।
ದೇವಂ ವಿರಿಂಚಿಂ ಸಮಗಾದ್ವಿಧಾತಃ
ತ್ರಾಹ್ಯಾತ್ಮಯೋನೇಽಜಿತತೇಜಸೋ ಮಾಮ್ ॥ ೫೨ ॥

ಬ್ರಹ್ಮೋವಾಚ

ಸ್ಥಾನಂ ಮದೀಯಂ ಸಹವಿಶ್ವಮೇತತ್
ಕ್ರೀಡಾವಸಾನೇ ದ್ವಿಪರಾರ್ಧಸಂಜ್ಞೇ ।
ಭ್ರೂಭಂಗಮಾತ್ರೇಣ ಹಿ ಸಂದಿಧಕ್ಷೋಃ
ಕಾಲಾತ್ಮನೋ ಯಸ್ಯ ತಿರೋಭವಿಷ್ಯತಿ ॥ ೫೩ ॥

ಏನನ್ಯಾಯ! ಕ್ರೂರಿಯಾದ, ಸಂಪತ್ತಿನಿಂದ ಮದಿಸಿರುವ, ವಿಷ್ಣುವಿನ ಭಕ್ತನಲ್ಲದ, ತಾನೇ ಸರ್ವೇಶ್ವರನೆಂದು ಭಾವಿಸಿ ಕೊಂಡಿರುವ ಈ ರಾಜನ ಧರ್ಮೋಲ್ಲಂಘನೆಯನ್ನು ಎಲ್ಲರೂ ನೋಡಿರಿ. ॥ ೪೪ ॥ ನಾನು ಅತಿಥಿಯಾಗಿ ಇವನಲ್ಲಿಗೆ ಬಂದಿರುವೆನು. ಅತಿಥಿ ಸತ್ಕಾರಮಾಡಲು ರಾಜನು ನನಗೆ ಆಮಂತ್ರಣವನ್ನೂ ಕೊಟ್ಟನು. ಹೀಗಿದ್ದರೂ ನನಗೆ ಊಟಮಾಡಿಸದೆಯೇ ಇವನು ಭೋಜನ ಮಾಡಿರುವನು. ಇಂತಹ ಧರ್ಮವ್ಯತಿಕ್ರಮಕ್ಕೆ ಸಿಗುವ ಫಲವೇನೆಂಬುದನ್ನು ನಾನೀಗಲೇ ತೋರಿಸಿಕೊಡುತ್ತೇನೆ. ॥ ೪೫ ॥ ಹೀಗೆ ಹೇಳುತ್ತಾ- ಹೇಳುತ್ತಾ ಅವರು ಸಿಟ್ಟಿನಿಂದ ಉರಿದೆದ್ದರು. ಅವರು ತಮ್ಮ ಒಂದು ಜಟೆಯನ್ನು ಕಿತ್ತು ಅದರಿಂದ ಅಂಬರೀಷನನ್ನು ಕೊಂದುಬಿಡಲು ಒಂದು ಕೃತ್ಯೆಯನ್ನು ನಿರ್ಮಿಸಿದರು. ಅದು ಪ್ರಳಯಾಗ್ನಿಯಂತೆ ಧಗ-ಧಗಿಸುತ್ತಿತ್ತು. ॥ ೪೬ ॥ ಅದು ಬೆಂಕಿಯಂತೆ ಉರಿಯುತ್ತಾ ಕೈಯಲ್ಲಿ ಖಡ್ಗವನ್ನು ಝಳಪಿಸುತ್ತಾ, ಪಾದ ಘಟ್ಟನೆಯಿಂದ ಭೂಮಿಯನ್ನು ನಡುಗಿಸುತ್ತಾ ಅಂಬರೀಷನ ಮೇಲೆ ಆಕ್ರಮಿಸಿತು. ಆದರೆ ಅಂಬರೀಷ ರಾಜನು ಅದನ್ನು ನೋಡಿ ನಿಂತ ಜಾಗದಿಂದ ಕದಲದೆ ಹಾಗೆಯೇ ನಿಂತಿದ್ದನು. ॥ ೪೭ ॥ ಪರಮ ಪುರುಷ ಪರಮಾತ್ಮನು ತನ್ನ ಸೇವಕನ ರಕ್ಷಣೆಗಾಗಿ ಮೊದಲೇ ಸುದರ್ಶನ ಚಕ್ರವನ್ನು ನಿಯುಕ್ತಗೊಳಿಸಿದ್ದನು. ಕೋಪಗೊಂಡಿರುವ ಘಟಸರ್ಪವನ್ನು ದಾವಾಗ್ನಿಯು ಕ್ಷಣಮಾತ್ರದಲ್ಲಿ ಭಸ್ಮಮಾಡಿ ಬಿಡುವಂತೆ ಸುದರ್ಶನಚಕ್ರವು ದುರ್ವಾಸನ ಕೃತ್ಯೆಯನ್ನು ಸುಟ್ಟು ಬೂದಿ ಮಾಡಿಬಿಟ್ಟಿತು. ॥ ೪೮ ॥ ತಾನು ಸೃಷ್ಟಿಸಿದ ಕೃತ್ಯೆಯು ಭಸ್ಮವಾದುದನ್ನು ಮತ್ತು ಚಕ್ರವು ತನ್ನೆಡೆಗೆ ಬರುತ್ತಿರುವುದನ್ನು ಕಂಡು ದುರ್ವಾಸರು ಭಯಗೊಂಡು ತನ್ನ ಪ್ರಾಣಗಳನ್ನು ಉಳಿಸಿಕೊಳ್ಳಲು ದಿಕ್ಕಾಪಾಲಾಗಿ ಓಡಿಹೋದರು. ॥ ೪೯ ॥ ಎತ್ತರವಾದ ಜ್ವಾಲೆಗಳಿಂದ ಕೂಡಿದ್ದ ಕಾಡ್ಗಿಚ್ಚು ಸರ್ಪವನ್ನು ಹಿಂಬಾಲಿಸಿ ಹೋಗುವಂತೆ ಭಗವಂತನ ಸುದರ್ಶನಚಕ್ರವು ಅವರನ್ನು ಅಟ್ಟಿಸಿಕೊಂಡು ಹೋಯಿತು. ಆಗ ದುರ್ವಾಸರು ಸುಮೇರು ಪರ್ವತದ ಗುಹೆಯನ್ನು ಪ್ರವೇಶಿಸಲು ಅತ್ತಕಡೆಗೆ ಓಡಿದರು. ॥ ೫೦ ॥ ದುರ್ವಾಸರು – ದಶದಿಕ್ಕುಗಳಲ್ಲಿ, ಆಕಾಶ, ಪೃಥಿವಿ, ಅತಲ-ವಿತಲ ಮುಂತಾದ ಕೆಳಗಿನ ಲೋಕಗಳಲ್ಲಿ, ಸಮುದ್ರ, ಲೋಕಪಾಲರಿಂದ ರಕ್ಷಿತವಾದ ಲೋಕಗಳಲ್ಲಿ, ಸ್ವರ್ಗದಲ್ಲಿ ಹೀಗೆ ಎಲ್ಲೆಡೆಗಳಲ್ಲಿ ಓಡಾಡಿದರು. ಆದರೆ ಅವರು ಹೋದಲ್ಲೆಲ್ಲ ಸಹಿಸಲಸಾಧ್ಯವಾದ ತೇಜಸ್ಸಿನಿಂದ ಕೂಡಿದ ಸುದರ್ಶನವು ತನ್ನನ್ನು ಹಿಂಬಾಲಿಸುವುದನ್ನು ಕಂಡರು. ॥ ೫೧ ॥ ಎಲ್ಲಿಯೂ ಯಾರೂ ರಕ್ಷಕರು ದೊರೆಯದಿದ್ದಾಗ ಅವರು ಇನ್ನೂ ಭಯಗೊಂಡರು. ತನಗಾಗಿ ಬದುಕುಳಿಯಲು ಸ್ಥಳವನ್ನು ಹುಡುಕುತ್ತಾ ಅವರು ಬ್ರಹ್ಮದೇವರ ಬಳಿಗೆ ಹೋಗಿ ಬೇಡಿಕೊಂಡರು – 'ಓ ವಿರಿಂಚಿಯೇ! ನೀವು ಸ್ವಯಂಭೂ ಆಗಿರುವಿರಿ. ಭಗವಂತನ ಈ ತೇಜೋಮಯ ಚಕ್ರದಿಂದ ನನ್ನನ್ನು ಕಾಪಾಡಿರಿ.' ॥ ೫೨ ॥

**ಬ್ರಹ್ಮದೇವರು ಹೇಳಿದರು –** ಮಹರ್ಷಿಯೇ! ನನ್ನ ಎರಡು ಪರಾರ್ಧಗಳ ಆಯುಷ್ಯವು ಮುಗಿದಾಗ ಕಾಲಸ್ವರೂಪನಾದ ಭಗವಂತನು ತನ್ನ ಈ ಸೃಷ್ಟಿಲೀಲೆಯನ್ನು ಸಮಾಪ್ತಗೊಳಿಸಲು ಬಯಸಿ ಈ ಜಗತ್ತನ್ನು ಸುಡಲು ಬಯಸಿದಾಗ ಅವನ ಭ್ರೂಭಂಗ ಮಾತ್ರದಿಂದ ಈ ಇಡೀ ಪ್ರಪಂಚ ಮತ್ತು ನನ್ನ ಈ ಲೋಕವೂ ಕೂಡ ಲೀನವಾಗಿ ಹೋದೀತು. ॥ ೫೩ ॥

ಅಹಂ ಭವೋ ದಕ್ಷಭೃಗುಪ್ರಧಾನಾಃ
ಪ್ರಜೇಶಭೂತೇಶಸುರೇಶಮುಖ್ಯಾಃ ।
ಸರ್ವೇ ವಯಂ ಯನ್ನಿಯಮಂ ಪ್ರಪನ್ನಾ
ಮೂರ್ಧ್ನ್ಯರ್ಪಿತಂ ಲೋಕಹಿತಂ ವಹಾಮಃ ॥ ೫೪ ॥

ಪ್ರತ್ಯಾಖ್ಯಾತೋ ವಿರಿಂಚೇನ ವಿಷ್ಣುಚಕ್ರೋಪತಾಪಿತಃ ।
ದುರ್ವಾಸಾಃ ಶರಣಂ ಯಾತಃ ಶರ್ವಂ ಕೈಲಾಸವಾಸಿನಮ್ ॥ ೫೫ ॥

ಶ್ರೀರುದ್ರ ಉವಾಚ

ವಯಂ ನ ತಾತ ಪ್ರಭವಾಮ ಭೂಮ್ನಿ
ಯಸ್ಮಿನ್ಪರೇಽನ್ಯೇಽಪ್ಯಜಜೀವಕೋಶಾಃ ।
ಭವಂತಿ ಕಾಲೇ ನ ಭವಂತಿ ಹೀದೃಶಾಃ
ಸಹಸ್ರಶೋ ಯತ್ರ ವಯಂ ಭ್ರಮಾಮಃ ॥ ೫೬ ॥

ಅಹಂ ಸನತ್ಕುಮಾರಶ್ಚ ನಾರದೋ ಭಗವಾನಜಃ ।
ಕಪಿಲೋಽಪಾಂತರತಮೋ ದೇವಲೋ ಧರ್ಮ ಆಸುರಿಃ ॥ ೫೭ ॥

ಮರೀಚಿಪ್ರಮುಖಾಶ್ಚಾನ್ಯೇ ಸಿದ್ಧೇಶಾಃ ಪಾರದರ್ಶನಾಃ ।
ವಿದಾಮ ನ ವಯಂ ಸರ್ವೇ ಯನ್ಮಾಯಾಂ ಮಾಯಯಾಽಽವೃತಾಃ ॥ ೫೮ ॥

ತಸ್ಯ ವಿಶ್ವೇಶ್ವರಸ್ಯೇದಂ ಶಸ್ತ್ರಂ ದುರ್ವಿಷಹಂ ಹಿ ನಃ ।
ತಮೇವ ಶರಣಂ ಯಾಹಿ ಹರಿಸ್ತೇ ಶಂ ವಿಧಾಸ್ಯತಿ ॥ ೫೯ ॥

ತತೋ ನಿರಾಶೋ ದುರ್ವಾಸಾಃ ಪದಂ ಭಗವತೋ ಯಯೌ ।
ವೈಕುಂಠಾಖ್ಯಂ ಯದಧ್ಯಾಸ್ತೇ ಶ್ರೀನಿವಾಸಃ ಶ್ರಿಯಾ ಸಹ ॥ ೬೦ ॥

ಸಂದಹ್ಯಮಾನೋಽಜಿತಶಸ್ತ್ರವಹ್ನಿನಾ
ತತ್ಪಾದಮೂಲೇ ಪತಿತಃ ಸವೇಪಥುಃ ।
ಆಹಾಚ್ಯುತಾನಂತ ಸದೀಪ್ಸಿತ ಪ್ರಭೋ
ಕೃತಾಗಸಂ ಮಾವ ಹಿ ವಿಶ್ವಭಾವನ ॥ ೬೧ ॥

ಅಜಾನತಾ ತೇ ಪರಮಾನುಭಾವಂ
ಕೃತಂ ಮಯಾಘಂ ಭವತಃ ಪ್ರಿಯಾಣಾಮ್ ।
ವಿಧೇಹಿ ತಸ್ಯಾಪಚಿತಿಂ ವಿಧಾತ-
ರ್ಮುಚ್ಯೇತ ಯನ್ನಾಮ್ನ್ಯುದಿತೇ ನಾರಕೋಽಪಿ ॥ ೬೨ ॥

ಶ್ರೀಭಗವಾನುವಾಚ

ಅಹಂ ಭಕ್ತಪರಾಧೀನೋ ಹ್ಯಸ್ವತಂತ್ರ ಇವ ದ್ವಿಜ ।
ಸಾಧುಭಿರ್ಗ್ರಸ್ತಹೃದಯೋ ಭಕ್ತೈರ್ಭಕ್ತಜನಪ್ರಿಯಃ ॥ ೬೩ ॥

ನಾನು, ಶಂಕರನು, ದಕ್ಷ, ಭೃಗು ಮೊದಲಾದ ಪ್ರಜಾಪತಿಗಳು, ಭೂತೇಶರು, ಸುರೇಶಮುಖ್ಯರು, ಇವರೆಲ್ಲರೂ ಯಾರು ನಿರ್ಮಿಸಿದ ನಿಯಮಗಳಲ್ಲಿ ಬಂಧಿತರಾಗಿರುವೆವೋ, ಅವನ ಆಜ್ಞೆಯನ್ನು ಶಿರಸಾವಹಿಸಿ ನಾವೆಲ್ಲರೂ ಪ್ರಪಂಚದ ಹಿತವನ್ನು ಮಾಡುತ್ತೇವೆ. ಅಂತಹ ಮಹಾಮಹಿಮನಾದ ವಿಷ್ಣುವಿನ ಭಕ್ತನಿಗೆ ದ್ರೋಹವೆಸಗಿರುವ ನಿನಗೆ ರಕ್ಷಣೆ ಯನ್ನೀಯಲು ನಾವು ಸಮರ್ಥರಲ್ಲ ॥ ೫೪ ॥ ಬ್ರಹ್ಮದೇವರು ಹೀಗೆ ದುರ್ವಾಸರನ್ನು ನಿರಾಶಗೊಳಿಸಿದಾಗ ಭಗವಂತನ ಚಕ್ರದ ಬೇಗೆಯಿಂದ ಬೇಯುತ್ತಿದ್ದ ಅವರು ಕೈಲಾಸವಾಸೀ ಭಗವಾನ್ ಶಂಕರನಲ್ಲಿ ಶರಣುಹೊಕ್ಕರು. ಓ ಪರಮೇಶ್ವರಾ ! ನನ್ನನ್ನು ಈ ವಿಷ್ಣು ಚಕ್ರದಿಂದ ಕಾಪಾಡು ಎಂದು ಬೇಡಿದಾಗ ಶಿವನೆಂದನು – ॥ ೫೫ ॥

**ಶ್ರೀಮಹಾದೇವನು ಹೇಳಿದನು –** ದುರ್ವಾಸನೇ! ಯಾವ ಅಪಾರಮಹಿಮನಾದ ಪರಮಾತ್ಮನಲ್ಲಿ ಕೇವಲ ಈ ಬ್ರಹ್ಮ, ಈ ಜೀವರು ಮಾತ್ರವಲ್ಲದೆ ಅನೇಕ ಬ್ರಹ್ಮರು, ಅನೇಕ ಬ್ರಹ್ಮಾಂಡಗಳು ಹುಟ್ಟುತ್ತಿರುತ್ತವೆಯೋ ಮತ್ತು ಲೀನವಾಗುತ್ತಿರುತ್ತವೆಯೋ–ಅಂತಹ ಅನೇಕ ಕೋಟಿ ಬ್ರಹ್ಮಾಂಡಗಳಲ್ಲಿ ನಾವೂ ಕೂಡ ಸಾವಿರಾರು ಬಾರಿ ಹುಟ್ಟಿ ಅವನಲ್ಲೇ ಲೀನವಾಗಿರುತ್ತೇವೆಯೋ ಅಂತಹ ಪ್ರಭುವಿನ ಸಂಬಂಧದಲ್ಲಿ ನಾವು ಏನನ್ನೂ ಮಾಡಲು ಸಮರ್ಥರಲ್ಲ ॥ ೫೬ ॥ ನಾನಾಗಲೀ, ಸನತ್ಕುಮಾರ, ನಾರದ, ಬ್ರಹ್ಮದೇವರು, ಕಪಿಲರು, ಅಪಾಂತರತಮ–ದೇವಲರಾಗಲೀ, ಧರ್ಮ–ಆಸುರೀ–ಮರೀಚಿಯೇ ಮೊದಲಾದ ಸರ್ವಜ್ಞರಾದ ಸಿದ್ಧೇಶ್ವರರಾಗಲೀ ಭಗವಂತನ ಮಾಯೆಯನ್ನು ಅರಿಯೆವು. ಏಕೆಂದರೆ, ನಾವೆಲ್ಲರೂ ಅದೇ ಮಾಯೆಯಿಂದಲೇ ಆವೃತರಾಗಿದ್ದೇವೆ. ॥ ೫೭–೫೮ ॥ ಈ ಚಕ್ರವು ಆ ವಿಶ್ವೇಶ್ವರನಾದ ಮಹಾವಿಷ್ಣುವಿನ ಶಸ್ತ್ರವಾಗಿದೆ. ಇದರ ಉಜ್ವಲವಾದ ಪ್ರಭೆಯನ್ನು ನಾವೂ ಸಹಿಸಲಾರೆವು. ನೀನು ಆ ಶ್ರೀಹರಿಗೆ ಶರಣುಹೋಗು. ಅವನೇ ನಿನಗೆ ಮಂಗಳವನ್ನು ಉಂಟುಮಾಡುತ್ತಾನೆ. ॥ ೫೯ ॥ ಅಲ್ಲಿಯೂ ಕೂಡ ನಿರಾಶರಾದ ದುರ್ವಾಸರು ಲಕ್ಷ್ಮೀಪತಿಯಾದ ಭಗವಂತನು ರಮೆಯೊಂದಿಗೆ ವಾಸಿಸುವ ಪರಮಧಾಮವಾದ ವೈಕುಂಠಕ್ಕೆ ಹೋದರು. ॥ ೬೦ ॥ ದುರ್ವಾಸರು ಭಗವಂತನ ಸುದರ್ಶನದಿಂದ ಬೇಯುತ್ತಿದ್ದರು. ಅವರು ನಡುಗುತ್ತಾ ಭಗವಂತನ ಚರಣಗಳಲ್ಲಿ ಅಡ್ಡಬಿದ್ದರು. ಓ ಅಚ್ಯುತಾ! ಅನಂತಾ! ಸತ್ಪುರುಷರಿಗೆ ಬೇಕಾದವನೇ! ಪ್ರಭುವೇ! ಲೋಕರಕ್ಷಕನೇ! ಅಪರಾಧಿಯಾದ ನನ್ನನ್ನು ರಕ್ಷಿಸು ; ಕಾಪಾಡು ಎಂದು ಅಂಗಲಾಚಿದರು. ॥ ೬೧ ॥ ನಿನ್ನ ಪರಮಾದ್ಭುತವಾದ ಪ್ರಭಾವವನ್ನು ಅರಿಯದೆ ನಾನು ನಿನ್ನ ಪ್ರಿಯಭಕ್ತನಿಗೆ ಅಪರಾಧ ಮಾಡಿಬಿಟ್ಟೆ ಪ್ರಭುವೇ! ನನ್ನನ್ನು ಈ ಸುದರ್ಶನದಿಂದ ಪಾರುಮಾಡು. ನಿನ್ನ ನಾಮೋಚ್ಚಾರಣ ಮಾತ್ರದಿಂದಲೇ ನರಕದಲ್ಲಿರುವ ಜೀವರು ಮುಕ್ತರಾಗಿ ಹೋಗುತ್ತಾರೆ. ॥ ೬೨ ॥

**ಶ್ರೀಭಗವಂತನು ಹೇಳಿದನು –** ದುರ್ವಾಸರೇ! ನಾನು ಸರ್ವಥಾ ಭಕ್ತರಿಗೆ ಅಧೀನನಾಗಿ ಬಿಟ್ಟಿರುವೆನು. ನಾನು ಅಸ್ವತಂತ್ರನು, ನನಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಸಾಧುಗಳಾದ ನನ್ನ ಭಕ್ತರು ನನ್ನ ಹೃದಯವನ್ನು ಕೈವಶಮಾಡಿಕೊಂಡಿದ್ದಾರೆ. ಭಕ್ತರು ನನ್ನನ್ನು ಪ್ರೀತಿಸುವಂತೆ ನಾನೂ ಅವರನ್ನು ಪ್ರೀತಿಸುತ್ತೇನೆ. ॥ ೬೩ ॥

ನಾಹಮಾತ್ಮಾನಮಾಶಾಸೇ ಮದ್ಭಕ್ತೈಃ ಸಾಧುಭಿರ್ವಿನಾ ।
ಶ್ರಿಯಂ ಚಾತ್ಯಂತಿಕೀಂ ಬ್ರಹ್ಮನ್ ಯೇಷಾಂ ಗತಿರಹಂ ಪರಾ
॥ ೬೪ ॥

ಯೇ ದಾರಾಗಾರಪುತ್ರಾಪ್ತಾನ್ ಪ್ರಾಣಾನ್ವಿತ್ತಮಿಮಂ ಪರಮ್ ।
ಹಿತ್ವಾ ಮಾಂ ಶರಣಂ ಯಾತಾಃ ಕಥಂ ತಾಂಸ್ತ್ಯಕ್ತುಮುತ್ಸಹೇ
॥ ೬೫ ॥

ಮಯಿ ನಿರ್ಬದ್ಧಹೃದಯಾಃ ಸಾಧವಃ ಸಮದರ್ಶನಾಃ ।
ವಶೀಕುರ್ವಂತಿ ಮಾಂ ಭಕ್ತ್ಯಾ ಸತ್ ಸ್ತ್ರಿಯಃ ಸತ್ಪತಿಂ ಯಥಾ
॥ ೬೬ ॥

ಮತ್ಸೇವಯಾ ಪ್ರತೀತಂ ಚ ಸಾಲೋಕ್ಯಾದಿಚತುಷ್ಟಯಮ್ ।
ನೇಚ್ಛಂತಿ ಸೇವಯಾ ಪೂರ್ಣಾಃ ಕುತೋಽನ್ಯತ್ಕಾಲವಿದ್ರುತಮ್
॥ ೬೭ ॥

ಸಾಧವೋ ಹೃದಯಂ ಮಹ್ಯಂ ಸಾಧೂನಾಂ ಹೃದಯಂ ತ್ವಹಮ್ ।
ಮದನ್ಯತ್ತೇ ನ ಜಾನಂತಿ ನಾಹಂ ತೇಭ್ಯೋ ಮನಾಗಪಿ
॥ ೬೮ ॥

ಉಪಾಯಂ ಕಥಯಿಷ್ಯಾಮಿ ತವ ವಿಪ್ರ ಶೃಣುಷ್ವ ತತ್ ।
ಅಯಂ ಹ್ಯಾತ್ಮಾಭಿಚಾರಸ್ತೇ ಯತಸ್ತಂ ಯಾತು ವೈ ಭವಾನ್ ।
ಸಾಧುಷು ಪ್ರಹಿತಂ ತೇಜಃ ಪ್ರಹರ್ತುಃ ಕುರುತೇಽಶಿವಮ್
॥ ೬೯ ॥

ತಪೋ ವಿದ್ಯಾ ಚ ವಿಪ್ರಾಣಾಂ ನಿಃಶ್ರೇಯಸಕರೇ ಉಭೇ ।
ತೇ ಏವ ದುರ್ವಿನೀತಸ್ಯ ಕಲ್ಪೇತೇ ಕರ್ತುರನ್ಯಥಾ
॥ ೭೦ ॥

ಬ್ರಹ್ಮಂಸ್ತದ್ಗಚ್ಛ ಭದ್ರಂ ತೇ ನಾಭಾಗತನಯಂ ನೃಪಮ್ ।
ಕ್ಷಮಾಪಯ ಮಹಾಭಾಗಂ ತತಃ ಶಾಂತಿರ್ಭವಿಷ್ಯತಿ
॥ ೭೧ ॥

ಬ್ರಾಹ್ಮಣೋತ್ತಮನೇ! ನನ್ನ ಭಕ್ತರ ಏಕಮಾತ್ರ ಆಶ್ರಯ ನಾನೇ ಆಗಿರುವೆನು. ಆದರಿಂದ ಸಾಧುಸ್ವಭಾವವುಳ್ಳ ನನ್ನ ಭಕ್ತರನ್ನು ಬಿಟ್ಟು ನಾನು ಸ್ವತಃ ನನ್ನನ್ನಾಗಲೀ, ವಿನಾಶರಹಿತಳಾದ ನನ್ನ ಅರ್ಧಾಂಗಿನಿಯಾದ ಲಕ್ಷ್ಮಿಯನ್ನೂ ಬಯಸುವುದಿಲ್ಲ. ॥ ೬೪ ॥ ಯಾವ ಭಕ್ತನು ಪತ್ನೀ, ಪುತ್ರ, ಗೃಹ, ಗುರುಜನರು, ಪ್ರಾಣ, ಧನ, ಇಹಲೋಕ, ಪರಲೋಕ – ಎಲ್ಲವನ್ನೂ ಬಿಟ್ಟು ಕೇವಲ ನನಗೇ ಶರಣುಬಂದಿರುವನೋ, ಅಂತಹವನನ್ನು ನಾನು ಹೇಗೆ ತಾನೇ ತ್ಯಜಿಸಬಲ್ಲೆನು ? ॥ ೬೫ ॥ ಸಾಧ್ವಿಯಾದ ಸ್ತ್ರೀಯು ತನ್ನ ಪಾತಿವ್ರತ್ಯದಿಂದ ಸದಾಚಾರಿಯಾದ ಪತಿಯನ್ನು ವಶಪಡಿಸಿಕೊಳ್ಳುವಂತೆಯೇ ನನ್ನೊಂದಿಗೆ ತಮ್ಮ ಹೃದಯವನ್ನು ಪ್ರೇಮಬಂಧನದಿಂದ ಬಂಧಿಸಿರುವ ಸಮದರ್ಶಿಗಳಾದ ಸಾಧುಗಳು ಭಕ್ತಿಯ ಮೂಲಕ ನನ್ನನ್ನು ವಶಪಡಿಸಿಕೊಂಡು ಬಿಡುತ್ತಾರೆ. ॥ ೬೬ ॥ ನನ್ನ ಅನನ್ಯಪ್ರೇಮಿ ಭಕ್ತರು ನನ್ನ ಸೇವೆಯಿಂದಲೇ ತಮ್ಮನ್ನು ಪರಿಪೂರ್ಣ-ಕೃತಕೃತ್ಯರೆಂದು ತಿಳಿಯುತ್ತಾರೆ. ನನ್ನ ಸೇವೆಯ ಫಲಸ್ವರೂಪವಾಗಿ ಅವರಿಗೆ ಸಾಲೋಕ್ಯ-ಸಾರೂಪ್ಯಾದಿ ಮುಕ್ತಿಗಳು ದೊರಕಿದರೂ ಅವರು ಅದನ್ನೂ ಸ್ವೀಕರಿಸಲು ಬಯಸುವುದಿಲ್ಲ. ಮತ್ತೆ ಕಾಲವಶವಾದ ವಸ್ತುಗಳ ಬಗೆಗೆ ಹೇಳುವುದೇನಿದೆ ? ॥ ೬೭ ॥ ದುರ್ವಾಸರೇ! ಹೆಚ್ಚೇನು ಹೇಳಲಿ ? ಸಾಧುಗಳೇ ನನ್ನ ಹೃದಯಸ್ವರೂಪರಾಗಿದ್ದಾರೆ. ಸಾಧುಗಳಿಗೆ ನಾನು ಹೃದಯಸ್ವರೂಪನಾಗಿರುವೆನು. ಅವರು ನನ್ನನ್ನು ಬಿಟ್ಟು ಬೇರೆ ಏನನ್ನೂ ತಿಳಿಯರು ಹಾಗೂ ನಾನು ಅವರಲ್ಲದೆ ಬೇರೆ ಯಾರನ್ನೂ ಅರಿಯೆ. ॥ ೬೮ ॥ ವಿಪ್ರರೇ! ನಾನೊಂದು ಉಪಾಯವನ್ನು ಹೇಳುತ್ತೇನೆ ; ಕೇಳಿರಿ. ಯಾರ ಅನಿಷ್ಟ ಮಾಡಿರುವುದರಿಂದ ನಿಮಗೆ ಈ ವಿಪತ್ತು ಸಂಭವಿಸಿತೋ, ನೀವು ಅವರ ಬಳಿಯೇ ಹೋಗಿರಿ. ನಿರಪರಾಧಿಗಳಾದ ಸಾಧುಗಳಿಗೆ ಮಾಡಿದ ಅನಿಷ್ಟದಿಂದಾಗಿ ಮಾಡಿದವರಿಗೇ ಅಮಂಗಳ ಉಂಟಾಗುತ್ತದೆ. ॥ ೬೯ ॥

ಬ್ರಾಹ್ಮಣರಿಗೆ ತಪಸ್ಸು ಮತ್ತು ವಿದ್ಯೆಯೇ ಪರಮ ಶ್ರೇಯಸ್ಕರ ಸಾಧನೆಯಾಗಿದೆ ಎಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ಬ್ರಾಹ್ಮಣನು ಉದ್ಧತನಾಗಿ, ಅನ್ಯಾಯಿಯಾದರೆ ಅವೆರಡೂ ವಿಪರೀತ ಫಲವನ್ನು ಕೊಡುತ್ತವೆ. ॥ ೭೦ ॥ ದುರ್ವಾಸರೇ ! ನಿಮಗೆ ಮಂಗಳವಾಗಲಿ. ನೀವು ನಾಭಾಗನಂದನ ಪರಮಭಾಗ್ಯಶಾಲಿ ಅಂಬರೀಷರಾಜನ ಬಳಿಗೆ ಹೋಗಿರಿ. ಅವನಲ್ಲಿ ಕ್ಷಮೆಯಾಚಿಸಿರಿ. ಆಗ ನಿಮಗೆ ಶಾಂತಿಯು ಲಭಿಸುವುದು. ॥ ೭೧ ॥

ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ
ಅಂಬರೀಷಚರಿತೇ ಚತುರ್ಥೋಽಧ್ಯಾಯಃ ॥ ೪ ॥

# ಐದನೆಯ ಅಧ್ಯಾಯ

## ದುರ್ವಾಸರು ದುಃಖದಿಂದ ಪಾರಾದುದು

ಶ್ರೀಶುಕ ಉವಾಚ

ಏವಂ ಭಗವತಾಽಽದಿಷ್ಟೋ ದುರ್ವಾಸಾಶ್ಚಕ್ರತಾಪಿತಃ ।
ಅಂಬರೀಷಮುಪಾವೃತ್ಯ ತತ್ಪಾದೌ ದುಃಖಿತೋಽಗ್ರಹೀತ್ ॥ ೧ ॥

ತಸ್ಯ ಸೋದ್ಯಮನಂ ವೀಕ್ಷ್ಯ ಪಾದಸ್ಪರ್ಶವಿಲಜ್ಜಿತಃ ।
ಅಸ್ತಾವೀತ್ತದ್ಧರೇರಸ್ತ್ರಂ ಕೃಪಯಾ ಪೀಡಿತೋ ಭೃಶಮ್ ॥ ೨ ॥

ಅಂಬರೀಷ ಉವಾಚ

ತ್ವಮಗ್ನಿರ್ಭಗವಾನ್ಸೂರ್ಯಸ್ತ್ವಂ ಸೋಮೋ ಜ್ಯೋತಿಷಾಂ ಪತಿಃ ।
ತ್ವಮಾಪಸ್ತ್ವಂ ಕ್ಷಿತಿರ್ವ್ಯೋಮ ವಾಯುರ್ಮಾತ್ರೇಂದ್ರಿಯಾಣಿ ಚ ॥ ೩ ॥

ಸುದರ್ಶನ ನಮಸ್ತುಭ್ಯಂ ಸಹಸ್ರಾರಾಚ್ಯುತಪ್ರಿಯ ।
ಸರ್ವಾಸ್ತ್ರಘಾತಿನ್ ವಿಪ್ರಾಯ ಸ್ವಸ್ತಿ ಭೂಯಾ ಇಡಸ್ಪತೇ ॥ ೪ ॥

ತ್ವಂ ಧರ್ಮಸ್ತ್ವಂ ಋತಂ ಸತ್ಯಂ ತ್ವಂ ಯಜ್ಞೋಽಖಿಲಯಜ್ಞಭುಕ್ ।
ತ್ವಂ ಲೋಕಪಾಲಃ ಸರ್ವಾತ್ಮಾ ತ್ವಂ ತೇಜಃ ಪೌರುಷಂ ಪರಮ್ ॥ ೫ ॥

ನಮಃ ಸುನಾಭಾಖಿಲಧರ್ಮಸೇತವೇ
ಹ್ಯಧರ್ಮಶೀಲಾಸುರಧೂಮಕೇತವೇ ।
ತ್ರೈಲೋಕ್ಯಗೋಪಾಯ ವಿಶುದ್ಧವರ್ಚಸೇ
ಮನೋಜವಾಯಾದ್ಭುತಕರ್ಮಣೇ ಗೃಣೇ ॥ ೬ ॥

ತ್ವತ್ತೇಜಸಾ ಧರ್ಮಮಯೇನ ಸಂಹೃತಂ
ತಮಃ ಪ್ರಕಾಶಶ್ಚ ಧೃತೋ ಮಹಾತ್ಮನಾಮ್ ।
ದುರತ್ಯಯಸ್ತೇ ಮಹಿಮಾ ಗಿರಾಂ ಪತೇ
ತ್ವದ್ರೂಪಮೇತತ್ಸದಸತ್ಪರಾವರಮ್ ॥ ೭ ॥

ಯದಾ ವಿಸೃಷ್ಟಸ್ತ್ವಮನಂಜನೇನ ವೈ
ಬಲಂ ಪ್ರವಿಷ್ಟೋಽಜಿತ ದೈತ್ಯದಾನವಮ್ ।
ಬಾಹೂದರೋರ್ವಂಘ್ರಿಶಿರೋಧರಾಣಿ
ವೃಶ್ಚನ್ನಜಸ್ರಂ ಪ್ರಧನೇ ವಿರಾಜಸೇ ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ –** ಎಲೈ ಪರೀಕ್ಷಿತನೇ ! ಭಗವಂತನು ಹೀಗೆ ಅಪ್ಪಣೆ ಕೊಡಿಸಿದಾಗ ಸುದರ್ಶನಚಕ್ರದ ಜ್ವಾಲೆಯಿಂದ ಬೇಯುತ್ತಿದ್ದ ದುರ್ವಾಸರು ಮರಳಿ ಅಂಬರೀಷ ರಾಜನ ಬಳಿಗೆ ಹೋಗಿ ಅತ್ಯಂತ ದುಃಖಿತರಾಗಿ ಅವನ ಎರಡೂ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡರು. ॥ ೧ ॥ ದುರ್ವಾಸರ ಈ ಕಾರ್ಯವನ್ನು ನೋಡಿ ಮತ್ತು ತನ್ನ ಪಾದಗಳನ್ನು ಹಿಡಿದು ಕೊಂಡಿದ್ದರಿಂದ ಅಂಬರೀಷನು ಕಡು ನಾಚಿಕೊಂಡು ಅವನ ಹೃದಯ ದಯೆಯಿಂದ ಕರಗಿಹೋಗಿ ಭಗವಂತನ ಸುದರ್ಶನ ಚಕ್ರವನ್ನು ಸ್ತುತಿಸತೊಡಗಿದನು. ॥ ೨ ॥

**ಅಂಬರೀಷನು ಹೇಳುತ್ತಾನೆ –** ಓ ಸುದರ್ಶನಚಕ್ರವೇ ! ನೀನೇ ಅಗ್ನಿಯಾಗಿರುವೆ. ಸರ್ವಸಮರ್ಥನಾದ ಸೂರ್ಯನೂ ನೀನೇ. ಸಮಸ್ತ ನಕ್ಷತ್ರಮಂಡಲದ ಅಧಿಪತಿ ಚಂದ್ರನೂ ನೀನೇ. ಜಲ, ಪೃಥಿವಿ, ಆಕಾಶ, ವಾಯು ಪಂಚತನ್ಮಾತ್ರೆಗಳೂ ಮತ್ತು ಎಲ್ಲ ಇಂದ್ರಿಯಗಳ ರೂಪದಲ್ಲಿಯೂ ನೀನೇ ಆಗಿರುವೆ. ॥ ೩ ॥ ಓ ಸುದರ್ಶನಚಕ್ರಾಧಿ ದೇವತೆಯೇ ! ನಿನಗೆ ನಮಸ್ಕರಿಸುತ್ತೇನೆ. ಸಾವಿರ ಅರಕಾಲುಗಳಿಂದ ಕೂಡಿರುವವನೇ ! ಅಚ್ಯುತಪ್ರಿಯನೇ ! ಸಮಸ್ತ ಅಸ್ತ್ರ-ಶಸ್ತ್ರಗಳನ್ನು ನಾಶಗೊಳಿಸುವ ಭೂಮಂಡಲಕ್ಕೆ ಒಡೆಯ ನಾದವನೇ ! ನೀನು ಈ ಬ್ರಾಹ್ಮಣನನ್ನು ರಕ್ಷಿಸು. ॥ ೪ ॥ ನೀನೇ ಧರ್ಮಸ್ವರೂಪನಾಗಿರುವೆ. ಅಮೃತಸ್ವರೂಪನಾಗಿರುವೆ. ಸತ್ಯ ಸ್ವರೂಪನಾಗಿರುವೆ. ಸಮಸ್ತಯಜ್ಞಗಳೂ ನೀನೇ ; ಯಜ್ಞ ಭೋಕ್ತೃವೂ ನೀನೇ. ಸಮಸ್ತ ಲೋಕಗಳ ರಕ್ಷಕನೂ, ಸರ್ವಲೋಕ ಸ್ವರೂಪನೂ ನೀನೆ. ನೀನು ಪರಮಪುರುಷ ಪರಮಾತ್ಮನ ಶ್ರೇಷ್ಠ ವಾದ ತೇಜಸ್ಸು ಮತ್ತು ಪೌರುಷವೂ ಆಗಿರುವೆ. ॥ ೫ ॥ ಓ ಸುಂದರವಾದ ಸುದರ್ಶನ ಚಕ್ರವೇ ! ನೀನು ಸಮಸ್ತ ಧರ್ಮ ಗಳ ಮರ್ಯಾದೆಗಳನ್ನು ರಕ್ಷಿಸುವವನೇ ! ಅಧರ್ಮವನ್ನು ಆಚರಿ ಸುವ ಅಸುರರನ್ನು ಭಸ್ಮಮಾಡುವ ಸಾಕ್ಷಾತ್ ಅಗ್ನಿಸ್ವರೂಪನು ನೀನೇ ಆಗಿರುವೆ. ನೀನೇ ಮೂರು ಲೋಕಗಳ ರಕ್ಷಕನೂ, ವಿಶುದ್ಧ ತೇಜೋಮಯನಾಗಿರುವೆ. ನಿನ್ನ ಗತಿಯು ಮನೋವೇಗದಂತೆ ಇದ್ದು, ನಿನ್ನ ಕರ್ಮಗಳು ಅದ್ಭುತವಾಗಿವೆ. ನಿನಗೆ ನಮಸ್ಕಾರ ಮಾಡುತ್ತಾ, ಸ್ತೋತ್ರಮಾಡುತ್ತೇನೆ. ॥ ೬ ॥ ವೇದವಾಣಿಗಳಿಗೆ ಅಧೀಶ್ವರನೇ ! ನಿನ್ನ ಧರ್ಮಮಯ ತೇಜಸ್ಸಿನಿಂದ ಅಂಧಕಾರವು ನಾಶವಾಗುತ್ತದೆ. ನಿನ್ನಿಂದಲೇ ಮಹಾಪುರುಷರ ಪ್ರಕಾಶದ ರಕ್ಷಣೆ ಯಾಗುತ್ತದೆ. ನಿನ್ನ ಮಹಿಮೆಯ ಪಾರವನ್ನು ತಿಳಿಯಲು ಯಾರಿಗೂ ಶಕ್ಯವಿಲ್ಲ. ಸದಸದ್ರೂಪನಾದ ಉಚ್ಚ-ನೀಚ ಭಾವನೆಗಳಿಂದ ಕೂಡಿ ರುವ ಸಮಸ್ತ ಕಾರ್ಯಕಾರಣಾತ್ಮಕವಾದ ಪ್ರಪಂಚವು ನಿನ್ನ ಸ್ವರೂ ಪವೇ ಆಗಿದೆ. ॥ ೭ ॥ ಸುದರ್ಶನಚಕ್ರವೇ ! ದೇವತೆಯೇ ! ನಿನ್ನನ್ನು ಯಾರೂ ಗೆಲ್ಲಲಾರರು. ನಿರಂಜನ ಭಗವಂತನು ನಿನ್ನನ್ನು ಪ್ರಯೋ ಗಿಸಿದಾಕ್ಷಣ ನೀನು ದೈತ್ಯ-ದಾನವರ ಸೇನೆಯನ್ನು ಪ್ರವೇಶಿಸಿದಾಗ, ಯುದ್ಧಭೂಮಿಯಲ್ಲಿ ಅವರ ಭುಜಗಳನ್ನು, ಉದರವನ್ನು, ತೊಡೆ ಕಾಲುಗಳನ್ನು, ಕತ್ತನ್ನು ನಿರಂತರವಾಗಿ ಕತ್ತರಿಸುತ್ತಿರುವ ನೀನು ಅತ್ಯಂತ ಶೋಭೆಯಿಂದ ಬೆಳಗುತ್ತಿರುವೆ. ॥ ೮ ॥

ಸ ತ್ವಂ ಜಗತ್ತ್ರಾಣ ಖಲಪ್ರಹಾಣಯೇ
ನಿರೂಪಿತಃ ಸರ್ವಸಹೋ ಗದಾಭೃತಾ ।
ವಿಪ್ರಸ್ಯ ಚಾಸ್ಮತ್ಕುಲದೈವಹೇತವೇ
ವಿಧೇಹಿ ಭದ್ರಂ ತದನುಗ್ರಹೋ ಹಿ ನಃ ॥ ೯ ॥

ಯದ್ಯಸ್ತಿ ದತ್ತಮಿಷ್ಟಂ ವಾ ಸ್ವಧರ್ಮೋ ವಾ ಸ್ವನುಷ್ಠಿತಃ ।
ಕುಲಂ ನೋ ವಿಪ್ರದೈವಂ ಚೇದ್ದ್ವಿಜೋ ಭವತು ವಿಜ್ವರಃ ॥ ೧೦ ॥

ಯದಿ ನೋ ಭಗವಾನ್ ಪ್ರೀತ ಏಕಃ ಸರ್ವಗುಣಾಶ್ರಯಃ ।
ಸರ್ವಭೂತಾತ್ಮಭಾವೇನ ದ್ವಿಜೋ ಭವತು ವಿಜ್ವರಃ ॥ ೧೧ ॥

*ಶ್ರೀಶುಕ ಉವಾಚ*

ಇತಿ ಸಂಸ್ತುವತೋ ರಾಜ್ಞೋ ವಿಷ್ಣುಚಕ್ರಂ ಸುದರ್ಶನಮ್ ।
ಅಶಾಮ್ಯತ್ಸರ್ವತೋ ವಿಪ್ರಂ ಪ್ರದಹದ್ರಾಜಯಾಂಚಯಾ ॥ ೧೨ ॥

ಸ ಮುಕ್ತೋಽಸ್ತ್ರಾಗ್ನಿತಾಪೇನ ದುರ್ವಾಸಾಃ ಸ್ವಸ್ತಿಮಾಂಸ್ತತಃ ।
ಪ್ರಶಶಂಸ ತಮುರ್ವೀಶಂ ಯುಂಜಾನಃ ಪರಮಾಶಿಷಃ ॥ ೧೩ ॥

*ದುರ್ವಾಸಾ ಉವಾಚ*

ಅಹೋ ಅನಂತದಾಸಾನಾಂ ಮಹತ್ತ್ವಂ ದೃಷ್ಟಮದ್ಯ ಮೇ ।
ಕೃತಾಗಸೋಽಪಿ ಯದ್ರಾಜನ್ಮಂಗಲಾನಿ ಸಮೀಹಸೇ ॥ ೧೪ ॥

ದುಷ್ಕರಃ ಕೋ ನು ಸಾಧೂನಾಂ
ದುಸ್ತ್ಯಜೋ ವಾ ಮಹಾತ್ಮನಾಮ್ ।
ಯೈಃ ಸಂಗೃಹೀತೋ ಭಗವಾನ್
ಸಾತ್ವತಾಮೃಷಭೋ ಹರಿಃ ॥ ೧೫ ॥

ಯನ್ನಾಮಶ್ರುತಿಮಾತ್ರೇಣ ಪುಮಾನ್ ಭವತಿ ನಿರ್ಮಲಃ ।
ತಸ್ಯ ತೀರ್ಥಪದಃ ಕಿಂ ವಾ ದಾಸಾನಾಮವಶಿಷ್ಯತೇ ॥ ೧೬ ॥

ರಾಜನ್ನನುಗೃಹೀತೋಽಹಂ ತ್ವಯಾತಿಕರುಣಾತ್ಮನಾ ।
ಮದಘಂ ಪೃಷ್ಠತಃ ಕೃತ್ವಾ ಪ್ರಾಣಾ ಯನ್ಮೇಽಭಿರಕ್ಷಿತಾಃ ॥ ೧೭ ॥

ರಾಜಾ ತಮಕೃತಾಹಾರಃ ಪ್ರತ್ಯಾಗಮನಕಾಂಕ್ಷಯಾ ।
ಚರಣಾವುಪಸಂಗೃಹ್ಯ ಪ್ರಸಾದ್ಯ ಸಮಭೋಜಯತ್ ॥ ೧೮ ॥

ಓ ವಿಶ್ವರಕ್ಷಕನೇ! ನೀನು ರಣಾಂಗಣದಲ್ಲಿ ಎಲ್ಲ ಪ್ರಹಾರಗಳನ್ನು ಸಹಿಸುವ ಸಾಮರ್ಥ್ಯವುಳ್ಳವನು. ನಿನ್ನನ್ನು ಯಾರೂ ಘಾತಿಸಲಾರರು. ಗದಾಧರನಾದ ಭಗವಂತನು ದುಷ್ಟರ ಸಂಹಾರಕ್ಕಾಗಿ ನಿನ್ನನ್ನು ನಿಯಮಿಸಿರುವನು. ದಯಮಾಡಿ ನೀನು ನಮ್ಮ ಕುಲದ ಭಾಗ್ಯೋದಯಕ್ಕಾಗಿ ದುರ್ವಾಸರಿಗೆ ಮಂಗಳವನ್ನುಂಟುಮಾಡು. ಇದೇ ನಮಗೆ ಪರಮಾನುಗ್ರಹವಾಗಿದೆ. ॥ ೯ ॥ ನನ್ನಲ್ಲಿ ಅಲ್ಪ-ಸ್ವಲ್ಪ ದಾನ, ಯಜ್ಞಮಾಡಿದ ಫಲವೇನಾದರೂ ಇದ್ದರೆ, ಅಥವಾ ಸ್ವಧರ್ಮವನ್ನು ಪಾಲಿಸಿದ್ದರೆ, ನಮ್ಮ ವಂಶದವರು ಬ್ರಾಹ್ಮಣರನ್ನೇ ಪರಮಾರಾಧ್ಯವೆಂದು ತಿಳಿಯುತ್ತಿದ್ದರೆ, ದುರ್ವಾಸರ ಉರಿಯನ್ನು ಶಾಂತಗೊಳಿಸು. ॥ ೧೦ ॥ ಭಗವಂತನು ಸಮಸ್ತ ಗುಣಗಳ ಏಕಮಾತ್ರ ಆಶ್ರಯನಾಗಿದ್ದಾನೆ. ನಾನು ಸಮಸ್ತ ಪ್ರಾಣಿಗಳ ಆತ್ಮರೂಪದಲ್ಲಿ ಅವನನ್ನು ದರ್ಶಿಸುತ್ತಿದ್ದರೆ ಹಾಗೂ ಅವನು ನನ್ನ ಮೇಲೆ ಪ್ರಸನ್ನನಾಗಿದ್ದರೆ ದುರ್ವಾಸರ ಹೃದಯದ ತಾಪವನ್ನು (ಉರಿಯನ್ನು) ಇಲ್ಲವಾಗಿಸು. ॥ ೧೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ದುರ್ವಾಸಮುನಿಯನ್ನು ಎಲ್ಲ ಕಡೆಯಿಂದ ಸುಡುತ್ತಿರುವ ಭಗವಂತನ ಸುದರ್ಶನಚಕ್ರವನ್ನು ರಾಜಾ ಅಂಬರೀಷನು ಈ ವಿಧವಾಗಿ ಸ್ತುತಿಸಿದಾಗ ಅವನ ಪ್ರಾರ್ಥನೆಯಂತೆ ಸುದರ್ಶನವು ಶಾಂತವಾಯಿತು. ॥ ೧೨ ॥ ದುರ್ವಾಸರು ಚಕ್ರದ ಉರಿಯಿಂದ ವಿಮುಕ್ತರಾಗಿ, ಸ್ವಸ್ಥಚಿತ್ತರಾದಾಗ ಅವರು ಅಂಬರೀಷನಿಗೆ ಅನೇಕಾನೇಕ ಶುಭಾಶೀರ್ವಾದಗಳನ್ನು ಕೊಡುತ್ತಾ, ಅವನನ್ನು ಪ್ರಶಂಸಿಸಿದರು. ॥೧೩॥

**ದುರ್ವಾಸರು ಹೇಳಿದರು** – ಮಹಾರಾಜಾ! ನೀನು ಧನ್ಯನಾಗಿರುವೆ. ಭಗವಂತನ ಪ್ರೇಮಿ ಭಕ್ತರ ಮಹತ್ವವನ್ನು ಇಂದು ನಾನು ಕಂಡೆ, ನಿನ್ನ ಕುರಿತು ಅಪರಾಧ ಮಾಡಿದೆ. ಹೀಗಿದ್ದರೂ ನೀನು ನನಗಾಗಿ ಮಂಗಲವನ್ನೇ ಬಯಸುತ್ತಿರುವೆ. ॥ ೧೪ ॥ ಭಕ್ತವತ್ಸಲ ಭಗವಾನ್ ಶ್ರೀಹರಿಯ ಚರಣಕಮಲಗಳನ್ನು ಭಕ್ತಿಭಾವದಿಂದ ದೃಢವಾಗಿ ಹಿಡಿದಿರುವ ಸಾಧು-ಸತ್ಪುರುಷರಿಗೆ ಕಠಿಣವಾದ ಕಾರ್ಯವು ಯಾವುದಿದೆ? ಉದಾರ ಹೃದಯವುಳ್ಳ ಮಹಾತ್ಮರು ಯಾವ ವಸ್ತುವನ್ನು ತಾನೇ ಪರಿತ್ಯಾಗ ಮಾಡ ಲಾರರು? ॥ ೧೫ ॥ ಯಾರ ಮಂಗಲಮಯ ನಾಮಗಳ ಶ್ರವಣ ಮಾತ್ರದಿಂದಲೇ ಜೀವಿಯು ನಿರ್ಮಲರಾಗಿ ಹೋಗುವರೋ, ಅಂತಹ ತೀರ್ಥಪಾದನಾದ ಶ್ರೀಭಗವಂತನ ಚರಣಕಮಲಗಳ ದಾಸರಾದ ಭಕ್ತರಿಗೆ ಯಾವ ಕರ್ತವ್ಯವು ತಾನೇ ಶೇಷವಾಗಿ ಉಳಿದಿ ರುತ್ತದೆ? ॥ ೧೬ ॥ ಅಂಬರೀಷ ಮಹರಾಜಾ! ನಿನ್ನ ಹೃದಯವು ಕರುಣಾಭಾವದಿಂದ ಪರಿಪೂರ್ಣವಾಗಿದೆ. ನೀನು ನನ್ನ ಮೇಲೆ ಮಹಾನ್ ಅನುಗ್ರಹವನ್ನು ಮಾಡಿರುವೆ. ಅಯ್ಯಾ! ನೀನು ನನ್ನ ಅಪರಾಧಗಳನ್ನು ಮರೆತು ನನ್ನ ಪ್ರಾಣಗಳನ್ನು ರಕ್ಷಿಸಿರುವೆ. ॥ ೧೭ ॥

ಪರೀಕ್ಷಿತನೇ! ದುರ್ವಾಸರು ಓಡಿಹೋದಂದಿನಿಂದ ಇಂದಿನವರೆಗೆ ಅಂಬರೀಷರಾಜನು ಭೋಜನವನ್ನು ಮಾಡಿರಲಿಲ್ಲ. ಅವನು ಅವರು ಮರಳಿ ಬರುವ ದಾರಿ ಕಾಯುತ್ತಿದ್ದನು. ಈಗ ಅವನು ದುರ್ವಾಸರ ಕಾಲಿಗೆ ಬಿದ್ದು, ಅವರನ್ನೂ ಸಂತೋಷಪಡಿಸಿ, ವಿಧಿವತ್ತಾಗಿ ಭೋಜನವನ್ನು ಮಾಡಿಸಿದನು. ॥ ೧೮ ॥

ಸೋಽಶಿತ್ವಾಽಽದೃತಮಾನೀತಮಾತಿಥ್ಯಂ ಸಾರ್ವಕಾಮಿಕಮ್ ।
ತೃಪ್ತಾತ್ಮಾ ನೃಪತಿಂ ಪ್ರಾಹ ಭುಜ್ಯತಾಮಿತಿ ಸಾದರಮ್ ॥ ೧೯ ॥

ಪ್ರೀತೋಽಸ್ಮ್ಯನುಗೃಹೀತೋಽಸ್ಮಿ ತವ ಭಾಗವತಸ್ಯ ವೈ ।
ದರ್ಶನಸ್ಪರ್ಶನಾಲಾಪೈರಾತಿಥ್ಯೇನಾತ್ಮಮೇಧಸಾ ॥ ೨೦ ॥

ಕರ್ಮಾವದಾತಮೇತತ್ತೇ ಗಾಯಂತಿ ಸ್ವಃಸ್ತ್ರಿಯೋ ಮುಹುಃ ।
ಕೀರ್ತಿಂ ಪರಮಪುಣ್ಯಾಂ ಚ ಕೀರ್ತಯಿಷ್ಯತಿ ಭೂರಿಯಮ್ ॥ ೨೧ ॥

ಶ್ರೀಶುಕ ಉವಾಚ

ಏವಂ ಸಂಕೀರ್ತ್ಯ ರಾಜಾನಂ ದುರ್ವಾಸಾಃ ಪರಿತೋಷಿತಃ ।
ಯಯೌ ವಿಹಾಯಸಾಽಽಮಂತ್ರ್ಯ ಬ್ರಹ್ಮಲೋಕಮಹೈತುಕಮ್ ॥ ೨೨ ॥

ಸಂವತ್ಸರೋಽತ್ಯಗಾತ್ತಾವದ್ ಯಾವತಾ ನಾಗತೋ ಗತಃ ।
ಮುನಿಸ್ತದ್ದರ್ಶನಾಕಾಂಕ್ಷೀ ರಾಜಾಽಬ್ಭಕ್ಷೋ ಬಭೂವ ಹ ॥ ೨೩ ॥

ಗತೇ ಚ ದುರ್ವಾಸಸಿ ಸೋಽಂಬರೀಷೋ
ದ್ವಿಜೋಪಯೋಗಾತಿಪವಿತ್ರಮಾಹರತ್ ।
ಋಷೇರ್ವಿಮೋಕ್ಷಂ ವ್ಯಸನಂ ಚ ಬುದ್ಧ್ವಾ
ಮೇನೇ ಸ್ವವೀರ್ಯಂ ಚ ಪರಾನುಭಾವಮ್ ॥ ೨೪ ॥

ಏವಂವಿಧಾನೇಕಗುಣಃ ಸ ರಾಜಾ
ಪರಾತ್ಮನಿ ಬ್ರಹ್ಮಣಿ ವಾಸುದೇವೇ ।
ಕ್ರಿಯಾಕಲಾಪೈಃ ಸಮುವಾಹ ಭಕ್ತಿಂ
ಯಯಾಽಽವಿರಿಂಚ್ಯಾನ್ನಿರಯಾಂಶ್ಚಕಾರ ॥ ೨೫ ॥

ಅಥಾಂಬರೀಷಸ್ತನಯೇಷು ರಾಜ್ಯಂ
ಸಮಾನಶೀಲೇಷು ವಿಸೃಜ್ಯ ಧೀರಃ ।
ವನಂ ವಿವೇಶಾತ್ಮನಿ ವಾಸುದೇವೇ
ಮನೋ ದಧದ್ಧ್ವಸ್ತಗುಣಪ್ರವಾಹಃ ॥ ೨೬ ॥

ಇತ್ಯೇತತ್ಪುಣ್ಯಮಾಖ್ಯಾನಮಂಬರೀಷಸ್ಯ ಭೂಪತೇಃ ।
ಸಂಕೀರ್ತಯನ್ನನುಧ್ಯಾಯನ್ ಭಕ್ತೋ ಭಗವತೋ ಭವೇತ್ ॥ ೨೭ ॥

ಅಂಬರೀಷನು ಅತಿ ಆದರದಿಂದ ಅತಿಥಿಗೆ ಯೋಗ್ಯವಾದ ಎಲ್ಲ ವಿಧದ ಭೋಜನ ಸಾಮಗ್ರಿಯನ್ನು ತರಿಸಿದನು. ದುರ್ವಾಸರು ಭೋಜನಮಾಡಿ ತೃಪ್ತರಾದರು. ಆಗ ಅವರು ಆದರದಿಂದ ರಾಜನೇ! ಇನ್ನು ನೀನೂ ಭೋಜನವನ್ನು ಮಾಡು ಎಂದು ನುಡಿದರು. ॥ ೧೯ ॥ ಅಂಬರೀಷನೇ! ನೀನು ಭಗವಂತನಿಗೆ ಪರಮ ಪ್ರಿಯಭಕ್ತನಾಗಿರುವೆ. ನಿನ್ನ ದರ್ಶನ, ಸ್ಪರ್ಶ, ಸಂಭಾಷಣ ಮತ್ತು ಮನಸ್ಸನ್ನು ಭಗವಂತನ ಕಡೆಗೆ ಪ್ರವೃತ್ತಗೊಳಿಸುವಂತಹ ಆತಿಥ್ಯದಿಂದ ನಾನು ಅತ್ಯಂತ ಸಂತೋಷಗೊಂಡಿರುವೆನು; ಅನುಗ್ರಹಿತನಾಗಿರುವೆನು. ॥ ೨೦ ॥ ಸ್ವರ್ಗದ ದೇವಾಂಗನೆಯರು ಪದೇ-ಪದೇ ನಿನ್ನ ಈ ಉಜ್ವಲ ಚರಿತ್ರೆಯನ್ನು ಕೊಂಡಾಡುವರು. ಈ ಭೂಮಂಡಲದಲ್ಲಿರುವ ಜನರೂ ಕೂಡ ಪರಮ ಪುಣ್ಯಮಯವಾದ ನಿನ್ನ ಕೀರ್ತಿಯನ್ನು ಸಂಕೀರ್ತನೆ ಮಾಡುತ್ತಾ ಇರುವರು.॥ ೨೧॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ದುರ್ವಾಸರು ಬಹಳ ಸಂತುಷ್ಟರಾಗಿ ಅಂಬರೀಷರಾಜನ ಸದ್ಗುಣಗಳನ್ನು ಪ್ರಶಂಸಿಸುತ್ತಾ , ಅವನಿಂದ ಬೀಳ್ಕೊಂಡು, ಕೇವಲ ನಿಷ್ಕಾಮ ಕರ್ಮದಿಂದಲೇ ದೊರೆಯಬಹುದಾದ ಬ್ರಹ್ಮಲೋಕಕ್ಕಾಗಿ ಆಕಾಶ ಮಾರ್ಗದಿಂದ ಪ್ರಯಾಣಮಾಡಿದರು. ॥ ೨೨ ॥ ರಾಜನೇ! ಸುದರ್ಶನಚಕ್ರದಿಂದ ಭಯಗೊಂಡು ದುರ್ವಾಸರು ಓಡಿಹೋದ ಅಂದಿನಿಂದ, ಅವರು ಮರಳಿ ಬರುವ ವೇಳೆಗೆ ಒಂದು ವರ್ಷ ಕಳೆದುಹೋಗಿತ್ತು. ಇಷ್ಟು ದಿನಗಳವರೆಗೂ ಅಂಬರೀಷರಾಜನು ಅವರ ದರ್ಶನದ ಆಕಾಂಕ್ಷೆಯಿಂದ ಕೇವಲ ನೀರು ಕುಡಿದು ಕೊಂಡೇ ಇದ್ದನು. ॥ ೨೩ ॥

ದುರ್ವಾಸರು ಹೊರಟುಹೋದ ಬಳಿಕ ಅವರು ಭೋಜನ ಮಾಡಿದ ಮೇಲೆ ಮಿಕ್ಕಿ ಉಳಿದಿರುವ ಅತ್ಯಂತ ಪವಿತ್ರವಾದ ಅನ್ನವನ್ನು ಅಂಬರೀಷನು ಊಟಮಾಡಿದನು. ತನ್ನ ಕಾರಣದಿಂದಲೇ ದುರ್ವಾಸರಿಗೆ ಉಂಟಾದ ದುಃಖ ಹಾಗೂ ತನ್ನ ಪ್ರಾರ್ಥನೆಯಿಂದಲೇ ಆದರ ನಿವೃತ್ತಿ ಎರಡೂ ತನ್ನಿಂದಲೇ ನಡೆದಿದ್ದರೂ, ಇದನ್ನು ಭಗವಂತನ ಮಹಿಮೆ ಎಂದೇ ಅಂಬರೀಷನು ತಿಳಿದನು. ॥ ೨೪ ॥ ಅಂಬರೀಷ ಮಹಾರಾಜನಲ್ಲಿ ಇಂತಹ ಅನೇಕ ಗುಣಗಳಿದ್ದವು. ತನ್ನ ಕರ್ಮಗಳ ಮೂಲಕ ಅವನು ಪರಬ್ರಹ್ಮ ಪರಮಾತ್ಮಾ ಶ್ರೀಭಗವಂತನಲ್ಲಿ ಭಕ್ತಿಭಾವವನ್ನು ಅಭಿವೃದ್ಧಿಪಡಿಸುತ್ತಲೇ ಇದ್ದನು. ಆ ಭಕ್ತಿಯ ಪ್ರಭಾವದಿಂದ ಅವನು ಬ್ರಹ್ಮಲೋಕದವರೆಗಿನ ಸಮಸ್ತ ಭೋಗಗಳನ್ನು ನರಕದಂತೆ ತಿಳಿಯುತ್ತಿದ್ದನು. ॥ ೨೫ ॥

ಅನಂತರ ಅಂಬರೀಷ ರಾಜನು ತನ್ನಂತೆಯೇ ಇದ್ದ ಭಕ್ತರಾದ ಪುತ್ರರಿಗೆ ರಾಜ್ಯವನ್ನು ಒಪ್ಪಿಸಿ, ಸ್ವತಃ ತಪಸ್ಸಿಗಾಗಿ ಕಾಡಿಗೆ ತೆರಳಿದನು. ಅಲ್ಲಿ ಧೀರನಾದ ಅವನು ಆತ್ಮಸ್ವರೂಪನಾದ ವಾಸುದೇವನಲ್ಲಿ ತನ್ನ ಮನಸ್ಸನ್ನು ಲೀನಗೊಳಿಸಿ ಗುಣಗಳ ಪ್ರವಾಹರೂಪವಾದ ಪ್ರಪಂಚದಿಂದ ಮುಕ್ತನಾಗಿ ಹೋದನು. ॥ ೨೬ ॥ ಪರೀಕ್ಷಿತನೇ! ಮಹಾರಾಜಾ ಅಂಬರೀಷನ ಈ ಆಖ್ಯಾನವು ಪರಮ ಪವಿತ್ರವಾಗಿದೆ. ಇದನ್ನು ಸಂಕೀರ್ತನೆ, ಸ್ಮರಣೆ ಮಾಡುವವನು ಅಂಬರೀಷನಂತೆ ಭಗವಂತನ ಭಕ್ತನಾಗಿ ಹೋಗುತ್ತಾನೆ. ॥ ೨೭ ॥

*ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ ಅಂಬರೀಷಚರಿತಂ ನಾಮ ಪಂಚಮೋಽಧ್ಯಾಯಃ ॥ ೫ ॥

# ಆರನೆಯ ಅಧ್ಯಾಯ

## ಇಕ್ಷ್ವಾಕುವಂಶದ ವರ್ಣನೆ, ಮಾಂಧಾತಾ ಮತ್ತು ಸೌಭರೀ ಋಷಿಯ ಕಥೆ

ಶ್ರೀಶುಕ ಉವಾಚ

ವಿರೂಪಃ ಕೇತುಮಾಞ್ಛಂಭುರಂಬರೀಷಸುತಾಸ್ತ್ರಯಃ ।
ವಿರೂಪಾತ್ ಪೃಷದಶ್ವೋಽಭೂತ್ತತ್ಪುತ್ರಸ್ತು ರಥೀತರಃ ॥ ೧ ॥

ರಥೀತರಸ್ಯಾಪ್ರಜಸ್ಯ ಭಾರ್ಯಾಯಾಂ ತಂತವೇಽರ್ಥಿತಃ ।
ಅಂಗಿರಾ ಜನಯಾಮಾಸ ಬ್ರಹ್ಮವರ್ಚಸ್ವಿನಃ ಸುತಾನ್ ॥ ೨ ॥

ಏತೇ ಕ್ಷೇತ್ರೇ ಪ್ರಸೂತಾ ವೈ ಪುನಸ್ತ್ವಾಂಗಿರಸಾಃ ಸ್ಮೃತಾಃ ।
ರಥೀತರಾಣಾಂ ಪ್ರವರಾಃ ಕ್ಷತ್ರೋಪೇತಾ ದ್ವಿಜಾತಯಃ ॥ ೩ ॥

ಕ್ಷುವತಸ್ತು ಮನೋರ್ಜಜ್ಞೇ ಇಕ್ಷ್ವಾಕುರ್ಘ್ರಾಣತಃ ಸುತಃ ।
ತಸ್ಯ ಪುತ್ರಶತಜ್ಯೇಷ್ಠಾ ವಿಕುಕ್ಷಿನಿಮಿದಂಡಕಾಃ ॥ ೪ ॥

ತೇಷಾಂ ಪುರಸ್ತಾದಭವನ್ನಾರ್ಯಾವರ್ತೇ ನೃಪಾ ನೃಪ ।
ಪಂಚವಿಂಶತಿಃ ಪಶ್ಚಾಚ್ಚ ತ್ರಯೋ ಮಧ್ಯೇ ಪರೇಽನ್ಯತಃ ॥ ೫ ॥

ಸ ಏಕದಾಷ್ಟಕಾಶ್ರಾದ್ಧೇ ಇಕ್ಷ್ವಾಕುಃ ಸುತಮಾದಿಶತ್ ।
ಮಾಂಸಮಾನೀಯತಾಂ ಮೇಧ್ಯಂ ವಿಕುಕ್ಷೇ ಗಚ್ಛ ಮಾಚಿರಮ್ ॥ ೬ ॥

ತಥೇತಿ ಸ ವನಂ ಗತ್ವಾ ಮೃಗಾನ್ಹತ್ವಾ ಕ್ರಿಯಾರ್ಹಣಾನ್ ।
ಶ್ರಾಂತೋ ಬುಭುಕ್ಷಿತೋ ವೀರಃ ಶಶಂ ಚಾದದಪಸ್ಮೃತಿಃ ॥ ೭ ॥

ಶೇಷಂ ನಿವೇದಯಾಮಾಸ ಪಿತ್ರೇ ತೇನ ಚ ತದ್ಗುರುಃ ।
ಚೋದಿತಃ ಪ್ರೋಕ್ಷಣಾಯಾಹ ದುಷ್ಟಮೇತದಕರ್ಮಕಮ್ ॥ ೮ ॥

ಜ್ಞಾತ್ವಾ ಪುತ್ರಸ್ಯ ತತ್ಕರ್ಮ ಗುರುಣಾಭಿಹಿತಂ ನೃಪಃ ।
ದೇಶಾನ್ನಿಃಸಾರಯಾಮಾಸ ಸುತಂ ತ್ಯಕ್ತವಿಧಿಂ ರುಷಾ ॥ ೯ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ಪರೀಕ್ಷಿತನೇ! ಅಂಬರೀಷನಿಗೆ ವಿರೂಪ, ಕೇತುಮಾನ್ ಮತ್ತು ಶಂಭು ಎಂಬ ಮೂವರು ಪುತ್ರರಿದ್ದರು. ವಿರೂಪನ ಮಗ ಪೃಷದಶ್ವ ಹಾಗೂ ಪೃಷದಶ್ವನ ಪುತ್ರ ರಥೀತರನಾಗಿದ್ದನು. ॥ ೧ ॥ ರಥೀತರನು ಸಂತಾನಹೀನನಾಗಿದ್ದನು. ವಂಶಪರಂಪರೆಯ ರಕ್ಷಣೆಗಾಗಿ ಅವನು ಅಂಗೀರಸ ಮಹರ್ಷಿಯನ್ನು ಪ್ರಾರ್ಥಿಸಿದನು. ಅವನ ಪ್ರಾರ್ಥನೆಯಂತೆ ಅಂಗೀರಸನು ರಥೀತರನ ಕ್ಷೇತ್ರದಲ್ಲಿ ಬ್ರಹ್ಮವರ್ಚಸ್ವಿಗಳಾದ ಹಲವಾರು ಪುತ್ರರನ್ನು ಪಡೆದನು. ॥ ೨ ॥ ಇವರೆಲ್ಲರೂ ರಥೀತರನ ಕ್ಷೇತ್ರಜರಾದ್ದರಿಂದ ಇವರ ಗೋತ್ರವು ಅದೇ ಆಗ ಬೇಕಾಗಿತ್ತು. ಹೀಗಿದ್ದರೂ ಅವರು ಆಂಗೀರಸರೆಂದೇ ಕರೆಯಲ್ಪಟ್ಟರು. ಇವರೇ ರಥೀತರ ವಂಶದವರ ಪ್ರವರ (ಕುಲದಲ್ಲಿ ಸರ್ವ ಶ್ರೇಷ್ಠ ಪುರುಷ) ಪ್ರವರ್ತಕರಾದರು. ಏಕೆಂದರೆ, ಇವರು ಕ್ಷತ್ರೋಪೇತ ಬ್ರಾಹ್ಮಣರಾಗಿದ್ದರು. ಕ್ಷತ್ರಿಯರು ಮತ್ತು ಬ್ರಾಹ್ಮಣರು ಎರಡೂ ಗೋತ್ರಗಳೊಂದಿಗೆ ಇವರ ಸಂಬಂಧವಿತ್ತು. ॥ ೩ ॥

ಪರೀಕ್ಷಿತನೇ! ಒಮ್ಮೆ ಮನುವು ಸೀನಿದಾಗ ಅವನ ಮೂಗಿನಿಂದ ಇಕ್ಷ್ವಾಕು ಎಂಬ ಮಗನು ಹುಟ್ಟಿದನು. ಇಕ್ಷ್ವಾಕುವಿಗೆ ನೂರುಮಂದಿ ಮಕ್ಕಳಿದ್ದರು. ಅವರಲ್ಲಿ ವಿಕುಕ್ಷಿ, ನಿಮಿ ಮತ್ತು ದಂಡಕರೆಂಬ ಮೂವರು ಹಿರಿಯರಾಗಿದ್ದರು. ॥ ೪ ॥ ರಾಜೇಂದ್ರನೇ! ಅವರಿಂದ ಕಿರಿಯವರಾದ ಇಪ್ಪತ್ತೈದು ಪುತ್ರರು ಆರ್ಯಾವರ್ತದ ಪೂರ್ವಭಾಗವನ್ನು ಮತ್ತು ಇಪ್ಪತ್ತೈದು ಮಂದಿ ಪಶ್ಚಿಮಭಾಗವನ್ನು ಆಳುತ್ತಿದ್ದರು. ವಿಕುಕ್ಷಿ ಮೊದಲಾದ ಮೂವರು ಮಧ್ಯಭಾಗಕ್ಕೆ ಅಧಿಪತಿಗಳಾದರು. ಉಳಿದ ನಲವತ್ತೇಳು ಮಂದಿ ದಕ್ಷಿಣೋತ್ತರ ಪ್ರಾಂತಕ್ಕೆ ಅಧಿಪತಿಗಳಾದರು. ॥ ೫ ॥ ಒಮ್ಮೆ ಇಕ್ಷ್ವಾಕುವು ಅಷ್ಟಕಾ ಶ್ರಾದ್ಧದ ಸಮಯದಲ್ಲಿ ತನ್ನ ಹಿರಿಯ ಮಗನಿಗೆ – 'ಎಲೈ ವಿಕುಕ್ಷಿಯೇ! ಬೇಗನೇ ಹೋಗಿ ಶ್ರಾದ್ಧಕ್ಕೆ ಯೋಗ್ಯವಾದ ಮಾಂಸವನ್ನು ತೆಗೆದುಕೊಂಡು ಬಾ' ಎಂದು ಆಜ್ಞಾಪಿಸಿದನು. ॥ ೬ ॥ ವೀರ ವಿಕುಕ್ಷಿಯು 'ಹಾಗೆಯೇ ಆಗಲಿ' ಎಂದು ಹೇಳಿ ವನಕ್ಕೆ ಹೋದನು. ಅಲ್ಲಿ ಅವನು ಶ್ರಾದ್ಧಕ್ಕೆ ಯೋಗ್ಯವಾದ ಬಹಳಷ್ಟು ಪಶುಗಳನ್ನು ಬೇಟೆಯಾಡಿದನು. ಅವನು ತುಂಬಾ ಬಳಲಿದ್ದನು. ಹಸಿವೆಯೂ ಆಗಿತ್ತು. ಆದರಿಂದ ಶ್ರಾದ್ಧಕ್ಕಾಗಿ ಕೊಂದಿರುವ ಪಶುಗಳನ್ನು ಸ್ವತಃ ತಿನ್ನಬಾರದೆಂಬುದನ್ನು ಮರೆತು, ಅವನು ಒಂದು ಮೊಲದ ಮಾಂಸವನ್ನು ತಿಂದುಬಿಟ್ಟನು. ॥ ೭ ॥ ವಿಕುಕ್ಷಿಯು ಉಳಿದಿರುವ ಮಾಂಸವನ್ನು ತಂದು ತಂದೆಗೆ ಕೊಟ್ಟನು. ಇಕ್ಷ್ವಾಕುವು ಗುರುಗಳಿಗೆ ಅದನ್ನು ಪ್ರೋಕ್ಷಿಸಲು ಹೇಳಿದಾಗ, ಗುರುಗಳು ಹೇಳಿದರು – ಈ ಮಾಂಸವು ದೂಷಿತವಾಗಿದೆ ಹಾಗೂ ಶ್ರಾದ್ಧಕ್ಕೆ ಅಯೋಗ್ಯವಾಗಿದೆ. ॥ ೮ ॥ ಪರೀಕ್ಷಿತನೇ! ಗುರುಗಳು ಹೇಳಿದಾಗ ಇಕ್ಷ್ವಾಕು ರಾಜನು ತನ್ನ ಮಗನನ್ನು ವಿಚಾರಿಸಿ, ಅವನ ಕೃತ್ಯವನ್ನು ತಿಳಿದುಕೊಂಡನು. ಶಾಸ್ತ್ರವಿಧಿಯನ್ನು ಉಲ್ಲಂಘಿಸಿದ ಪುತ್ರನನ್ನು ಕ್ರೋಧಗೊಂಡು ತನ್ನ ದೇಶದಿಂದಲೇ ಓಡಿಸಿಬಿಟ್ಟನು. ॥ ೯ ॥

ಸ ತು ವಿಪ್ರೇಣ ಸಂವಾದಂ ಜ್ಞಾಪಕೇನ ಸಮಾಚರನ್ ।
ತ್ಯಕ್ತ್ವಾ ಕಲೇವರಂ ಯೋಗೀ ಸ ತೇನಾವಾಪ ಯತ್ಪರಮ್
॥ ೧೦ ॥

ಪಿತರ್ಯುಪರತೇಽಭ್ಯೇತ್ಯ ವಿಕುಕ್ಷಿಃ ಪೃಥಿವೀಮಿಮಾಮ್ ।
ಶಾಸದೀಜೇ ಹರಿಂ ಯಜ್ಞೈಃ ಶಶಾದ ಇತಿ ವಿಶ್ರುತಃ
॥ ೧೧ ॥

ಪುರಂಜಯಸ್ತಸ್ಯ ಸುತ ಇಂದ್ರವಾಹ ಇತೀರಿತಃ ।
ಕಕುತ್ಸ್ಥ ಇತಿ ಚಾಪ್ಯುಕ್ತಃ ಶೃಣು ನಾಮಾನಿ ಕರ್ಮಭಿಃ
॥ ೧೨ ॥

ಕೃತಾಂತ ಆಸೀತ್ಸಮರೋ ದೇವಾನಾಂ ಸಹ ದಾನವೈಃ ।
ಪಾರ್ಷ್ಣಿಗ್ರಾಹೋ ವೃತೋ ವೀರೋ ದೇವೈರ್ದೈತ್ಯಪರಾಜಿತೈಃ
॥ ೧೩ ॥

ವಚನಾದ್ದೇವದೇವಸ್ಯ ವಿಷ್ಣೋರ್ವಿಶ್ವಾತ್ಮನಃ ಪ್ರಭೋಃ ।
ವಾಹನತ್ವೇ ವೃತಸ್ತಸ್ಯ ಬಭೂವೇಂದ್ರೋ ಮಹಾವೃಷಃ
॥ ೧೪ ॥

ಸ ಸಂನದ್ಧೋ ಧನುರ್ದಿವ್ಯಮಾದಾಯ ವಿಶಿಖಾಂಛಿತಾನ್ ।
ಸ್ತೂಯಮಾನಃ ಸಮಾರುಹ್ಯ ಯುಯುತ್ಸುಃ ಕಕುದಿ ಸ್ಥಿತಃ
॥ ೧೫ ॥

ತೇಜಸಾಽಽಪ್ಯಾಯಿತೋ ವಿಷ್ಣೋಃ ಪುರುಷಸ್ಯ ಪರಾತ್ಮನಃ ।
ಪ್ರತೀಚ್ಯಾಂ ದಿಶಿ ದೈತ್ಯಾನಾಂ ನ್ಯರುಣತ್ತ್ರಿದಶೈಃ ಪುರಮ್
॥ ೧೬ ॥

ತೈಸ್ತಸ್ಯ ಚಾಭೂತ್ಪ್ರಧನಂ ತುಮುಲಂ ಲೋಮಹರ್ಷಣಮ್ ।
ಯಮಾಯ ಭಲ್ಲೈರನಯದ್ದೈತ್ಯಾನ್ಯೇಽಭಿಯಯುರ್ಮೃಧೇ
॥ ೧೭ ॥

ತಸ್ಯೇಷುಪಾತಾಭಿಮುಖಂ ಯುಗಾಂತಾಗ್ನಿಮಿವೋಲ್ಬಣಮ್ ।
ವಿಸೃಜ್ಯ ದುದ್ರುವುರ್ದೈತ್ಯಾ ಹನ್ಯಮಾನಾಃ ಸ್ವಮಾಲಯಮ್
॥ ೧೮ ॥

ಜಿತ್ವಾ ಪುರಂ ಧನಂ ಸರ್ವಂ ಸಶ್ರೀಕಂ ವಜ್ರಪಾಣಯೇ ।
ಪ್ರತ್ಯಯಚ್ಛತ್ಸ ರಾಜರ್ಷಿರಿತಿ ನಾಮಭಿರಾಹೃತಃ
॥ ೧೯ ॥

ಪುರಂಜಯಸ್ಯ ಪುತ್ರೋಽಭೂದನೇನಾಸ್ತತ್ಸುತಃ ಪೃಥುಃ ।
ವಿಶ್ವರಂಧಿಸ್ತತಶ್ಚಂದ್ರೋ ಯುವನಾಶ್ವಶ್ಚ ತತ್ಸುತಃ
॥ ೨೦ ॥

ಅನಂತರ ರಾಜಾ ಇಕ್ಷ್ವಾಕುವು ತನ್ನ ಗುರುಗಳಾದ ವಸಿಷ್ಠರೊಡನೆ ಜ್ಞಾನದ ವಿಷಯವಾಗಿ ಚರ್ಚಿಸಿ ಜ್ಞಾನಿಯಾಗಿ ಯೋಗದ ಮೂಲಕ ಶರೀರವನ್ನು ಪರಿತ್ಯಜಿಸಿ ಅವನು ಪರಮಪದವನ್ನು ಪಡೆದು ಕೊಂಡನು. ॥ ೧೦ ॥ ತಂದೆಯ ದೇಹಾಂತವಾದಾಗ ವಿಕುಕ್ಷಿಯು ತನ್ನ ರಾಜಧಾನಿಗೆ ಮರಳಿ ಈ ಪೃಥಿವಿಯ ಶಾಸನವನ್ನು ಮಾಡತೊಡಗಿದನು. ಅವನು ಹಲವಾರು ಯಜ್ಞಗಳಿಂದ ಭಗವಂತನನ್ನು ಆರಾಸಿದನು. ಜಗತ್ತಿನಲ್ಲಿ ಅವನು ಶಶಾದ ಎಂಬ ಹೆಸರಿನಿಂದ ಪ್ರಸಿದ್ಧನಾದನು. ॥ ೧೧ ॥ ವಿಕುಕ್ಷಿಯ ಪುತ್ರನ ಹೆಸರು ಪುರಂಜಯನೆಂದಿತ್ತು. ಅವನನ್ನೇ ಕೆಲವರು 'ಇಂದ್ರವಾಹ' ಮತ್ತು ಕೆಲವರು 'ಕಕುಸ್ಥ' ಎಂದು ಹೇಳುತ್ತಿದ್ದರು. ಯಾವ ಕರ್ಮಗಳಿಂದ ಇವನಿಗೆ ಈ ಹೆಸರುಗಳು ಬಂತೆಂಬುದನ್ನು ಕೇಳು. ॥ ೧೨ ॥

ಸತ್ಯಯುಗದ ಕೊನೆಯಲ್ಲಿ ದೇವ-ದಾನವರ ಘನಘೋರ ಸಂಗ್ರಾಮವಾಗಿತ್ತು. ಆದರಲ್ಲಿ ಎಲ್ಲ ದೇವತೆಗಳು ದೈತ್ಯರಿಂದ ಪರಾಭವಗೊಂಡರು. ಆಗ ದೇವತೆಗಳು ವೀರ ಪುರಂಜಯನನ್ನು ಸಹಾಯಕ್ಕಾಗಿ ತಮ್ಮ ಮಿತ್ರನನ್ನಾಗಿಸಿಕೊಂಡರು. ॥ ೧೩ ॥ ಪುರಂಜಯನು ಹೇಳಿದನು – 'ದೇವೇಂದ್ರನು ನನಗೆ ವಾಹನನಾದರೆ ನಾನು ಯುದ್ಧವನ್ನು ಮಾಡಬಲ್ಲೆನು.' ಮೊದಲಿಗೆ ದೇವೇಂದ್ರನು ನಿರಾಕರಿಸಿದನು. ಆದರೆ ದೇವತೆಗಳ ಆರಾಧ್ಯದೇವನಾದ ಸರ್ವಶಕ್ತಿವಂತನಾದ ವಿಶ್ವಾತ್ಮಾ ಭಗವಂತನ ಮಾತನ್ನು ಮನ್ನಿಸಿ ಇಂದ್ರನು ಒಂದು ದೊಡ್ಡ ಎತ್ತಾಗಿ ಪರಿವರ್ತನೆಗೊಂಡನು. ॥ ೧೪ ॥ ಸರ್ವಾಂತರ್ಯಾಮಿಯಾದ ಭಗವಾನ್ ವಿಷ್ಣುವು ಪುರಂಜಯನಲ್ಲಿ ತನ್ನ ಶಕ್ತಿಯನ್ನು ತುಂಬಿದನು. ಅವನು ಕವಚವನ್ನು ಧರಿಸಿಕೊಂಡು ದಿವ್ಯ ಧನುಸ್ಸು ಮತ್ತು ಹರಿತವಾದ ಬಾಣಗಳನ್ನೆತ್ತಿಕೊಂಡನು. ಅನಂತರ ಆ ಎತ್ತನ್ನು ಏರಿ ಅವನು ಅದರ ಹಿಳಿಲಿನ (ಕಕುದ್) ಹತ್ತಿರ ಕುಳಿತನು. ಹೀಗೆ ಅವನು ಯುದ್ಧಕ್ಕಾಗಿ ಸಿದ್ಧನಾದಾಗ ದೇವತೆಗಳು ಅವನನ್ನು ಸ್ತುತಿಸತೊಡಗಿದರು. ದೇವತೆಗಳನ್ನು ಜೊತೆಯಾಗಿಸಿಕೊಂಡು ಅವನು ಪಶ್ಚಿಮ ದಿಕ್ಕಿನಿಂದ ದೈತ್ಯರ ನಗರವನ್ನು ಆಕ್ರಮಿಸಿದನು. ॥ ೧೫-೧೬ ॥ ವೀರ ಪುರಂಜನಯನಿಗೂ ದೈತ್ಯರಿಗೂ ಅತ್ಯಂತ ಘೋರ ರೋಮಾಂಚಕಾರಿ ಸಂಗ್ರಾಮ ನಡೆಯಿತು. ಯುದ್ಧದಲ್ಲಿ ತನ್ನೆದುರಿಗೆ ಬಂದ ದೈತ್ಯರೆಲ್ಲರನ್ನು ಪುರಂಜಯನು ಬಾಣಗಳಿಂದ ಯಮಸದನಕ್ಕೆ ಅಟ್ಟಿದನು. ॥೧೭॥ ಪ್ರಳಯಕಾಲದಲ್ಲಾಗುವ ಭಯಂಕರ ಅಗ್ನಿವರ್ಷದಂತೆ ಅವನು ಬಾಣಗಳ ಮಳೆಗರೆದನು. ಅವನೆದುರಿಗೆ ಬಂದ ದೈತ್ಯರು ಛಿನ್ನ-ಭಿನ್ನರಾಗುತ್ತಿದ್ದರು. ದೈತ್ಯರ ಪರಾಕ್ರಮ ತಗ್ಗಿಹೋಯಿತು. ಅವರು ರಣಾಂಗಣ ಬಿಟ್ಟು ಓಡಿಹೋಗಿ ತಮ್ಮ-ತಮ್ಮ ಮನೆಗಳಲ್ಲಿ ಅವಿತುಕೊಂಡರು. ॥ ೧೮ ॥ ಪುರಂಜಯನು ಅವರ ನಗರ, ಧನ, ಐಶ್ವರ್ಯ ಎಲ್ಲವನ್ನು ಗೆದ್ದು ಇಂದ್ರನಿಗೆ ಕೊಡಿಸಿದನು. ಇದರಿಂದ ಆ ರಾಜರ್ಷಿಗೆ ಪುರವನ್ನು ಗೆದ್ದಿರುವುದರಿಂದ 'ಪುರಂಜಯ'ನೆಂದೂ, ಇಂದ್ರನನ್ನು ವಾಹನನನ್ನಾಗಿಸಿದ್ದರಿಂದ 'ಇಂದ್ರವಾಹ'ನೆಂದೂ, ಎತ್ತಿನ ಭುಜದ ಮೇಲೆ ಕುಳಿತಿದ್ದರಿಂದ 'ಕಕುಸ್ಥ' ಎಂದೂ ಹೇಳಲಾಗುತ್ತದೆ. ॥ ೧೯ ॥

ಪುರಂಜಯನಿಗೆ ಅನೇನಸನೆಂಬ ಪುತ್ರನಿದ್ದನು. ಅವನ ಪುತ್ರ ಪೃಥು ಆದನು. ಪೃಥುವಿಗೆ ವಿಶ್ವರಂಧಿ, ಅವನಿಂದ ಚಂದ್ರ, ಚಂದ್ರನಿಂದ ಯುವನಾಶ್ವನಾದನು. ॥ ೨೦ ॥

ಶಾಬಸ್ತಸ್ತತ್ಸುತೋ ಯೇನ ಶಾಬಸ್ತೀ ನಿರ್ಮಮೇ ಪುರೀ ।
ಬೃಹದಶ್ವಸ್ತು ಶಾಬಸ್ತಿಸ್ತತಃ ಕುವಲಯಾಶ್ವಕಃ ॥ ೨೧ ॥

ಯಃ ಪ್ರಿಯಾರ್ಥಮುತಂಕಸ್ಯ ಧುಂಧುನಾಮಾಸುರಂ ಬಲೀ ।
ಸುತಾನಾಮೇಕವಿಂಶತ್ಯಾ ಸಹಸ್ರೈರಹನದ್ವೃತಃ ॥ ೨೨ ॥

ಧುಂಧುಮಾರ ಇತಿ ಖ್ಯಾತಸ್ತತ್ಸುತಾಸ್ತೇ ಚ ಜಜ್ವಲುಃ ।
ಧುಂಧೋರ್ಮುಖಾಗ್ನಿನಾ ಸರ್ವೇ ತ್ರಯ ಏವಾವಶೇಷಿತಾಃ ॥ ೨೩ ॥

ದೃಢಾಶ್ವಃ ಕಪಿಲಾಶ್ವಶ್ಚ ಭದ್ರಾಶ್ವ ಇತಿ ಭಾರತ ।
ದೃಢಾಶ್ವಪುತ್ರೋ ಹರ್ಯಶ್ವೋ ನಿಕುಂಭಸ್ತತ್ಸುತಃ ಸ್ಮೃತಃ ॥ ೨೪ ॥

ಬರ್ಹಣಾಶ್ವೋ ನಿಕುಂಭಸ್ಯ ಕೃಶಾಶ್ವೋಽಥಾಸ್ಯ ಸೇನಜಿತ್ ।
ಯುವನಾಶ್ವೋಽಭವತ್ತಸ್ಯ ಸೋಽನಪತ್ಯೋ ವನಂ ಗತಃ ॥ ೨೫ ॥

ಭಾರ್ಯಾಶತೇನ ನಿರ್ವಿಣ್ಣ ಋಷಯೋಽಸ್ಯ ಕೃಪಾಲವಃ ।
ಇಷ್ಟಿಂ ಸ್ಮ ವರ್ತಯಾಂಚಕ್ರುರೈಂದ್ರೀಂ ತೇ ಸುಸಮಾಹಿತಾಃ ॥ ೨೬ ॥

ರಾಜಾ ತದ್ಯಜ್ಞಸದನಂ ಪ್ರವಿಷ್ಟೋ ನಿಶಿ ತರ್ಷಿತಃ ।
ದೃಷ್ಟ್ವಾ ಶಯಾನಾನ್ವಿಪ್ರಾಂಸ್ತಾನ್ಪಪೌ ಮಂತ್ರಜಲಂ ಸ್ವಯಮ್ ॥ ೨೭ ॥

ಉತ್ಥಿತಾಸ್ತೇ ನಿಶಾಮ್ಯಾಥ ವ್ಯುದಕಂ ಕಲಶಂ ಪ್ರಭೋ ।
ಪಪ್ರಚ್ಛುಃ ಕಸ್ಯ ಕರ್ಮೇದಂ ಪೀತಂ ಪುಂಸವನಂ ಜಲಮ್ ॥ ೨೮ ॥

ರಾಜ್ಞಾ ಪೀತಂ ವಿದಿತ್ವಾಥ ಈಶ್ವರಪ್ರಹಿತೇನ ತೇ ।
ಈಶ್ವರಾಯ ನಮಶ್ಚಕ್ರುರಹೋ ದೈವಬಲಂ ಬಲಮ್ ॥ ೨೯ ॥

ತತಃ ಕಾಲ ಉಪಾವೃತ್ತೇ ಕುಕ್ಷಿಂ ನಿರ್ಭಿದ್ಯ ದಕ್ಷಿಣಮ್ ।
ಯುವನಾಶ್ವಸ್ಯ ತನಯಶ್ಚಕ್ರವರ್ತೀ ಜಜಾನ ಹ ॥ ೩೦ ॥

ಕಂ ಧಾಸ್ಯತಿ ಕುಮಾರೋಽಯಂ
ಸ್ತನ್ಯಂ ರೋರೂಯತೇ ಭೃಶಮ್ ।
ಮಾಂ ಧಾತಾ ವತ್ಸ ಮಾ ರೋದೀ-
ರಿತೀಂದ್ರೋ ದೇಶಿನೀಮದಾತ್ ॥ ೩೧ ॥

ನ ಮಮಾರ ಪಿತಾ ತಸ್ಯ ವಿಪ್ರದೇವಪ್ರಸಾದತಃ ।
ಯುವನಾಶ್ವೋಽಥ ತತ್ರೈವ ತಪಸಾ ಸಿದ್ಧಿಮನ್ವಗಾತ್ ॥ ೩೨ ॥

ಯುವನಾಶ್ವನ ಪುತ್ರ ಶಾಬಸ್ತನಾದನು. ಅವನು ಶಾಬಸ್ತಿ ಎಂಬ ಪಟ್ಟಣವನ್ನು ನಿರ್ಮಿಸಿದನು. ಶಾಬಸ್ತನಿಗೆ ಬೃಹದಶ್ವ ಹುಟ್ಟಿದನು. ಅವನಿಗೆ ಕುವಲಯಾಶ್ವನಾದನು. ॥ ೨೧ ॥ ಇವನು ಮಹಾ ಬಲಾಢ್ಯನಾಗಿದ್ದನು. ಇವನು ಉತಂಕ ಋಷಿಯನ್ನು ಸಂತೋಷ ಪಡಿಸಲು ತನ್ನ ಇಪ್ಪತ್ತೊಂದುಸಾವಿರ ಪುತ್ರರೊಂದಿಗೆ ಧುಂಧು ಎಂಬ ದೈತ್ಯನನ್ನು ವಧಿಸಿದನು. ॥ ೨೨ ॥ ಇದರಿಂದ ಅವನ ಹೆಸರು ಧುಂಧುಮಾರ ಎಂದಾಯಿತು. ಧುಂಧುದೈತ್ಯನ ಮುಖಾಗ್ನಿ ಯಿಂದ ಅವನ ಎಲ್ಲ ಪುತ್ರರು ಸುಟ್ಟುಹೋಗಿ ಕೇವಲ ಮೂವರು ಮಾತ್ರ ಉಳಿದರು. ॥ ೨೩ ॥ ಪರೀಕ್ಷಿತನೇ! ದೃಢಾಶ್ವ, ಕಪಿಲಾಶ್ವ ಮತ್ತು ಭದ್ರಾಶ್ವ ಇವರೇ ಆ ಉಳಿದ ಮೂವರು ಪುತ್ರರು. ದೃಢಾಶ್ವ ನಿಂದ –ಹರ್ಯಶ್ವ ಹಾಗೂ ಅವನಿಂದ ನಿಕುಂಭನ ಜನ್ಮ ವಾಯಿತು. ॥ ೨೪ ॥ ನಿಕುಂಭನ ಮಗ ಬರ್ಹಣಾಶ್ವ, ಬರ್ಹಣಾಶ್ವನ ಮಗ ಕೃಶಾಶ್ವ, ಕೃಶಾಶ್ವನಿಂದ ಸೇನಜಿತ್, ಸೇನಜಿತ್ತುವಿನಿಂದ ಯುವನಾಶ್ವನಾದನು. ಯುವನಾಶ್ವನು ಸಂತಾನಹೀನನಾದ್ದರಿಂದ ಬಹಳ ದುಃಖಿತನಾಗಿ ತನ್ನ ನೂರು ಪತ್ನಿಯರೊಂದಿಗೆ ಕಾಡಿಗೆ ಹೊರಟು ಹೋದನು. ಅಲ್ಲಿ ಋಷಿಗಳು ಇವನ ಮೇಲೆ ಕೃಪೆಗೈದು ಯುವನಾಶ್ವನಿಂದ ಪುತ್ರಪ್ರಾಪ್ತಿಗಾಗಿ ಇಂದ್ರದೇವತಾತ್ಮಕವಾದ ಯಜ್ಞವನ್ನು ಮಾಡಿಸಿದರು. ॥ ೨೫-೨೬ ॥ ಒಂದು ದಿನ ಯುವನಾಶ್ವನಿಗೆ ರಾತ್ರಿಯಲ್ಲಿ ತುಂಬಾ ಬಾಯಾರಿಕೆ ಉಂಟಾಯಿತು. ಅವನು ಯಜ್ಞಶಾಲೆಗೆ ಹೋಗಿ ನೋಡಲು ಋಷಿಗಳೆಲ್ಲರೂ ಮಲಗಿದ್ದರು. ನೀರು ಎಲ್ಲಿಯೂ ಸಿಗದೆ ಕೊನೆಗೆ ಋಷಿಗಳು ಅಭಿಮಂತ್ರಿಸಿ ಇಟ್ಟಿದ್ದ ನೀರನ್ನು ಕುಡಿದುಬಿಟ್ಟನು. ॥ ೨೭ ॥ ಪರೀಕ್ಷಿತನೇ! ಪ್ರಾತಃಕಾಲದಲ್ಲಿ ಎದ್ದು ಋಷಿಗಳು ನೋಡಿದಾಗ ಕಲಶದಲ್ಲಿ ಮಂತ್ರಪೂತವಾದ ನೀರು ಇರಲಿಲ್ಲ. ಪುತ್ರೋತ್ಪನ್ನಕರವಾದ ನೀರನ್ನು ಕುಡಿದು ಬಿಟ್ಟಿದ್ದಾರೆ! ಇದು ಯಾರ ಕೆಲಸ? ಎಂದು ಕೇಳಿದರು. ॥ ೨೮ ॥ ಭಗವಂತನ ಪ್ರೇರಣೆಯಿಂದ ರಾಜ ಯುವನಾಶ್ವನೇ ಆ ನೀರನ್ನು ಕುಡಿದಿರುವನು ಎಂದು ಕಡೆಗೆ ತಿಳಿದಾಗ ಆ ಋಷಿಗಳು ಭಗವಂತನ ಚರಣಗಳಿಗೆ ನಮಸ್ಕಾರಮಾಡಿ, 'ಆಹಾ ! ಇದು ಭಗವಂತನ ಇಚ್ಛೆಯೇ ಎಂದು ತಿಳಿದರು. ॥ ೨೯ ॥ ಇದಾದ ಬಳಿಕ ಪ್ರಸವದ ಸಮಯ ಬಂದಾಗ ಯುವನಾಶ್ವನ ಹೊಟ್ಟೆಯ ಬಲಭಾಗವನ್ನು ಭೇದಿಸಿಕೊಂಡು ಚಕ್ರವರ್ತಿಯಾಗಲಿದ್ದ ಒಂದು ಗಂಡು ಶಿಶುವು ಹೊರಬಂದಿತು. ॥ ೩೦ ॥ ಅದು ಅಳುತ್ತಿರುವುದನ್ನು ಕಂಡು ಋಷಿಗಳು – 'ಈ ಮಗು ಹಾಲಿಗಾಗಿ ಅಳುತ್ತಿದೆ. ಇದಕ್ಕೆ ಯಾರು ಹಾಲು ಕುಡಿಸುವರು?' ಎಂದು ವಿಚಾರಿಸಿದಾಗ ಇಂದ್ರನು ಹೇಳಿದನು – ನನ್ನ ಹಾಲನ್ನು (ಅಮೃತವನ್ನೇ) ಕುಡಿಯುವನು' (ಮಾಂ ಧಾತಾ) ಮಗೂ! ಅಳಬೇಡ! ಹೀಗೆ ಹೇಳಿ ಇಂದ್ರನು ತನ್ನ ಅಮೃತಮಯವಾದ ತೋರುಬೆರಳನ್ನು ಮಗುವಿನ ಬಾಯಿಗೆ ಇಟ್ಟನು. ॥ ೩೧ ॥ ಬ್ರಾಹ್ಮಣರ ಮತ್ತು ದೇವತೆಗಳ ವರಪ್ರಸಾದ ದಿಂದ ಹೊಟ್ಟೆಯು ಸೀಳಿ ಹೋಗಿದ್ದರೂ ಯುವನಾಶ್ವನು ಸಾಯಲಿಲ್ಲ. ಅವನು ಅಲ್ಲೇ ತಪಸ್ಸು ಮಾಡಿ ಮುಕ್ತನಾಗಿ ಹೋದನು. ॥ ೩೨ ॥

ತ್ರಸದ್ದಸ್ಯುರಿತೀಂದ್ರೋಽಂಗ ವಿದಧೇ ನಾಮ ತಸ್ಯ ವೈ ।
ಯಸ್ಮಾತ್ತ್ರಸಂತಿ ಹ್ಯುದ್ವಿಗ್ನಾ ದಸ್ಯವೋ ರಾವಣಾದಯಃ ॥ ೩೩ ॥

ಯೌವನಾಶ್ವೋಽಥ ಮಾಂಧಾತಾ ಚಕ್ರವರ್ತ್ಯವನೀಂ ಪ್ರಭುಃ ।
ಸಪ್ತದ್ವೀಪವತೀಮೇಕಃ ಶಶಾಸಾಚ್ಯುತತೇಜಸಾ ॥ ೩೪ ॥

ಈಜೇ ಚ ಯಜ್ಞಂ ಕ್ರತುಭಿರಾತ್ಮವಿದ್ಭೂರಿದಕ್ಷಿಣೈಃ ।
ಸರ್ವದೇವಮಯಂ ದೇವಂ ಸರ್ವಾತ್ಮಕಮತೀಂದ್ರಿಯಮ್ ॥ ೩೫ ॥

ದ್ರವ್ಯಂ ಮಂತ್ರೋ ವಿಧಿರ್ಯಜ್ಞೋ ಯಜಮಾನಸ್ತಥರ್ತ್ವಿಜಃ ।
ಧರ್ಮೋ ದೇಶಶ್ಚ ಕಾಲಶ್ಚ ಸರ್ವಮೇತದ್ಯದಾತ್ಮಕಮ್ ॥ ೩೬ ॥

ಯಾವತ್ಸೂರ್ಯ ಉದೇತಿ ಸ್ಮ ಯಾವಚ್ಚ ಪ್ರತಿತಿಷ್ಠತಿ ।
ಸರ್ವಂ ತದ್ಯೌವನಾಶ್ವಸ್ಯ ಮಾಂಧಾತುಃ ಕ್ಷೇತ್ರಮುಚ್ಯತೇ ॥ ೩೭ ॥

ಶಶಬಿಂದೋರ್ದುಹಿತರಿ ಬಿಂದುಮತ್ಯಾಮಧಾನ್ನೃಪಃ ।
ಪುರುಕುತ್ಸಮಂಬರೀಷಂ ಮುಚುಕುಂದಂ ಚ ಯೋಗಿನಮ್ ।
ತೇಷಾಂ ಸ್ವಸಾರಃ ಪಂಚಾಶತ್ಸೌಭರಿಂ ವವ್ರಿರೇ ಪತಿಮ್ ॥ ೩೮ ॥

ಯಮುನಾಂತರ್ಜಲೇ ಮಗ್ನಸ್ತಪ್ಯಮಾನಃ ಪರಂತಪಃ ।
ನಿರ್ವೃತಿಂ ಮೀನರಾಜಸ್ಯ ವೀಕ್ಷ್ಯ ಮೈಥುನಧರ್ಮಿಣಃ ॥ ೩೯ ॥

ಜಾತಸ್ಪೃಹೋ ನೃಪಂ ವಿಪ್ರಃ ಕನ್ಯಾಮೇಕಾಮಯಾಚತ ।
ಸೋಽಪ್ಯಾಹ ಗೃಹ್ಯತಾಂ ಬ್ರಹ್ಮನ್ಕಾಮಂ ಕನ್ಯಾ ಸ್ವಯಂವರೇ ॥ ೪೦ ॥

ಸ ವಿಚಿಂತ್ಯಾಪ್ರಿಯಂ ಸ್ತ್ರೀಣಾಂ ಜರಠೋಽಯಮಸಂಮತಃ ।
ವಲೀಪಲಿತ ಏಜತ್ಕ ಇತ್ಯಹಂ ಪ್ರತ್ಯುದಾಹೃತಃ ॥ ೪೧ ॥

ಸಾಧಯಿಷ್ಯೇ ತಥಾಽಽತ್ಮಾನಂ ಸುರಸ್ತ್ರೀಣಾಮಪೀಪ್ಸಿತಮ್ ।
ಕಿಂ ಪುನರ್ಮನುಜೇಂದ್ರಾಣಾಮಿತಿ ವ್ಯವಸಿತಃ ಪ್ರಭುಃ ॥ ೪೨ ॥

ಪರೀಕ್ಷಿತನೇ! ಇಂದ್ರನು ಆ ಬಾಲಕನ ಹೆಸರನ್ನು 'ತ್ರಸದಸ್ಯು' ಎಂದಿಟ್ಟನು. ಏಕೆಂದರೆ, ರಾವಣನೇ ಮೊದಲಾದ ದುಷ್ಟರು ಅವನಿಂದ ಉದ್ವಿಗ್ನರಾಗಿ ಭಯಪಡುತ್ತಿದ್ದರು. ॥ ೩೩ ॥ ಯುವನಾಶ್ವನ ಪುತ್ರ ಮಾಂಧಾತನು (ತ್ರಸದಸ್ಯು) ಚಕ್ರವರ್ತಿ ರಾಜನಾದನು. ಭಗವಂತನ ತೇಜಸ್ಸಿನಿಂದ ಸಂಪನ್ನನಾಗಿದ್ದ ಅವನು ಸಪ್ತದ್ವೀಪದಿಂದ ಒಡಗೂಡಿದ ಇಡೀ ಪೃಥಿವಿಯನ್ನು ಆಳಿದನು. ॥ ೩೪ ॥ ಅವನು ಆತ್ಮಜ್ಞಾನಿಯಾಗಿದ್ದನು. ಅವನಿಗೆ ಕರ್ಮಕಾಂಡದ ಯಾವುದೇ ಆವಶ್ಯಕತೆ ಇಲ್ಲದಿದ್ದರೂ ಅವನು ಬಹು ದಕ್ಷಿಣೆಗಳುಳ್ಳ ಯಜ್ಞಗಳಿಂದ ಸ್ವಯಂಪ್ರಕಾಶನೂ, ಸರ್ವದೇವ ಸ್ವರೂಪನೂ, ಸರ್ವಾತ್ಮನೂ, ಇಂದ್ರಿಯಾತೀತನೂ ಆದ ಯಜ್ಞ ಸ್ವರೂಪೀ ಪ್ರಭುವನ್ನು ಆರಾಧಿಸಿದನು. ॥ ೩೫ ॥ ಭಗವಂತನಿಂದ ಬೇರೆಯಾದುದು ಪ್ರಪಂಚದಲ್ಲಿ ಇನ್ನೇನಿದೆ? ಯಜ್ಞದ ಸಾಮಗ್ರಿ, ಮಂತ್ರ, ವಿಧಿ - ವಿಧಾನ, ಯಜ್ಞ, ಯಜಮಾನ, ಋತ್ವಿಜರು, ಧರ್ಮ, ದೇಶ - ಕಾಲ - ಇವೆಲ್ಲವೂ ಭಗವಂತನ ಸ್ವರೂಪವೇ ಆಗಿದೆಯಲ್ಲ! ॥ ೩೬ ॥ ಪರೀಕ್ಷಿತನೇ! ಸೂರ್ಯನು ಉದಯಿಸುವ ಮತ್ತು ಅಸ್ತವಾಗುವ ಸಮಸ್ತ ಭೂಭಾಗವೂ ಯುವನಾಶ್ವಪುತ್ರ ಮಾಂಧಾತನ ಆಳ್ವಿಕೆಯಲ್ಲಿತ್ತು. ॥ ೩೭ ॥

ಚಕ್ರವರ್ತಿ ಮಾಂಧಾತನಿಗೆ ಶಶಬಿಂದುವಿನ ಪುತ್ರಿ 'ಬಿಂದುಮತಿ' ಎಂಬುವಳು ಪತ್ನಿಯಾಗಿದ್ದಳು. ಅವಳಿಂದ ಪುರುಕುತ್ಸ ಅಂಬರೀಷ (ಇವನು ಇನ್ನೊಬ್ಬ ಅಂಬರೀಷ) ಮತ್ತು ಯೋಗೀ ಮುಚುಕುಂದ ಎಂಬ ಮೂವರು ಪುತ್ರರು ಹುಟ್ಟಿದರು. ಅವರಿಗೆ ಐವತ್ತು ಮಂದಿ ತಂಗಿಯರಿದ್ದರು. ಆ ಐವತ್ತು ಮಂದಿಯೂ ಒಬ್ಬನೇ ಸೌಭರಿ ಋಷಿಯನ್ನು ಪತಿಯನ್ನಾಗಿ ವರಿಸಿದರು. ॥ ೩೮ ॥ ಪರಮ ತಪಸ್ವಿಯಾದ ಸೌಭರಿಋಷಿಯು ಒಮ್ಮೆ ಯಮುನೆಯಲ್ಲಿ ಮುಳುಗಿ ತಪಸ್ಸು ಮಾಡುತ್ತಿದ್ದನು. ಒಂದು ದಿನ ಗಂಡುಮೀನೊಂದು ಹೆಣ್ಣು ಮೀನುಗಳೊಡನೆ ಸರಸವಾಡುತ್ತಿರುವುದನ್ನು ಅವನು ನೋಡಿದನು. ಅದರ ಈ ಸರಸವಿಲಾಸವನ್ನು ಕಂಡು ಸೌಭರಿಯ ಮನಸ್ಸಿನಲ್ಲಿಯೂ ತಾನು ವಿವಾಹ ಮಾಡಿಕೊಳ್ಳಬೇಕೆಂಬ ಇಚ್ಛೆಯು ಜಾಗ್ರತ ವಾಯಿತು. ಅವನು ಮಾಂಧಾತರಾಜನಲ್ಲಿಗೆ ಹೋಗಿ ಐವತ್ತು ಕನ್ಯೆಯರಲ್ಲಿ ಒಂದು ಕನ್ಯೆಯನ್ನು ಯಾಚಿಸಿದನು. ರಾಜನೆಂದ - ಬ್ರಾಹ್ಮಣೋತ್ತಮರೇ! ಕನ್ಯೆಯು ಸ್ವಯಂವರದಲ್ಲಿ ನಿಮ್ಮನ್ನು ವರಿಸಿದರೆ ತಾವು ಅವಳನ್ನು ಕೊಂಡುಹೋಗಿರಿ. ॥ ೪೦ ॥ ಸೌಭರಿಋಷಿಯು ಮಾಂಧಾತನ ಅಭಿಪ್ರಾಯವನ್ನು ಅರಿತುಕೊಂಡನು. ಈಗ ನಾನು ಮುದುಕನಾಗಿದ್ದೇನೆ. ಶರೀರದಲ್ಲಿ ನೆರಿಗೆಗಳು ಬಿದ್ದಿವೆ. ಕೂದಲು ಹಣ್ಣಾಗಿವೆ. ತಲೆ ನಡುಗುತ್ತಿದೆ. ಆಗ ಯಾವ ಸ್ತ್ರೀಯೂ ನನ್ನನ್ನು ಪ್ರೇಮಿಸಲಾರಳು ಎಂದು ರಾಜನು ತಿಳಿದುದರಿಂದ ಹೀಗೆ ಹಾರಿಕೆಯ ಉತ್ತರ ನೀಡಿರುವನು ಎಂದು ಯೋಚಿಸಿದರು. ॥ ೪೧ ॥ ಇರಲಿ! ರಾಜಕನ್ಯೆಯರೇನು ದೇವಾಂಗನೆಯರೂ ಕೂಡ ನನ್ನನ್ನು ನೋಡಿ ಮೋಹಗೊಳ್ಳುವಂತಹ ಸುಂದರ ಶರೀರವನ್ನು ಧರಿಸುವೆನು ಎಂಬುದಾಗಿ ಅಂದುಕೊಂಡು ಹಾಗೆಯೇ ಮಾಡಿದನು. ॥ ೪೨ ॥

ಮುನಿಃ ಪ್ರವೇಶಿತಃ ಕ್ಷತ್ತ್ರಾ ಕನ್ಯಾಂತಃಪುರಮೃದ್ಧಿಮತ್ ।
ವೃತಶ್ಚ ರಾಜಕನ್ಯಾಭಿರೇಕಃ ಪಂಚಾಶತಾ ವರಃ ॥ ೪೩ ॥

ತಾಸಾಂ ಕಲಿರಭೂದ್ಭೂಯಾಂ-
ಸ್ತದರ್ಥೇಽಪೋಹ್ಯ ಸೌಹೃದಮ್ ।
ಮಮಾನುರೂಪೋ ನಾಯಂ ವ
ಇತಿ ತದ್ಗತಚೇತಸಾಮ್ ॥ ೪೪ ॥

ಸ ಬಹ್ವೃಚಸ್ತಾಭಿರಪಾರಣೀಯ-
ತಪಃ ಶ್ರಿಯಾನರ್ಘ್ಯಪರಿಚ್ಛದೇಷು ।
ಗೃಹೇಷು ನಾನೋಪವನಾಮಲಾಂಭಃ-
ಸರಸ್ಸು ಸೌಗಂಧಿಕಕಾನನೇಷು ॥ ೪೫ ॥

ಮಹಾರ್ಹಶಯ್ಯಾಸನವಸ್ತ್ರಭೂಷಣ-
ಸ್ನಾನಾನುಲೇಪಾಭ್ಯವಹಾರಮಾಲ್ಯಕೈಃ ।
ಸ್ವಲಂಕೃತಸ್ತ್ರೀಪುರುಷೇಷು ನಿತ್ಯದಾ
ರೇಮೇಽನುಗಾಯದ್ದ್ವಿಜಭೃಂಗವಂದಿಷು ॥ ೪೬ ॥

ಯದ್ಗಾರ್ಹಸ್ಥ್ಯಂ ತು ಸಂವೀಕ್ಷ್ಯ ಸಪ್ತದ್ವೀಪವತೀಪತಿಃ ।
ವಿಸ್ಮಿತಃ ಸ್ತಂಭಮಜಹಾತ್ಸಾರ್ವಭೌಮಶ್ರಿಯಾನ್ವಿತಮ್ ॥ ೪೭ ॥

ಏವಂ ಗೃಹೇಷ್ವಭಿರತೋ ವಿಷಯಾನ್ವಿವಿಧೈಃ ಸುಖೈಃ ।
ಸೇವಮಾನೋ ನ ಚಾತುಷ್ಯದಾಜ್ಯಸ್ತೋಕೈರಿವಾನಲಃ ॥ ೪೮ ॥

ಸ ಕದಾಚಿದುಪಾಸೀನ ಆತ್ಮಾಪಹ್ನವಮಾತ್ಮನಃ ।
ದದರ್ಶ ಬಹ್ವೃಚಾಚಾರ್ಯೋ ಮೀನಸಂಗಸಮುತ್ಥಿತಮ್ ॥ ೪೯ ॥

ಅಹೋ ಇಮಂ ಪಶ್ಯತ ಮೇ ವಿನಾಶಂ
ತಪಸ್ವಿನಃ ಸಚ್ಚರಿತವ್ರತಸ್ಯ ।
ಅಂತರ್ಜಲೇ ವಾರಿಚರಪ್ರಸಂಗಾತ್
ಪ್ರಚ್ಯಾವಿತಂ ಬ್ರಹ್ಮ ಚಿರಂ ಧೃತಂ ಯತ್ ॥ ೫೦ ॥

ಇನ್ನೇನು ? ಅಂತಃಪುರದ ರಕ್ಷಕರು – ಚಂದನ ಮಾಲೆಗಳಿಂದ ಅಲಂಕೃತನಾದ ಸೌಭರಿ ಮುನಿಯನ್ನು ಶೃಂಗರಿಸಲ್ಪಟ್ಟ ಕನ್ಯಾಂತಃಪುರಕ್ಕೆ ಕೊಂಡುಹೋದರು. ಹಾಗಿರುವಾಗ ಆ ಐವತ್ತು ಕನ್ಯೆಯರೂ ಓರ್ವ ಸೌಭರಿಯನ್ನೇ ತಮ್ಮ ಪತಿಯನ್ನಾಗಿ ವರಿಸಿದರು. ॥ ೪೩ ॥ ಆ ಕನ್ಯೆಯರೆಲ್ಲರ ಮನಸ್ಸು ಸೌಭರಿಯಲ್ಲಿ ಅತ್ಯಂತ ಪ್ರೇಮಾಸಕ್ತವಾಯಿತು. ಇದರಿಂದ ಪರಸ್ಪರ ಅವರಲ್ಲೇ ವೈಶಮ್ಯವುಂಟಾಗಿ ಅಸೂಯೆಪಡತೊಡಗಿದರು. 'ಇವರು ನಿನಗೆ ಯೋಗ್ಯರಲ್ಲ, ನನಗೆ ಯೋಗ್ಯರಾಗಿದ್ದಾರೆ' ಎಂದು ಜಗಳ ಕಾಯುತ್ತಿದ್ದರು. ॥ ೪೪ ॥ ಋಗ್ವೇದಿಯಾದ ಸೌಭರಿಯು ಆ ಎಲ್ಲ ಕನ್ಯೆಯರ ಪಾಣಿಗ್ರಹಣ ಮಾಡಿದನು. ಅವನು ತನ್ನ ಅಪಾರ ತಪಸ್ಸಿನ ಪ್ರಭಾವದಿಂದ ಅನೇಕ ಉಪವನಗಳಿಂದಲೂ, ನಿರ್ಮಲ ಜಲದಿಂದ ತುಂಬಿದ ಸರೋವರಗಳಿಂದಲೂ, ಸೌಗಂಧಿಕ ಮುಂತಾದ ಪುಷ್ಪೋದ್ಯಾನಗಳಿಂದ ಕೂಡಿದ ಅಮೂಲ್ಯ ಸಾಮಗ್ರಿಗಳಿಂದ ಸುಸಜ್ಜಿತವಾದ ಅರಮನೆಯಲ್ಲಿ ಬಹುಮೂಲ್ಯ ಶಯ್ಯೆಗಳು, ಆಸನ, ವಸ್ತ್ರ, ಆಭೂಷಣ, ಸ್ನಾನ, ಅನುಲೇಪನ, ಸ್ವಾದಿಷ್ಟಭೋಜನ, ಪುಷ್ಪಮಾಲೆ ಇವುಗಳ ಮೂಲಕ ತನ್ನ ಪತ್ನಿಯರೊಂದಿಗೆ ವಿಹರಿಸತೊಡಗಿದನು. ಸುಂದರವಾದ ವಸ್ತ್ರಾಭರಣಗಳನ್ನು ಧರಿಸಿದ ಅನೇಕ ಸ್ತ್ರೀ-ಪುರುಷ ಸೇವಕರು ಅವರ ಸೇವೆಯಲ್ಲಿ ಸಿದ್ಧರಿದ್ದರು. ಕೆಲವೆಡೆ ಪಕ್ಷಿಗಳ ಕೂಜನವಿದ್ದರೆ, ಕೆಲವೆಡೆ ದುಂಬಿಗಳು ಝೇಂಕರಿಸುತ್ತಿದ್ದವು. ಕೆಲವೆಡೆ ವಂದಿ-ಮಾಗಧರು ಅವರ ಬಿರುದಾವಳಿಯನ್ನು ಹೊಗಳುತ್ತಿದ್ದರು. ॥ ೪೫-೪೬ ॥ ಸಪ್ತದ್ವೀಪದಿಂದೊಡಗೂಂಡ ಪೃಥಿವಿಯ ಪಾಲಕನಾದ ಮಾಂಧಾತನು ಸೌಭರಿಯ ಗಾರ್ಹಸ್ಥ್ಯಸುಖವನ್ನು ಕಂಡು ಆಶ್ಚರ್ಯಚಕಿತನಾದನು. ಸಾರ್ವಭೌಮ ಸಂಪತ್ತಿನಿಂದ ಸಂಪನ್ನನಾಗಿರುವೆನೆಂಬ ಮಾಂಧಾತನ ಗರ್ವವು ಉಡುಗಿ ಹೋಯಿತು. ॥ ೪೭ ॥ ಹೀಗೆ ಸೌಭರಿಯು ಗಾರ್ಹಸ್ಥ್ಯ ಜೀವನದಲ್ಲಿ ರಮಮಾಣನಾದನು. ತನ್ನ ನಿರೋಗಿಯಾದ ಇಂದ್ರಿಯಗಳಿಂದ ಅನೇಕ ವಿಷಯಗಳನ್ನು ಸೇವಿಸುತ್ತಿದ್ದರೂ ತುಪ್ಪದ ಧಾರೆಯಿಂದ ಅಗ್ನಿಯು ತೃಪ್ತ (ಶಾಂತ)ವಾಗದಿರುವಂತೆಯೇ ಸೌಭರಿಗೂ ವಿಷಯಗಳಿಂದ ಸಂತೋಷವಾಗಲಿಲ್ಲ. ॥ ೪೮ ॥

ಋಗ್ವೇದಾಚಾರ್ಯ ಸೌಭರಿಯು ಒಂದು ದಿನ ಶಾಂತಚಿತ್ತದಿಂದ ಕುಳಿತಿದ್ದನು. ಹಿಂದಿನ ಘಟನೆಯನ್ನು ನೆನೆಯುತ್ತಾ ಯುಮುನಾನದಿಯಲ್ಲಿ ಮತ್ಸ್ಯದ ಕ್ಷಣಿಕ ಸಂಗದಿಂದ ನಾನು ಹೇಗೆ ನನ್ನ ತಪಸ್ಸನ್ನು, ಅದರ ಫಲವನ್ನೂ ಕಳಕೊಂಡು ಬಿಟ್ಟೆನಲ್ಲ! ॥ ೪೯ ॥ ಅವರು ಉದ್ಗರಿಸಿದರು – ಅಯ್ಯೋ! ನನ್ನ ಬವಣೆಯೇ! ನಾನು ದೊಡ್ಡ ತಪಸ್ವಿಯಾಗಿದ್ದೆ, ನಾನು ಚೆನ್ನಾಗಿ ವ್ರತಾನುಷ್ಠಾನಗಳನ್ನು ಮಾಡಿದ್ದೆ. ಈಗ ನೋಡಿರಿ! ನನ್ನ ಅಧಃಪತನವಾಗಿದೆ. ನಾನು ಬಹಳ ಕಾಲದಿಂದ ಬ್ರಹ್ಮತೇಜಸ್ಸನ್ನು ಕಾಪಾಡಿಕೊಂಡು ಬಂದಿದ್ದೆ. ಆದರೆ ನೀರಿನಲ್ಲಿ ವಿಹರಿಸುತ್ತಿದ್ದ ಮತ್ಸ್ಯದಂಪತಿಗಳ ಸಂಸರ್ಗದಿಂದಾಗಿ ನನ್ನ ಬ್ರಹ್ಮತೇಜಸ್ಸೆಲ್ಲವೂ ನಷ್ಟವಾಗಿ ಹೋಯಿತಲ್ಲ! ॥ ೫೦ ॥

ಸಂಗಂ ತ್ಯಜೇತ ಮಿಥುನವ್ರತಿನಾಂ ಮುಮುಕ್ಷುಃ
ಸರ್ವಾತ್ಮನಾ ನ ವಿಸೃಜೇದ್ಬಹಿರಿಂದ್ರಿಯಾಣಿ ।
ಏಕಶ್ಚರನ್ರಹಸಿ ಚಿತ್ತಮನಂತ ಈಶೇ
ಯುಂಜೀತ ತದ್ವ್ರತಿಷು ಸಾಧುಷು ಚೇತ್ಪ್ರಸಂಗಃ ॥ ೫೧ ॥

ಏಕಸ್ತಪಸ್ವ್ಯಹಮಥಾಂಭಸಿ ಮತ್ಸ್ಯಸಂಗಾತ್
ಪಂಚಾಶದಾಸಮುತ ಪಂಚಸಹಸ್ರಸರ್ಗಃ ।
ನಾಂತಂ ವ್ರಜಾಮ್ಯುಭಯಕೃತ್ಯಮನೋರಥಾನಾಂ
ಮಾಯಾಗುಣೈರ್ಹೃತಮತಿರ್ವಿಷಯೇಽರ್ಥಭಾವಃ ॥ ೫೨ ॥

ಏವಂ ವಸನ್ಗೃಹೇ ಕಾಲಂ ವಿರಕ್ತೋ ನ್ಯಾಸಮಾಸ್ಥಿತಃ ।
ವನಂ ಜಗಾಮಾನುಯಯುಸ್ತತ್ಪತ್ನ್ಯಃ ಪತಿದೇವತಾಃ ॥ ೫೩ ॥

ತತ್ರ ತಪ್ತ್ವಾ ತಪಸ್ತೀಕ್ಷ್ಣಮಾತ್ಮಕರ್ಶನಮಾತ್ಮವಾನ್ ।
ಸ ಹೈವಾಗ್ನಿಭಿರಾತ್ಮಾನಂ ಯುಯೋಜ ಪರಮಾತ್ಮನಿ ॥ ೫೪ ॥

ತಾಃ ಸ್ವಪತ್ಯುರ್ಮಹಾರಾಜ ನಿರೀಕ್ಷ್ಯಾಧ್ಯಾತ್ಮಿಕೀಂ ಗತಿಮ್ ।
ಅನ್ವೀಯುಸ್ತತ್ಪ್ರಭಾವೇಣ ಅಗ್ನಿಂ ಶಾಂತಮಿವಾರ್ಚಿಷಃ ॥ ೫೫ ॥

ಆದ್ದರಿಂದ ಮೋಕ್ಷದ ಇಚ್ಛೆಯುಳ್ಳವನು ಭೋಗಿಗಳಾದ ಪ್ರಾಣಿಗಳ ಸಂಗವನ್ನು ಪೂರ್ಣವಾಗಿ ಬಿಡಬೇಕು. ಒಂದು ಕ್ಷಣಕ್ಕಾದರೂ ತನ್ನ ಇಂದ್ರಿಯಗಳನ್ನು ಬಹಿರ್ಮುಖವಾಗಲು ಬಿಡಬಾರದು. ಏಕಾಂತದಲ್ಲಿ ಒಬ್ಬಂಟಿಗನಾಗಿದ್ದು ಸರ್ವಶಕ್ತನಾದ ಭಗವಂತನಲ್ಲಿ ಚಿತ್ತವನ್ನು ತೊಡಗಿಸಬೇಕು. ಸಂಗಮಾಡುವ ಆವಶ್ಯಕತೆ ಬಿದ್ದರೆ ಭಗವಂತನ ಅನನ್ಯಭಕ್ತರಾದ ನಿಷ್ಠೆಯುಳ್ಳ ಮಹಾತ್ಮರ ಸಂಗವನ್ನು ಮಾತ್ರ ಮಾಡಬೇಕು. ॥ ೫೧ ॥ ನಾನು ಮೊದಲು ಏಕಾಂತದಲ್ಲಿ ಒಬ್ಬನೇ ತಪಸ್ಸಿನಲ್ಲಿ ತೊಡಗಿದ್ದೆ. ಹಾಗಿರುವಾಗ ನೀರಿನಲ್ಲಿ ಮೀನಿನ ಸಂಗದಿಂದಾಗಿ ವಿವಾಹವಾಗಿ ಐವತ್ತೊಂದಾಗಿ ಮತ್ತೆ ಸಂತಾನದ ರೂಪದಲ್ಲಿ ಐದುಸಾವಿರನಾದೆ. ವಿಷಯಗಳಲ್ಲಿ ಸತ್ಯತ್ವದ ಬುದ್ಧಿಯುಂಟಾಗಿ ಮಾಯೆಯ ಗುಣಗಳು ನನ್ನ ಬುದ್ಧಿಯನ್ನು ಅಪಹರಿಸಿದವು. ಈಗಲಾದರೋ ಇಹ-ಪರಲೋಕಗಳ ಸಂಬಂಧದಲ್ಲಿ ಯಾವ ರೀತಿಯಿಂದಲೂ ದಾಟಲಾರದಷ್ಟು ನನ್ನ ಮನಸ್ಸು ಲಾಲಸೆಗಳಿಂದ ತುಂಬಿಹೋಗಿದೆ. ॥ ೫೨ ॥ ಹೀಗೆ ವಿಚಾರ ಮಾಡುತ್ತಾ ಅವರು ಕೆಲವು ದಿನಗಳು ಮನೆಯಲ್ಲೇ ಉಳಿದರು. ಮತ್ತೆ ವಿರಕ್ತರಾಗಿ ಅವರು ಸಂನ್ಯಾಸವನ್ನು ಸ್ವೀಕರಿಸಿ, ಕಾಡಿಗೆ ಹೊರಟುಹೋದರು. ತನ್ನ ಪತಿಯನ್ನೇ ಸರ್ವಸ್ವವೆಂದು ತಿಳಿಯುತ್ತಿದ್ದ ಅವನ ಪತ್ನಿಯರೂ ಅವರೊಂದಿಗೇ ಕಾಡಿಗೆ ತೆರಳಿದರು. ॥ ೫೩ ॥ ಅಲ್ಲಿಗೆ ಹೋಗಿ ಪರಮ ಸಂಯಮಿಯಾದ ಸೌಭರಿಯು ಘೋರವಾದ ತಪಸ್ಸನ್ನಾಚರಿಸಿದರು. ಶರೀರವನ್ನು ಶೋಷಿಸಿಬಿಟ್ಟರು. ಆಹವನೀಯಾದಿ ಅಗ್ನಿಗಳೊಂದಿಗೆ ತನ್ನನ್ನು ಪರಮಾತ್ಮನಲ್ಲಿ ಲೀನವಾಗಿಸಿಕೊಂಡನು. ॥ ೫೪ ॥ ಪರೀಕ್ಷಿತನೇ! ಅವರ ಪತ್ನಿಯರೂ ಕೂಡ ಸೌಭರಿಮುನಿಯ ಆಧ್ಯಾತ್ಮಿಕ ಗತಿಯನ್ನು ನೋಡಿದಾಗ, ಶಾಂತವಾದ ಅಗ್ನಿಯಲ್ಲಿ ಜ್ವಾಲೆಗಳು ಲೀನವಾಗುವಂತೆ ಅವರೆಲ್ಲರೂ ಮುನಿಯ ಪ್ರಭಾವದಿಂದ ಸಹಗಮನದಿಂದ ಅವರಲ್ಲೇ ಲೀನವಾಗಿ, ಅವರ ಗತಿಯನ್ನೇ ಪಡೆದುಕೊಂಡರು. ॥ ೫೫ ॥

ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ ಸೌಭರ್ಯಾಖ್ಯಾನೇ ಷಷ್ಠೋಽಧ್ಯಾಯಃ ॥ ೬ ॥

# ಏಳನೆಯ ಅಧ್ಯಾಯ

## ತ್ರಿಶಂಕುರಾಜನ ಮತ್ತು ಹರಿಶ್ಚಂದ್ರನ ಕಥೆ

*ಶ್ರೀಶುಕ ಉವಾಚ*

ಮಾಂಧಾತುಃ ಪುತ್ರಪ್ರವರೋ ಯೋಽಂಬರೀಷಃ ಪ್ರಕೀರ್ತಿತಃ ।
ಪಿತಾಮಹೇನ ಪ್ರವೃತೋ ಯೌವನಾಶ್ವಸ್ತು ತತ್ಸುತಃ ।
ಹಾರೀತಸ್ತಸ್ಯ ಪುತ್ರೋಽಭೂನ್ಮಾಂಧಾತೃಪ್ರವರಾ ಇಮೇ ॥ ೧ ॥

ನರ್ಮದಾ ಭ್ರಾತೃಭಿರ್ದತ್ತಾ ಪುರುಕುತ್ಸಾಯ ಯೋರಗೈಃ ।
ತಯಾ ರಸಾತಲಂ ನೀತೋ ಭುಜಗೇಂದ್ರಪ್ರಯುಕ್ತಯಾ ॥ ೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ!** ಮಾಂಧಾತನ ಪುತ್ರರಲ್ಲಿ ಅಂಬರೀಷನು ಎಲ್ಲರಿಂದ ಶ್ರೇಷ್ಠನಾಗಿದ್ದನು ಎಂಬುದನ್ನು ನಾನು ವರ್ಣಿಸಿರುವೆನು. ಅವನ ಅಜ್ಜನಾದ ಯುವನಾಶ್ವನು ಅವನನ್ನು ಪುತ್ರರೂಪದಿಂದ ಸ್ವೀಕರಿಸಿದ್ದನು. ಅವನಿಗೆ ಯೌವನಾಶ್ವನೆಂಬ ಮಗ ಹುಟ್ಟಿದನು. ಯೌವನಾಶ್ವನಿಂದ ಹಾರೀತನಾದನು. ಮಾಂಧಾತನ ವಂಶದಲ್ಲಿ ಈ ಮೂವರೂ ಅವಾಂತರ ಗೋತ್ರದ ಪ್ರವರ್ತಕರಾದರು. ॥ ೧ ॥ ಮಾಂಧಾತನ ಹಿರಿಯ ಮಗ ಪುರುಕುತ್ಸನಿಗೆ ರಸಾತಲವಾಸಿಗಳಾದ ನಾಗರು ತಮ್ಮ ಸಹೋದರಿ ನರ್ಮದೆಯನ್ನು ವಿವಾಹಮಾಡಿ ಕೊಟ್ಟಿದ್ದರು. ನಾಗರಾಜ ವಾಸುಕಿಯ ಆಜ್ಞೆಯಂತೆ ನರ್ಮದೆಯು ತನ್ನ ಪತಿಯನ್ನು ರಸಾತಲಕ್ಕೆ ಕೊಂಡುಹೋದಳು. ॥ ೨ ॥

ಗಂಧರ್ವಾನವಧೀತ್ತತ್ರ ವಧ್ಯಾನ್ವೈ ವಿಷ್ಣುಶಕ್ತಿಧೃಕ್ ।
ನಾಗಾಲ್ಲಬ್ಧವರಃ ಸರ್ಪಾದಭಯಂ ಸ್ಮರತಾಮಿದಮ್
॥ ೩ ॥

ತ್ರಸದ್ದಸ್ಯುಃ ಪೌರುಕುತ್ಸೋ ಯೋಽನರಣ್ಯಸ್ಯ ದೇಹಕೃತ್ ।
ಹರ್ಯಶ್ವಸ್ತತ್ಸುತಸ್ತಸ್ಮಾದರುಣೋಽಥ ತ್ರಿಬಂಧನಃ
॥ ೪ ॥

ತಸ್ಯ ಸತ್ಯವ್ರತಃ ಪುತ್ರಸ್ತ್ರಿಶಂಕುರಿತಿ ವಿಶ್ರುತಃ ।
ಪ್ರಾಪ್ತಶ್ಚಾಂಡಾಲತಾಂ ಶಾಪಾದ್ಗುರೋಃ ಕೌಶಿಕತೇಜಸಾ
॥ ೫ ॥

ಸಶರೀರೋ ಗತಃ ಸ್ವರ್ಗಮದ್ಯಾಪಿ ದಿವಿ ದೃಶ್ಯತೇ ।
ಪಾತಿತೋಽವಾಕ್‌ಶಿರಾ ದೇವೈಸ್ತೇನೈವ ಸ್ತಂಭಿತೋ ಬಲಾತ್
॥ ೬ ॥

ತ್ರೈಶಂಕವೋ ಹರಿಶ್ಚಂದ್ರೋ ವಿಶ್ವಾಮಿತ್ರವಸಿಷ್ಠಯೋಃ ।
ಯನ್ನಿಮಿತ್ತಮಭೂದ್ಯುದ್ಧಂ ಪಕ್ಷಿಣೋರ್ಬಹುವಾರ್ಷಿಕಮ್
॥ ೭ ॥

ಸೋಽನಪತ್ಯೋ ವಿಷಣ್ಣಾತ್ಮಾ ನಾರದಸ್ಯೋಪದೇಶತಃ ।
ವರುಣಂ ಶರಣಂ ಯಾತಃ ಪುತ್ರೋ ಮೇ ಜಾಯತಾಂ ಪ್ರಭೋ
॥ ೮ ॥

ಯದಿ ವೀರೋ ಮಹಾರಾಜ ತೇನೈವ ತ್ವಾಂ ಯಜೇ ಇತಿ ।
ತಥೇತಿ ವರುಣೇನಾಸ್ಯ ಪುತ್ರೋ ಜಾತಸ್ತು ರೋಹಿತಃ
॥ ೯ ॥

ಜಾತಃ ಸುತೋ ಹ್ಯನೇನಾಂಗ ಮಾಂ ಯಜಸ್ವೇತಿ ಸೋಽಬ್ರವೀತ್ ।
ಯದಾ ಪಶುರ್ನಿರ್ದಶಃ ಸ್ಯಾದಥ ಮೇಧ್ಯೋ ಭವೇದಿತಿ
॥ ೧೦ ॥

ನಿರ್ದಶೇ ಚ ಸ ಆಗತ್ಯ ಯಜಸ್ವೇತ್ಯಾಹ ಸೋಽಬ್ರವೀತ್ ।
ದಂತಾಃ ಪಶೋರ್ಯಜ್ಜಾಯೇರನ್ನಥ ಮೇಧ್ಯೋ ಭವೇದಿತಿ
॥ ೧೧ ॥

ಜಾತಾ ದಂತಾ ಯಜಸ್ವೇತಿ ಸ ಪ್ರತ್ಯಾಹಾಥ ಸೋಽಬ್ರವೀತ್ ।
ಯದಾ ಪತಂತ್ಯಸ್ಯ ದಂತಾ ಅಥ ಮೇಧ್ಯೋ ಭವೇದಿತಿ
॥ ೧೨ ॥

ಪಶೋರ್ನಿಪತಿತಾ ದಂತಾ ಯಜಸ್ವೇತ್ಯಾಹ ಸೋಽಬ್ರವೀತ್ ।
ಯದಾ ಪಶೋಃ ಪುನರ್ದಂತಾ ಜಾಯಂತೇಽಥ ಪಶುಃ ಶುಚಿಃ
॥ ೧೩ ॥

ಅಲ್ಲಿ ಭಗವಂತನ ಶಕ್ತಿಯಿಂದ ಸಂಪನ್ನನಾಗಿ ಪುರುಕುತ್ಸನು ವಧಾರ್ಹರಾದ ಗಂಧರ್ವರನ್ನು ಸಂಹರಿಸಿಬಿಟ್ಟನು. ಇದರಿಂದ ಸಂತೋಷಗೊಂಡ ನಾಗರಾಜನು ಪುರುಕುತ್ಸನಿಗೆ – 'ಈ ಪ್ರಸಂಗವನ್ನು ಸ್ಮರಿಸುವವನು ಸರ್ಪಗಳಿಂದ ನಿರ್ಭಯನಾಗುವನು' ಎಂಬ ವರವನ್ನು ಕೊಟ್ಟನು. ॥ ೩ ॥ ರಾಜಾ ಪುರುಕುತ್ಸನಿಗೆ ತ್ರಸದ್ದಸ್ಯು ಎಂಬ ಪುತ್ರನಿದ್ದನು. ಅವನಿಗೆ ಅನರಣ್ಯನೆಂಬ ಪುತ್ರನಾದನು. ಅನರಣ್ಯನಿಂದ ಹರ್ಯಶ್ವ, ಅವನಿಂದ ಅರುಣ, ಅರುಣನ ಪುತ್ರ ತ್ರಿಬಂಧನನಾದನು. ॥ ೪ ॥ ತ್ರಿಬಂಧನನ ಪುತ್ರ ಸತ್ಯವ್ರತನಾದನು. ಈ ಸತ್ಯವ್ರತನೇ ತ್ರಿಶಂಕು ಎಂಬ ಹೆಸರಿನಿಂದ ವಿಖ್ಯಾತನಾದನು. ತ್ರಿಶಂಕುವು ತಂದೆ ಮತ್ತು ಗುರುವಿನ ಶಾಪದಿಂದ ಚಾಂಡಾಲನಾಗಿದ್ದನು. ಆದರೂ ವಿಶ್ವಾಮಿತ್ರನ ಪ್ರಭಾವದಿಂದಲೇ ಸಶರೀರಿಯಾಗಿ ಸ್ವರ್ಗಕ್ಕೆ ಹೋದನು. ದೇವತೆಗಳು ಅವನನ್ನು ಅಲ್ಲಿಂದ ತಳ್ಳಿಬಿಟ್ಟರು. ಅವನು ತಲೆಕೆಳಗಾಗಿ ಬೀಳುತ್ತಿದ್ದಾಗ ವಿಶ್ವಾಮಿತ್ರನು ತನ್ನ ತಪೋಬಲದಿಂದ ಅವನನ್ನು ಆಕಾಶದಲ್ಲೇ ಸ್ಥಿರಗೊಳಿಸಿದನು. ಅವನು ಈಗಲೂ ಆಕಾಶದಲ್ಲೇ ನೇತಾಡುತ್ತಿದ್ದಾನೆ. ॥ ೫-೬ ॥

ತ್ರಿಶಂಕುವಿನ ಪುತ್ರನು ಹರಿಶ್ಚಂದ್ರನಾಗಿದ್ದನು. ಅವನಿಗಾಗಿ ವಿಶ್ವಾಮಿತ್ರರು ಮತ್ತು ವಸಿಷ್ಠರು ಪರಸ್ಪರ ಶಾಪಕೊಟ್ಟುಕೊಂಡು ಪಕ್ಷಿಗಳಾಗಿ ಅನೇಕ ವರ್ಷಗಳವರೆಗೆ ಕಾದಾಡುತ್ತಲೇ ಇದ್ದರು. ॥ ೭ ॥ ಹರಿಶ್ಚಂದ್ರನಿಗೆ ಸಂತಾನವಿರಲಿಲ್ಲ, ಇದರಿಂದ ಅವನು ಬಹಳ ದುಃಖಿತನಾಗಿದ್ದನು. ನಾರದರ ಉಪದೇಶದಂತೆ ಅವನು ವರುಣದೇವರಿಗೆ ಶರಣಾಗಿ ಪ್ರಾರ್ಥಿಸಿದನು – ಪ್ರಭೋ! ನನಗೆ ಪುತ್ರಸಂತಾನ ಪ್ರಾಪ್ತವಾಗಲೀ. ॥ ೮ ॥ ನಿನ್ನ ಅನುಗ್ರಹದಿಂದ ನನಗೆ ವೀರಪುತ್ರನು ಹುಟ್ಟಿದರೆ, ಅವನನ್ನೇ ಯಜ್ಞಪಶುವನ್ನಾಗಿ ನಿನ್ನ ಪ್ರೀತ್ಯರ್ಥವಾಗಿ ಯಜ್ಞಮಾಡುವೆನು. ವರುಣನೆಂದನು – 'ಹಾಗೆಯೇ ಆಗಲಿ.' ಆಗ ವರುಣನ ಕೃಪೆಯಿಂದ ಹರಿಶ್ಚಂದ್ರನಿಗೆ ರೋಹಿತನೆಂಬ ಮಗನು ಹುಟ್ಟಿದನು. ॥ ೯ ॥ ಪುತ್ರನು ಹುಟ್ಟುತ್ತಲೇ ವರುಣನು ಬಂದು ಹೇಳಿದನು – ಹರಿಶ್ಚಂದ್ರಾ! ನಿನಗೆ ಪುತ್ರಸಂತಾನವಾಗಿದೆ. ಈಗ ಇವನ ಮೂಲಕ ಯಜ್ಞವನ್ನು ಮಾಡು. ಹರಿಶ್ಚಂದ್ರನೆಂದನು – ಈಗ ನಿನ್ನ ಈ ಯಜ್ಞಪಶುವು (ರೋಹಿತನು) ಹತ್ತುದಿವಸಗಳು ತುಂಬಿದಾಗ ಇವನು ಯಜ್ಞಕ್ಕೆ ಯೋಗ್ಯನಾಗುತ್ತಾನೆ. ॥ ೧೦ ॥ ಹತ್ತು ದಿವಸಗಳು ಕಳೆದಾಗ ವರುಣನು ಪುನಃ ಬಂದು – 'ಈಗ ನನ್ನ ಯಜ್ಞವನ್ನು ಮಾಡು' ಎಂದು ಹೇಳಿದನು. ಆಗ ಹರಿಶ್ಚಂದ್ರನು – ನಿನ್ನ ಯಜ್ಞಪಶುವಿಗೆ ಹಲ್ಲುಗಳು ಹುಟ್ಟಿದಾಗ ಅವನು ಯಜ್ಞಕ್ಕೆ ಯೋಗ್ಯನಾಗುತ್ತಾನೆ' ಎಂದನು. ॥ ೧೧ ॥ ರೋಹಿತನಿಗೆ ಹಲ್ಲುಹುಟ್ಟಿದಾಗ ವರುಣನೆಂದನು – ರಾಜಾ! ಈಗ ಇವನಿಗೆ ಹಲ್ಲುಗಳು ಹುಟ್ಟಿರುವುವು. ಈಗ ಯಜ್ಞಮಾಡು. ಹರಿಶ್ಚಂದ್ರನೆಂದ – ಇವನ ಹಾಲುಹಲ್ಲುಗಳು ಬಿದ್ದುಹೋದಾಗ ಇವನು ಯಜ್ಞಕ್ಕೆ ಯೋಗ್ಯನಾಗುವನು. ॥ ೧೨ ॥ ಹಾಲುಹಲ್ಲುಗಳು ಬಿದ್ದುಹೋದಾಗ ವರುಣನು ಬಂದು – ಈಗ ಹಾಲುಹಲ್ಲುಗಳು ಬಿದ್ದುಹೋಗಿವೆ, ನನ್ನ ಯಜ್ಞವನ್ನು ಮಾಡು ಎಂದು ಹೇಳಿದನು. ಹರಿಶ್ಚಂದ್ರನೆಂದ – ಇವನಿಗೆ ಎರಡನೆಯ ಬಾರಿ ಹಲ್ಲುಗಳು ಬಂದಾಗ ಈ ಪಶುವು ಯಜ್ಞಕ್ಕೆ ಯೋಗ್ಯನಾದಾನು. ॥ ೧೩ ॥

ಪುನರ್ಜಾತಾ ಯಜಸ್ವೇತಿ ಸ ಪ್ರತ್ಯಾಹಾಥ ಸೋಽಬ್ರವೀತ್ ।
ಸಾನ್ನಾಹಿಕೋ ಯದಾ ರಾಜನ್ರಾಜನ್ಯೋಽಥ ಪಶುಃ ಶುಚಿಃ ॥ ೧೪ ॥

ಇತಿ ಪುತ್ರಾನುರಾಗೇಣ ಸ್ನೇಹಯಂತ್ರಿತಚೇತಸಾ ।
ಕಾಲಂ ವಂಚಯತಾ ತಂ ತಮುಕ್ತೋ ದೇವಸ್ತಮೈಕ್ಷತ ॥ ೧೫ ॥

ರೋಹಿತಸ್ತದಭಿಜ್ಞಾಯ ಪಿತುಃ ಕರ್ಮ ಚಿಕೀರ್ಷಿತಮ್ ।
ಪ್ರಾಣಪ್ರೇಪ್ಸುರ್ಧನುಷ್ಪಾಣಿರರಣ್ಯಂ ಪ್ರತ್ಯಪದ್ಯತ ॥ ೧೬ ॥

ಪಿತರಂ ವರುಣಗ್ರಸ್ತಂ ಶ್ರುತ್ವಾ ಜಾತಮಹೋದರಮ್ ।
ರೋಹಿತೋ ಗ್ರಾಮಮೇಯಾಯ ತಮಿಂದ್ರಃ ಪ್ರತ್ಯಷೇಧತ ॥ ೧೭ ॥

ಭೂಮೇಃ ಪರ್ಯಟನಂ ಪುಣ್ಯಂ ತೀರ್ಥಕ್ಷೇತ್ರನಿಷೇವಣೈಃ ।
ರೋಹಿತಾಯಾದಿಶಚ್ಛಕ್ರಃ ಸೋಽಪ್ಯರಣ್ಯೇಽವಸತ್ಸಮಾಮ್ ॥ ೧೮ ॥

ಏವಂ ದ್ವಿತೀಯೇ ತೃತೀಯೇ ಚತುರ್ಥೇ ಪಂಚಮೇ ತಥಾ ।
ಅಭ್ಯೇತ್ಯಾಭ್ಯೇತ್ಯ ಸ್ಥವಿರೋ ವಿಪ್ರೋ ಭೂತ್ವಾಽಽಹ ವೃತ್ರಹಾ ॥ ೧೯ ॥

ಷಷ್ಠಂ ಸಂವತ್ಸರಂ ತತ್ರ ಚರಿತ್ವಾ ರೋಹಿತಃ ಪುರೀಮ್ ।
ಉಪವ್ರಜನ್ನಜೀಗರ್ತಾದಕ್ರೀಣಾನ್ಮಧ್ಯಮಂ ಸುತಮ್ ॥ ೨೦ ॥

ಶುನಃಶೇಪಂ ಪಶುಂ ಪಿತ್ರೇ ಪ್ರದಾಯ ಸಮವಂದತ ।
ತತಃ ಪುರುಷಮೇಧೇನ ಹರಿಶ್ಚಂದ್ರೋ ಮಹಾಯಶಾಃ ॥ ೨೧ ॥

ಮುಕ್ತೋದರೋಽಯಜದ್ದೇವಾನ್ವರುಣಾದೀನ್ಮಹತ್ಕಥಃ ।
ವಿಶ್ವಾಮಿತ್ರೋಽಭವತ್ತಸ್ಮಿನ್ಹೋತಾ ಚಾಧ್ವರ್ಯುರಾತ್ಮವಾನ್ ॥ ೨೨ ॥

ಜಮದಗ್ನಿರಭೂದ್ಬ್ರಹ್ಮಾ ವಸಿಷ್ಠೋಽಯಾಸ್ಯಸಾಮಗಃ ।
ತಸ್ಮೈ ತುಷ್ಟೋ ದದಾವಿಂದ್ರಃ ಶಾತಕೌಂಭಮಯಂ ರಥಮ್ ॥ ೨೩ ॥

ಶುನಃಶೇಪಸ್ಯ ಮಾಹಾತ್ಮ್ಯಮುಪರಿಷ್ಟಾತ್ಪ್ರಚಕ್ಷ್ಯತೇ ।
ಸತ್ಯಸಾರಾಂ ಧೃತಿಂ ದೃಷ್ಟ್ವಾ ಸಭಾರ್ಯಸ್ಯ ಚ ಭೂಪತೇಃ ॥ ೨೪ ॥

ಎರಡನೆಯ ಸಲ ಹಲ್ಲುಗಳು ಹುಟ್ಟಿದಾಗ ವರುಣನು ಬಂದು – 'ಈಗ ನನ್ನ ಯಜ್ಞವನ್ನು ಮಾಡು' ಎಂದು ಹೇಳಿದನು. ಹರಿಶ್ಚಂದ್ರನು – ವರುಣದೇವನೇ! ಕ್ಷತ್ರಿಯಪಶುವು ಕವಚ ಧರಿಸಲು ಯೋಗ್ಯನಾದಾಗ ಯಜ್ಞಕ್ಕೆ ಯೋಗ್ಯನಾಗುತ್ತಾನಲ್ಲ! ॥ ೧೪ ॥ ಪರೀಕ್ಷಿತನೇ! ಹೀಗೆ ಹರಿಶ್ಚಂದ್ರರಾಜನು ಪುತ್ರ ವ್ಯಾಮೋಹದಿಂದಾಗಿ ಅನಿಯಂತ್ರಿತವಾದ ಬುದ್ಧಿಯಿಂದ ಇಲ್ಲಸಲ್ಲದ ಕುಂಟುನೆಪಗಳನ್ನು ಹೇಳುತ್ತಾ ಕಾಲವನ್ನು ಕಳೆಯುತ್ತಿದ್ದನು. ವರುಣನೂ ಅವನು ಹೇಳಿದಂತೆ ಕಾಲವನ್ನು ಎದುರು ನೋಡುತ್ತಿದ್ದನು. ॥ ೧೫ ॥ ತಂದೆಯವರು ನನ್ನನ್ನು ಯಜ್ಞಪಶುವನ್ನಾಗಿಸಿ ಯಜ್ಞಮಾಡಲು ಬಯಸುವರೆಂಬುದನ್ನು ತಿಳಿದ ರೋಹಿತನು ಆತ್ಮರಕ್ಷಣೆಗಾಗಿ ಕೈಯಲ್ಲಿ ಧನುರ್ಬಾಣಗಳನ್ನು ಧರಿಸಿಕೊಂಡು ಅರಣ್ಯಕ್ಕೆ ಹೊರಟುಹೋದನು. ॥ ೧೬ ॥ ಕೆಲವು ದಿನಗಳ ಬಳಿಕ – ವರುಣದೇವನು ಕುಪಿತನಾಗಿ ನನ್ನ ತಂದೆಯನ್ನು ಆಕ್ರಮಿಸಿರುವನು. ಆದರಿಂದ ಪಿತನು ಜಲೋದರ ರೋಗದಿಂದ ಪೀಡಿತನಾಗಿದ್ದಾನೆ ಎಂದು ತಿಳಿದ ರೋಹಿತನು ತನ್ನ ನಗರಕ್ಕೆ ಹೊರಟನು. ಆದರೆ ಇಂದ್ರನು ಬಂದು ಅವನನ್ನು ತಡೆದುಬಿಟ್ಟನು. ॥ ೧೭ ॥ ಇಂದ್ರನು ಹೇಳಿದನು – ಮಗೂ ರೋಹಿತ! ಯಜ್ಞಪಶುವಾಗಿ ಸಾಯುವುದಕ್ಕಿಂತ ಪವಿತ್ರ ತೀರ್ಥ-ಕ್ಷೇತ್ರಗಳನ್ನು ಸೇವಿಸುತ್ತಾ ಪೃಥಿವಿಯಲ್ಲಿ ಸಂಚರಿಸುವುದು ಶ್ರೇಷ್ಠವಾಗಿದೆ. ಇಂದ್ರನ ಮಾತನ್ನು ಮನ್ನಿಸಿ ಅದನ್ನು ಒಂದು ವರ್ಷಕಾಲ ಮತ್ತೆ ವನದಲ್ಲೇ ಇದ್ದನು. ॥ ೧೮ ॥ ಹೀಗೆಯೇ ಎರಡನೆಯ, ಮೂರನೆಯ, ನಾಲ್ಕನೆಯ, ಐದನೆಯ ವರ್ಷಗಳಲ್ಲಿಯೂ ರೋಹಿತನು ತಂದೆಯ ಬಳಿಗೆ ಹೋಗುವ ವಿಚಾರ ಮಾಡಿದನು. ಆದರೆ ಪ್ರತಿಸಲವೂ ವೃದ್ಧಬ್ರಾಹ್ಮಣನಾಗಿ ಇಂದ್ರನು ಬಂದು ಅವನನ್ನು ತಡೆಯುತ್ತಿದ್ದನು. ॥ ೧೯ ॥ ಹೀಗೆ ಆರು ವರ್ಷಗಳ ಕಾಲ ರೋಹಿತನು ಕಾಡಿನಲ್ಲೇ ಇದ್ದನು. ಏಳನೆಯ ವರ್ಷದಲ್ಲಿ ಅವನು ತನ್ನ ನಗರಕ್ಕೆ ಹೊರಟಾಗ ಅಜೀಗರ್ತನಿಂದ ಅವನ ನಡುವಣ ಪುತ್ರ ಶುನಃಶೇಪನನ್ನು ಹಣಕೊಟ್ಟು ಪಡೆದು ಅವನನ್ನು ಯಜ್ಞಪಶುವನ್ನಾಗಿಸಲು ತನ್ನ ತಂದೆಗೆ ಒಪ್ಪಿಸಿ, ಅವನ ಚರಣಗಳಿಗೆ ವಂದಿಸಿಕೊಂಡನು. ಪರಮ ಯಶೋವಂತನೂ, ಶ್ರೇಷ್ಠ ಚರಿತ್ರವುಳ್ಳವನೂ ಆದ ಹರಿಶ್ಚಂದ್ರನು ಮಹೋದರ ರೋಗದಿಂದ ಬಿಡುಗಡೆಹೊಂದಲು ಪುರುಷಮೇಧದ ಮೂಲಕ ವರುಣನೇ ಮೊದಲಾದ ದೇವತೆಗಳ ಯಜ್ಞವನ್ನು ಮಾಡಿದನು. ಆ ಯಜ್ಞದಲ್ಲಿ ವಿಶ್ವಾಮಿತ್ರರು ಹೋತೃಗಳಾಗಿದ್ದರು. ಪರಮ ಸಂಯಮಿ ಜಮದಗ್ನಿಯು ಅಧ್ವರ್ಯು ಆಗಿದ್ದನು. ವಸಿಷ್ಠರು ಬ್ರಹ್ಮನ ಕೆಲಸ ನಿರ್ವಹಿಸಿದರು. ಅಯಾಸ್ಯ ಮುನಿಯು ಸಾಮಗಾನ ಮಾಡುವ ಉದ್ಗಾತೃವಾದನು. ಆ ಸಮಯದಲ್ಲಿ ಇಂದ್ರನು ಪ್ರಸನ್ನನಾಗಿ ಹರಿಶ್ಚಂದ್ರನಿಗೆ ಒಂದು ಚಿನ್ನದ ರಥವನ್ನು ಕೊಟ್ಟಿದ್ದನು. ॥ ೨೦-೨೩ ॥

ಪರೀಕ್ಷಿತನೇ! ಮುಂದೆ ನಾನು ನಿನಗೆ ಶುನಃಶೇಪನ ಮಹಾತ್ಮೆಯನ್ನು ವರ್ಣಿಸುವೆನು. ಹರಿಶ್ಚಂದ್ರನು ತನ್ನ ಪತ್ನಿಯೊಡನೆ ಸತ್ಯನಿಷ್ಠೆಯಲ್ಲಿ ದೃಢವಾಗಿ ಇರುವುದನ್ನು ಕಂಡು ವಿಶ್ವಾಮಿತ್ರರು ಬಹಳ ಸಂತೋಷಗೊಂಡು ಅವನಿಗೆ ಎಂದೂ ನಾಶವಾಗದಿರುವ ಜ್ಞಾನವನ್ನು ಉಪದೇಶಿಸಿದರು. ಆ ಜ್ಞಾನದಿಂದಾಗಿ ಹರಿಶ್ಚಂದ್ರನು ತನ್ನ

ವಿಶ್ವಾಮಿತ್ರೋ ಭೃಶಂ ಪ್ರೀತೋ ದದಾವವಿಹತಾಂ ಗತಿಮ್ ।
ಮನಃ ಪೃಥಿವ್ಯಾಂ ತಾಮದ್ಭಿಸ್ತೇಜಸಾಪೋಽನಿಲೇನ ತತ್ ॥ ೨೪ ॥

ಖೇ ವಾಯುಂ ಧಾರಯಂಸ್ತಚ್ಚ ಭೂತಾದೌ ತಂ ಮಹಾತ್ಮನಿ ।
ತಸ್ಮಿನ್ ಜ್ಞಾನಕಲಾಂ ಧ್ಯಾತ್ವಾ ತಯಾಜ್ಞಾನಂ ವಿನಿರ್ದಹನ್ ॥ ೨೫ ॥

ಹಿತ್ವಾ ತಾಂ ಸ್ವೇನ ಭಾವೇನ ನಿರ್ವಾಣಸುಖಸಂವಿದಾ ।
ಅನಿರ್ದೇಶ್ಯಾಪ್ರತರ್ಕ್ಯೇಣ ತಸ್ಥೌ ವಿಧ್ವಸ್ತ ಬಂಧನಃ ॥ ೨೬ ॥

ಮನವನ್ನು ಪೃಥಿವಿಯಲ್ಲೂ, ಪೃಥಿವಿಯನ್ನು ಜಲದಲ್ಲೂ, ಜಲವನ್ನು ತೇಜದಲ್ಲೂ, ತೇಜವನ್ನು ವಾಯುವಿನಲ್ಲೂ, ವಾಯುವನ್ನು ಆಕಾಶದಲ್ಲಿಯೂ ನೆಲೆಗೊಳಿಸಿ, ಆಕಾಶವನ್ನು ಅಹಂಕಾರದಲ್ಲಿ ಲೀನಗೊಳಿಸಿದನು. ಮತ್ತೆ ಅಹಂಕಾರವನ್ನು ಮಹತ್ತತ್ತ್ವದಲ್ಲಿ ಲೀನಗೊಳಿಸಿ ಅದರಲ್ಲಿ ಜ್ಞಾನ-ಕಲೆಯ ಧ್ಯಾನಮಾಡುತ್ತಾ ಅದರಿಂದ ಅಜ್ಞಾನವನ್ನು ಭಸ್ಮವಾಗಿಸಿ ಬಿಟ್ಟನು. ॥ ೨೪-೨೫ ॥ ಇದಾದ ಬಳಿಕ ನಿರ್ವಾಣ-ಸುಖದ ಅನುಭೂತಿಯಿಂದ ಆ ಜ್ಞಾನ-ಕಲೆಯನ್ನೂ ಪರಿತ್ಯಾಗಮಾಡಿ, ಸಮಸ್ತ ಬಂಧನಗಳಿಂದ ಮುಕ್ತನಾಗಿ ಅವನು – ನಿರ್ದೇಶಿಸುವುದಕ್ಕಾಗಲೀ, ಊಹಿಸುವುದಕ್ಕಾಗಲೀ ಸಾಧ್ಯವಾಗದ ಪರಮಾನಂದ ಮಯವಾದ ಸ್ವಸ್ವರೂಪದಲ್ಲಿ ನೆಲೆಗೊಂಡನು. ॥ ೨೬ ॥

ಏಳನೆಯ ಅಧ್ಯಾಯವು ಮುಗಿಯಿತು. ॥ ೭ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ
ಹರಿಶ್ಚಂದ್ರೋಪಾಖ್ಯಾನಂ ನಾಮ ಸಪ್ತಮೋಽಧ್ಯಾಯಃ ॥ ೭ ॥

# ಎಂಟನೆಯ ಅಧ್ಯಾಯ

## ಸಗರನ ಚರಿತ್ರೆ

ಶ್ರೀಶುಕ ಉವಾಚ

ಹರಿತೋ ರೋಹಿತಸುತಶ್ಚಂಪಸ್ತಸ್ಮಾದ್ವಿನಿರ್ಮಿತಾ ।
ಚಂಪಾಪುರೀ ಸುದೇವೋಽತೋ ವಿಜಯೋ ಯಸ್ಯ ಚಾತ್ಮಜಃ ॥ ೧ ॥

ಭರುಕಸ್ತತ್ಸುತಸ್ತಸ್ಮಾದ್ವೃಕಸ್ತಸ್ಯಾಪಿ ಬಾಹುಕಃ ।
ಸೋಽರಿಭಿರ್ಹೃತಭೂ ರಾಜಾ ಸಭಾರ್ಯೋ ವನಮಾವಿಶತ್ ॥ ೨ ॥

ವೃದ್ಧಂ ತಂ ಪಂಚತಾಂ ಪ್ರಾಪ್ತಂ ಮಹಿಷ್ಯನು ಮರಿಷ್ಯತೀ ।
ಔರ್ವೇಣ ಜಾನತಾಽಽತ್ಮಾನಂ ಪ್ರಜಾವಂತಂ ನಿವಾರಿತಾ ॥ ೩ ॥

ಆಜ್ಞಾಯಾಸ್ಯೈ ಸಪತ್ನೀಭಿರ್ಗರೋ ದತ್ತೋಽಂಧಸಾ ಸಹ ।
ಸಹ ತೇನೈವ ಸಂಜಾತಃ ಸಗರಾಖ್ಯೋ ಮಹಾಯಶಾಃ ॥ ೪ ॥

ಸಗರಃ ಚಕ್ರವರ್ತ್ಯಾಸೀತ್ಸಾಗರೋ ಯತ್ಸುತೈಃ ಕೃತಃ ।
ಯಸ್ತಾಲಜಂಘಾನ್ಯವನಾಂಛಕಾನ್ ಹೈಹಯಬರ್ಬರಾನ್ ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಹರಿಶ್ಚಂದ್ರನ ಮಗ ರೋಹಿತನಿಗೆ ಹರಿತನೆಂಬ ಮಗನಿದ್ದನು. ಹರಿತನ ಮಗ ಚಂಪ. ಇವನೇ ಚಂಪಾಪುರಿಯನ್ನು ನಿರ್ಮಿಸಿದನು. ಚಂಪನಿಂದ ಸುದೇವ, ಅವನ ಪುತ್ರ ವಿಜಯನಾದನು. ॥ ೧ ॥ ವಿಜಯನ ಮಗ ಭರುಕ, ಭರುಕನಿಂದ ವೃಕ, ವೃಕನಿಂದ ಬಾಹುಕನು ಹುಟ್ಟಿದನು. ಶತ್ರುಗಳು ಬಾಹುಕನಿಂದ ರಾಜ್ಯವನ್ನು ವಶಪಡಿಸಿಕೊಂಡಾಗ ಅವನು ತನ್ನ ಪತ್ನಿಯೊಂದಿಗೆ ಕಾಡಿಗೆ ಹೊರಟುಹೋದನು. ॥ ೨ ॥ ಕಾಡಿಗೆ ಹೋಗಿ ವೃದ್ಧಾಪ್ಯದಿಂದಾಗಿ ಬಾಹುಕನ ಮೃತ್ಯುವಾದಾಗ ಅವನ ಪತ್ನಿಯೂ ಅವನೊಂದಿಗೆ ಸಹಗಮನಕ್ಕೆ ಸಿದ್ಧಳಾದಳು. ಆದರೆ ಇವಳು ಗರ್ಭಿಣಿ ಎಂದು ಮಹರ್ಷಿ ಔರ್ವನಿಗೆ ತಿಳಿದಿತ್ತು. ಅದರಿಂದಾಗಿ ಅವನು ಆಕೆಯನ್ನು ಸಹಗಮನದಿಂದ ತಡೆದನು. ॥ ೩ ॥ ಅವಳ ಸವತಿಯರಿಗೆ ಈ ಮಾತು ತಿಳಿದಾಗ ಅವರು ಅವಳಿಗೆ ಊಟದೊಂದಿಗೆ ಗರ (ವಿಷ) ವನ್ನು ತಿನ್ನಿಸಿದರು. ಆದರೆ ಆ ವಿಷವು ಗರ್ಭದ ಮೇಲೆ ಯಾವ ಪ್ರಭಾವವೂ ಬೀಳದೆ ಆ ವಿಷದೊಂದಿಗೆ ಬಾಲಕನ ಜನ್ಮವಾಯಿತು. ಗರ(ವಿಷ)ದೊಂದಿಗೆ ಹುಟ್ಟಿದ ಕಾರಣದಿಂದ ಅವನು 'ಸಗರ' ನೆಂದು ವಿಖ್ಯಾತನಾದನು. ಸಗರನು ಮಹಾಯಶೋವಂತ ರಾಜನಾದನು. ॥ ೪ ॥

ಸಗರನು ಚಕ್ರವರ್ತಿ, ಸಾಮ್ರಾಟನಾಗಿದ್ದನು. ಅವನ ಪುತ್ರರೇ ನೆಲವನ್ನು ಅಗೆದು ಸಮುದ್ರವನ್ನು ನಿರ್ಮಿಸಿದ್ದರು. ಸಗರನು ತನ್ನ ಗುರುವಾದ ಔರ್ವನ ಆಜ್ಞೆಯನ್ನು ಗೌರವಿಸಿ, ತಾಲಜಂಘ, ಯವನ, ಶಕ, ಹೈಹಯ, ಬರ್ಬರ ಮುಂತಾದ ಜಾತಿಯವರನ್ನು

ನಾವಧೀದ್ಗುರುವಾಕ್ಯೇನ ಚಕ್ರೇ ವಿಕೃತವೇಷಿಣಃ ।
ಮುಂಡಾಂಛ್ಮಶ್ರುಧರಾನ್ಕಾಂಶ್ಚಿನ್ಮುಕ್ತಕೇಶಾರ್ಧಮುಂಡಿತಾನ್
॥ ೬ ॥

ಅನಂತರ್ವಾಸಸಃ ಕಾಂಶ್ಚಿದಬಹಿರ್ವಾಸಸೋಽಪರಾನ್ ।
ಸೋಽಶ್ವಮೇಧೈರಯಜತ ಸರ್ವವೇದಸುರಾತ್ಮಕಮ್
॥ ೭ ॥

ಔರ್ವೋಪದಿಷ್ಟಯೋಗೇನ ಹರಿಮಾತ್ಮಾನಮೀಶ್ವರಮ್ ।
ತಸ್ಯೋತ್ಸೃಷ್ಟಂ ಪಶುಂ ಯಜ್ಞೇ ಜಹಾರಾಶ್ವಂ ಪುರಂದರಃ
॥ ೮ ॥

ಸುಮತ್ಯಾಸ್ತನಯಾ ದೃಪ್ತಾಃ ಪಿತುರಾದೇಶಕಾರಿಣಃ ।
ಹಯಮನ್ವೇಷಮಾಣಾಸ್ತೇ ಸಮಂತಾನ್ನ್ಯಖನನ್ಮಹೀಮ್
॥ ೯ ॥

ಪ್ರಾಗುದೀಚ್ಯಾಂ ದಿಶಿ ಹಯಂ ದದೃಶುಃ ಕಪಿಲಾಂತಿಕೇ ।
ಏಷ ವಾಜಿಹರಶ್ಚೌರ ಆಸ್ತೇ ಮೀಲಿತಲೋಚನಃ
॥ ೧೦ ॥

ಹನ್ಯತಾಂ ಹನ್ಯತಾಂ ಪಾಪ ಇತಿ ಷಷ್ಟಿಸಹಸ್ರಿಣಃ ।
ಉದಾಯುಧಾ ಅಭಿಯಯುರುನ್ಮಿಮೇಷ ತದಾ ಮುನಿಃ
॥ ೧೧ ॥

ಸ್ವಶರೀರಾಗ್ನಿನಾ ತಾವನ್ಮಹೇಂದ್ರಹೃತಚೇತಸಃ ।
ಮಹದ್ವ್ಯತಿಕ್ರಮಹತಾ ಭಸ್ಮಸಾದಭವನ್ ಕ್ಷಣಾತ್
॥ ೧೨ ॥

ನ ಸಾಧುವಾದೋ ಮುನಿಕೋಪಭರ್ಜಿತಾ
ನೃಪೇಂದ್ರಪುತ್ರಾ ಇತಿ ಸತ್ತ್ವಧಾಮನಿ ।
ಕಥಂ ತಮೋ ರೋಷಮಯಂ ವಿಭಾವ್ಯತೇ
ಜಗತ್ಪವಿತ್ರಾತ್ಮನಿ ಖೇ ರಜೋ ಭುವಃ ॥ ೧೩ ॥

ಯಸ್ಯೇರಿತಾ ಸಾಂಖ್ಯಮಯೀ ದೃಢೇಹ ನೌ-
ರ್ಯಯಾ ಮುಮುಕ್ಷುಸ್ತರತೇ ದುರತ್ಯಯಮ್ ।
ಭವಾರ್ಣವಂ ಮೃತ್ಯುಪಥಂ ವಿಪಶ್ಚಿತಃ
ಪರಾತ್ಮಭೂತಸ್ಯ ಕಥಂ ಪೃಥಙ್ಮತಿಃ ॥ ೧೪ ॥

ವಧಿಸಲಿಲ್ಲ, ಅವರ ರೂಪವನ್ನು ವಿರೂಪಗೊಳಿಸಿದನು. ಅವರಲ್ಲಿ ಕೆಲವರು ತಲೆಯನ್ನು ಬೋಳಿಸಿದರು. ಕೆಲವರು ತಲೆ ಬೋಳಿಸಿ, ಗಡ್ಡ-ಮೀಸೆ ಹಾಗೆ ಬಿಟ್ಟರು. ಕೆಲವರು ಕೂದಲನ್ನು ಹಾಗೇ ಬಿಟ್ಟರು. ಕೆಲವರು ಅರ್ಧತಲೆ ಬೋಳಿಸಿದ್ದರು. ॥ ೫-೬ ॥ ಕೆಲವು ಜನರಿಗೆ ಸಗರನು ಬಟ್ಟೆಯನ್ನು ಉಡದೇ ಕೇವಲ ಹೊದೆಯಲು ಅನುಮತಿ ನೀಡಿದನು. ಕೆಲವರಿಗೆ ಬಟ್ಟೆಯನ್ನು ಹೊದೆದುಕೊಳ್ಳದೆ ಕೇವಲ ಕೌಪೀನ ಮಾತ್ರ ಉಡಲು ಹೇಳಿದನು. ಇದಾದ ಬಳಿಕ ಸಗರ ಚಕ್ರವರ್ತಿಯು ಔರ್ವ ಋಷಿಯ ಉಪದೇಶದಂತೆ ಅಶ್ವಮೇಧ ಯಜ್ಞದ ಮೂಲಕ ಸಂಪೂರ್ಣ ವೇದ ಹಾಗೂ ದೇವತಾಮಯ, ಆತ್ಮಸ್ವರೂಪ, ಸರ್ವಶಕ್ತಿವಂತ ಭಗವಂತನನ್ನು ಆರಾಧಿಸಿದನು. ಅವನ ಯಜ್ಞದಲ್ಲಿ ಬಿಟ್ಟಿದ್ದ ಕುದುರೆಯನ್ನು ಇಂದ್ರನು ಕದ್ದೊಯ್ದನು. ॥ ೭-೮ ॥ ಆ ಸಮಯದಲ್ಲಿ ಮಹಾರಾಣಿ ಸುಮತಿಯ ಗರ್ಭದಿಂದ ಹುಟ್ಟಿದ ಸಗರಪುತ್ರರು ತಮ್ಮ ತಂದೆಯ ಆಜ್ಞೆಯಂತೆ ಕುದುರೆಗಾಗಿ ಇಡೀ ಪೃಥಿವಿಯನ್ನು ಜಾಲಾಡಿದರು. ಅವರಿಗೆ ಕುದುರೆಯು ಎಲ್ಲಿಯೂ ಸಿಗದಿದ್ದಾಗ ಗರ್ವಿಷ್ಠರಾಗಿದ್ದ ಅವರು ಎಲ್ಲ ಕಡೆಯಲ್ಲಿ ಭೂಮಿಯನ್ನು ಅಗೆದುಹಾಕಿದರು. ॥ ೯ ॥ ಅಗೆಯುತ್ತಾ-ಅಗೆಯುತ್ತಾ ಅವರಿಗೆ ಈಶಾನ್ಯದಿಕ್ಕಿನಲ್ಲಿ ತಪಸ್ಸು ಮಾಡುತ್ತಿದ್ದ ಕಪಿಲರ ಬಳಿಯಲ್ಲಿ ತಮ್ಮ ಯಜ್ಞಾಶ್ವವು ಕಂಡುಬಂತು. ಕುದುರೆಯನ್ನು ನೋಡುತ್ತಲೇ ಅರವತ್ತುಸಾವಿರ ರಾಜಕುಮಾರರು ಶಸ್ತ್ರಗಳನ್ನೆತ್ತಿಕೊಂಡು ಇವನೇ ನಮ್ಮ ಕುದುರೆಯನ್ನು ಕದ್ದಿರುವ ಕಳ್ಳನೆಂದು ಹೇಳುತ್ತಾ ಅವರತ್ತ ಓಡಿದರು. ನೋಡಿರಲ್ಲ, ಇವನು ಕಣ್ಣುಮುಚ್ಚಿಕೊಂಡಿರುವನು. ಇವನು ಪಾಪಿಯಾಗಿದ್ದಾನೆ. ಇವನನ್ನು ಕೊಂದುಬಿಡಿ, ಕೊಂದುಬಿಡಿ ಎಂದು ಕೂಗಿಕೊಂಡರು. ಆಗಲೇ ಕಪಿಲಮುನಿಯು ಕಣ್ಣು ಬಿಟ್ಟನು. ॥ ೧೦-೧೧ ॥ ಇಂದ್ರನು ರಾಜಕುಮಾರರ ಬುದ್ಧಿಯನ್ನು ಅಪಹರಿಸಿದ್ದನು. ಇದರಿಂದ ಅವರು ಕಪಿಲಮುನಿಯಂತಹ ಮಹಾಪುರುಷರನ್ನು ತಿರಸ್ಕರಿಸಿದ್ದರು. ಈ ತಿರಸ್ಕಾರದಿಂದಾಗಿ ಅವರ ಶರೀರಗಳಲ್ಲಿ ಬೆಂಕಿ ಉರಿಯತೊಡಗಿ ಕ್ಷಣಾರ್ಧದಲ್ಲಿ ಅವರೆಲ್ಲರೂ ಸುಟ್ಟು ಬೂದಿಯಾಗಿ ಬಿಟ್ಟರು. ॥ ೧೨ ॥ ಪರೀಕ್ಷಿತನೇ! ಸಗರ ಪುತ್ರರು ಕಪಿಲಮುನಿಯ ಕ್ರೋಧಾಗ್ನಿಯಿಂದ ಸುಟ್ಟುಹೋದರು ಎಂದು ಹೇಳುವುದು ಉಚಿತವಾಗಲಾರದು. ಕಪಿಲರಾದರೋ ಶುದ್ಧ ಸತ್ತ್ವಗುಣಕ್ಕೆ ಪರಮಾಶ್ರಯರಾಗಿದ್ದರು. ಅವರ ಶರೀರವು ಪ್ರಪಂಚವನ್ನೇ ಪವಿತ್ರಗೊಳಿಸುವಂತಹುದು. ಅಂತಹವರಲ್ಲಿ ತಮೋಭೂತವಾದ ಕ್ರೋಧವಿರುವುದೆಂದು ಭಾವಿಸಲು ಹೇಗೆ ತಾನೇ ಸಾಧ್ಯವಾಗುತ್ತದೆ? ಭೂಮಿಯಲ್ಲಿರುವ ಧೂಳಿನೊಡನೆ ಆಕಾಶದ ಸಂಬಂಧವೇನಾದರೂ ಇರುತ್ತದೆಯೇ? ॥ ೧೩ ॥ ಈ ಸಂಸಾರ ಸಾಗರವು ಮೃತ್ಯುವಿನ ಮಾರ್ಗವಾಗಿದೆ. ಇದನ್ನು ದಾಟಿಹೋಗುವುದು ಅತ್ಯಂತ ಕಷ್ಟವಾಗಿದೆ. ಆದರೆ ಕಪಿಲಮುನಿಗಳು ಈ ಜಗತ್ತಿನಲ್ಲಿ ಸಾಂಖ್ಯಶಾಸ್ತ್ರದ ಒಂದು ದೃಢವಾದ ನೌಕೆಯನ್ನು ಸಿದ್ಧ ಮಾಡಿಕೊಟ್ಟಿರುವರು. ಮುಕ್ತಿಯ ಇಚ್ಛೆಯುಳ್ಳವರು ಯಾರೇ ಆಗಲಿ ಅದರ ಮೂಲಕ ಈ ಸಂಸಾರ ಸಮುದ್ರದಿಂದ ದಾಟಿ ಹೋಗಬಲ್ಲರು. ಅವರು ಕೇವಲ ಪರಮಜ್ಞಾನಿಗಳು ಮಾತ್ರವಾಗಿರದೆ ಸ್ವಯಂ ಪರಮಾತ್ಮನಾಗಿರುವನು. ಅವರಲ್ಲಿ ಈ ಶತ್ರು-ಮಿತ್ರವೆಂಬ ಭೇದಬುದ್ಧಿಯು ಹೇಗೆ ತಾನೇ ಇರಬಲ್ಲದು? ॥ ೧೪ ॥

ಯೋಽಸಮಂಜಸ ಇತ್ಯುಕ್ತಃ ಸ ಕೇಶಿನ್ಯಾ ನೃಪಾತ್ಮಜಃ ।
ತಸ್ಯ ಪುತ್ರೋಽಂಶುಮಾನ್ನಾಮ ಪಿತಾಮಹಹಿತೇ ರತಃ ॥ ೧೪ ॥

ಅಸಮಂಜಸ ಆತ್ಮಾನಂ ದರ್ಶಯನ್ನಸಮಂಜಸಮ್ ।
ಜಾತಿಸ್ಮರಃ ಪುರಾ ಸಂಗಾದ್ಯೋಗೀ ಯೋಗಾದ್ವಿಚಾಲಿತಃ ॥ ೧೫ ॥

ಆಚರನ್ಗರ್ಹಿತಂ ಲೋಕೇ ಜ್ಞಾತೀನಾಂ ಕರ್ಮ ವಿಪ್ರಿಯಮ್ ।
ಸರಯ್ವಾಂ ಕ್ರೀಡತೋ ಬಾಲಾನ್ಪ್ರಾಸ್ಯದುದ್ವೇಜಯಂಜನಮ್ ॥ ೧೬ ॥

ಏವಂವೃತ್ತಃ ಪರಿತ್ಯಕ್ತಃ ಪಿತ್ರಾ ಸ್ನೇಹಮಪೋಹ್ಯ ವೈ ।
ಯೋಗೈಶ್ವರ್ಯೇಣ ಬಾಲಾನ್‌ಸ್ತಾಂದರ್ಶಯಿತ್ವಾತತೋ ಯಯೌ ॥ ೧೭ ॥

ಅಯೋಧ್ಯಾವಾಸಿನಃ ಸರ್ವೇ ಬಾಲಕಾನ್ಪುನರಾಗತಾನ್ ।
ದೃಷ್ಟ್ವಾ ವಿಸಿಸ್ಮಿರೇ ರಾಜನ್ ರಾಜಾ ಚಾಪ್ಯನ್ವತಪ್ಯತ ॥ ೧೮ ॥

ಅಂಶುಮಾಂಶ್ಚೋದಿತೋ ರಾಜ್ಞಾ ತುರಂಗಾನ್ವೇಷಣೇ ಯಯೌ ।
ಪಿತೃವ್ಯಖಾತಾನುಪಥಂ ಭಸ್ಮಾಂತಿ ದದೃಶೇ ಹಯಮ್ ॥ ೨೦ ॥

ತತ್ರಾಸೀನಂ ಮುನಿಂ ವೀಕ್ಷ್ಯ ಕಪಿಲಾಖ್ಯಮಧೋಕ್ಷಜಮ್ ।
ಅಸ್ತೌತ್ಸಮಾಹಿತಮನಾಃ ಪ್ರಾಂಜಲಿಃ ಪ್ರಣತೋ ಮಹಾನ್ ॥ ೨೧ ॥

ಅಂಶುಮಾನುವಾಚ

ನ ಪಶ್ಯತಿ ತ್ವಾಂ ಪರಮಾತ್ಮನೋಽಜನೋ
ನ ಬುಧ್ಯತೇಽದ್ಯಾಪಿ ಸಮಾಧಿಯುಕ್ತಿಭಿಃ ।
ಕುತೋಽಪರೇ ತಸ್ಯ ಮನಃಶರೀರಧೀ-
ವಿಸರ್ಗಸೃಷ್ಟಾ ವಯಮಪ್ರಕಾಶಾಃ ॥ ೨೨ ॥

ಯೇ ದೇಹಭಾಜಸ್ತ್ರಿಗುಣಪ್ರಧಾನಾ
ಗುಣಾನ್ವಿಪಶ್ಯಂತ್ಯುತ ವಾ ತಮಶ್ಚ ।
ಯನ್ಮಾಯಯಾ ಮೋಹಿತಚೇತಸಸ್ತೇ
ವಿದುಃ ಸ್ವಸಂಸ್ಥಂ ನ ಬಹಿಃಪ್ರಕಾಶಾಃ ॥ ೨೩ ॥

ಸಗರನಿಗೆ ಕೇಶಿನೀ ಎಂಬ ಇನ್ನೊರ್ವ ಪತ್ನಿಯಿದ್ದಳು. ಅವಳ ಗರ್ಭದಲ್ಲಿ ಅಸಮಂಜಸನೆಂಬ ಪುತ್ರನು ಹುಟ್ಟಿದ್ದನು. ಅಸಮಂಜಸನ ಪುತ್ರನ ಹೆಸರು ಅಂಶುಮಾನ್ ಎಂದಿತ್ತು. ಅವನು ತನ್ನ ಅಜ್ಜನಾದ ಸಗರನ ಆದೇಶಗಳನ್ನು ಪಾಲಿಸುತ್ತಾ, ಅವನ ಸೇವೆಯಲ್ಲೇ ತೊಡಗಿರುತ್ತಿದ್ದನು. ॥ ೧೪ ॥ ಅಸಮಂಜಸನು ಹಿಂದಿನ ಜನ್ಮದಲ್ಲಿ ಯೋಗಿಯಾಗಿದ್ದನು. ಸಂಗದಿಂದಾಗಿ ಅವನು ಯೋಗದಿಂದ ವಿಚಲಿತನಾಗಿದ್ದನು. ಆದರೆ ಈಗಲೂ ಅವನಿಗೆ ಪೂರ್ವಜನ್ಮದ ಸ್ಮರಣೆ ಹಾಗೆಯೇ ಇತ್ತು. ಅದಕ್ಕಾಗಿ ಅವನು ಬಂಧು-ಬಾಂಧವರಿಗೆ ಮೆಚ್ಚುಗೆಯಾಗದ ಕೆಲಸಗಳನ್ನೇ ಮಾಡುತ್ತಿದ್ದನು. ಅವನು ಕೆಲವೊಮ್ಮೆ ಅತ್ಯಂತ ನಿಂದಿತ ಕರ್ಮಗಳನ್ನು ಮಾಡಿಬಿಡುತ್ತಿದ್ದನು ಮತ್ತು ತನ್ನನ್ನು ಹುಚ್ಚನಂತೆ ತೋರಿಸಿಕೊಳ್ಳುತ್ತಿದ್ದನು. ಆಡುತ್ತಿದ್ದ ಬಾಲಕರನ್ನು ಎತ್ತಿಕೊಂಡು ಸರಯೂನದಿಗೆ ಎಸೆದುಬಿಡುತ್ತಿದ್ದನು. ಇದರಿಂದ ಪ್ರಜೆಗಳು ಬಹಳವಾಗಿ ಉದ್ವೇಗಗೊಂಡರು. ॥ ೧೫-೧೬ ॥ ಕೊನೆಗೆ ಅವನ ಉಪಟಳವನ್ನು ಸಹಿಸಲಾರದ ಅವನ ತಂದೆಯು ಪುತ್ರಸ್ನೇಹವನ್ನು ತೊರೆದು ಅವನನ್ನು ಕಾಡಿಗಟ್ಟಿಬಿಟ್ಟನು. ಬಳಿಕ ಅಸಮಂಜಸನು ತನ್ನ ಯೋಗಬಲದಿಂದ ಸರಯೂನದಿಗೆ ಎಸೆದ ಎಲ್ಲ ಬಾಲಕರನ್ನೂ ಜೀವಂತಗೊಳಿಸಿ ತಂದೆಗೆ ತೋರಿಸಿದನು. ಮತ್ತೆ ಕಾಡಿಗೆ ಹೊರಟುಹೋದನು. ॥ ೧೭ ॥ ಅಯೋಧ್ಯೆಯ ನಾಗರಿಕರಿಗೆ – ತಮ್ಮ ಮಕ್ಕಳು ಜೀವಂತರಾಗಿ ಪುನಃ ಬಂದಿರುವುದನ್ನು ಕಂಡು ಪರಮಾಶ್ಚರ್ಯವಾಯಿತು. ಅಂತಹ ಯೋಗಿಯಾದ ಮಗನನ್ನು ಕಳೆದುಕೊಂಡುದಕ್ಕಾಗಿ ಸಗರನಿಗೂ ಪಶ್ಚಾತ್ತಾಪ ಉಂಟಾಯಿತು. ॥ ೧೮ ॥ ಇದಾದ ಬಳಿಕ ಸಗರನ ಆಜ್ಞೆಯಂತೆ ಅಂಶುಮಂತನು ಕುದುರೆಯನ್ನು ಹುಡುಕಲು ಹೊರಟನು. ಅವನು ತನ್ನ ಚಿಕ್ಕಪ್ಪಂದಿರು ಭೂಮಿಯನ್ನು ಅಗೆದು ನಿರ್ಮಿಸಿದ ಸಾಗರದ ತಟದಲ್ಲೇ ಮುಂದರಿಯುತ್ತಾ ಚಿಕ್ಕಪ್ಪಂದಿರ ಭಸ್ಮರಾಶಿಯನ್ನೂ, ಯಜ್ಞದ ಕುದುರೆಯನ್ನೂ ನೋಡಿದನು. ॥ ೨೦ ॥ ಅಲ್ಲೇ ಭಗವಂತನ ಅವತಾರನಾದ ಕಪಿಲಮುನಿಯು ಕುಳಿತಿದ್ದನು. ಅವರನ್ನು ನೋಡಿ ಉದಾರಹೃದಯಿಯಾದ ಅಂಶುಮಂತನು ಅವನ ಚರಣಗಳಲ್ಲಿ ವಂದಿಸಿ, ಕೈಜೋಡಿಸಿಕೊಂಡು ಏಕಾಗ್ರತೆಯಿಂದ ಸ್ತುತಿಸತೊಡಗಿದನು. ॥ ೨೧ ॥

**ಅಂಶುಮಂತನು ಹೇಳಿದನು** – ಭಗವಾನ್ ಕಪಿಲನೇ ! ನೀನು ಅಜನ್ಮನಾದ ಬ್ರಹ್ಮನಿಗಿಂತಲೂ ಶ್ರೇಷ್ಠನಾಗಿರುವೆ. ಅದಕ್ಕಾಗಿಯೇ ಅವರು ನಿನ್ನನ್ನು ಪ್ರತ್ಯಕ್ಷವಾಗಿ ಕಾಣಲಾರರು. ಪ್ರತ್ಯಕ್ಷವಾಗಿ ನೋಡುವುದಿರಲಿ, ಸಮಾಧಿಯೋಗದಿಂದಲೂ, ಯೋಗವೇ ಮುಂತಾದ ಉಪಾಯಗಳಿಂದಲೂ ನಿನ್ನನ್ನು ಇಂದಿನವರೆಗೆ ತಿಳಿಯಲೂ ಆಗಲಿಲ್ಲ. ನಾವಾದರೋ ಅವರ ಮನ, ಶರೀರ, ಬುದ್ಧಿಯಿಂದ ಉಂಟಾಗುವ ಸೃಷ್ಟಿಯ ಮೂಲಕ ಹುಟ್ಟಿದ ಅಜ್ಞಾನೀ ಜೀವರಾಗಿದ್ದೇವೆ. ನಾವು ಹೇಗೆ ತಾನೇ ನಿನ್ನ ಸ್ವರೂಪವನ್ನು ತಿಳಿಯಬಲ್ಲೆವು ? ॥ ೨೨ ॥ ಈ ಪ್ರಪಂಚದಲ್ಲಿರುವ ಶರೀರಧಾರಿಗಳೆಲ್ಲರೂ ಸತ್ತ್ವಗುಣ, ರಜೋಗುಣ ಅಥವಾ ತಮೋಗುಣ ಪ್ರಧಾನರಾಗಿದ್ದಾರೆ. ಅವರು ಜಾಗ್ರತ್ ಮತ್ತು ಸ್ವಪ್ನಾವಸ್ಥೆಯಲ್ಲಿ ಕೇವಲ ಗುಣಮಯ ಪದಾರ್ಥಗಳನ್ನು, ವಿಷಯಗಳನ್ನು ಹಾಗೂ ಸುಷುಪ್ತಿಯಲ್ಲಿ ತಮೋಮಯ ಅಜ್ಞಾನವನ್ನೇ ನೋಡುತ್ತಾರೆ. ನಿನ್ನ ಮಾಯೆಯಿಂದ

ತಂ ತ್ವಾಮಹಂ ಜ್ಞಾನಘನಂ ಸ್ವಭಾವ-
ಪ್ರಧ್ವಸ್ತಮಾಯಾಗುಣಭೇದಮೋಹೈಃ ।
ಸನಂದನಾದ್ಯೈರ್ಮುನಿಭಿರ್ವಿಭಾವ್ಯಂ
ಕಥಂ ಹಿ ಮೂಢಃ ಪರಿಭಾವಯಾಮಿ ॥ ೨೪ ॥

ಪ್ರಶಾಂತಮಾಯಾಗುಣಕರ್ಮಲಿಂಗ-
ಮನಾಮರೂಪಂ ಸದಸದ್ವಿಮುಕ್ತಮ್ ।
ಜ್ಞಾನೋಪದೇಶಾಯ ಗೃಹೀತದೇಹಂ
ನಮಾಮಹೇ ತ್ವಾಂ ಪುರುಷಂ ಪುರಾಣಮ್ ॥ ೨೫ ॥

ತ್ವನ್ಮಾಯಾರಚಿತೇ ಲೋಕೇ ವಸ್ತುಬುದ್ಧ್ಯಾ ಗೃಹಾದಿಷು ।
ಭ್ರಮಂತಿ ಕಾಮಲೋಭೇರ್ಷ್ಯಾಮೋಹವಿಭ್ರಾಂತಚೇತಸಃ ॥ ೨೬ ॥

ಅದ್ಯ ನಃ ಸರ್ವಭೂತಾತ್ಮನ್ಕಾಮಕರ್ಮೇಂದ್ರಿಯಾಶಯಃ ।
ಮೋಹಪಾಶೋ ದೃಢಶ್ಛಿನ್ನೋ ಭಗವಂಸ್ತವ ದರ್ಶನಾತ್ ॥ ೨೭ ॥

*ಶ್ರೀಶುಕ ಉವಾಚ*

ಇತ್ಥಂ ಗೀತಾನುಭಾವಸ್ತಂ ಭಗವಾನ್ಕಪಿಲೋ ಮುನಿಃ ।
ಅಂಶುಮಂತಮುವಾಚೇದಮನುಗೃಹ್ಯ ಧಿಯಾ ನೃಪ ॥ ೨೮ ॥

*ಶ್ರೀಭಗವಾನುವಾಚ*

ಅಶ್ವೋಽಯಂ ನೀಯತಾಂ ವತ್ಸ ಪಿತಾಮಹಪಶುಸ್ತವ ।
ಇಮೇ ಚ ಪಿತರೋ ದಗ್ಧಾ ಗಂಗಾಂಭೋಽರ್ಹಂತಿ ನೇತರತ್ ॥ ೨೯ ॥

ತಂ ಪರಿಕ್ರಮ್ಯ ಶಿರಸಾ ಪ್ರಸಾದ್ಯ ಹಯಮಾನಯತ್ ।
ಸಗರಸ್ತೇನ ಪಶುನಾ ಕ್ರತುಶೇಷಂ ಸಮಾಪಯತ್ ॥ ೩೦ ॥

ರಾಜ್ಯಮಂಶುಮತಿ ನ್ಯಸ್ಯ ನಿಃಸ್ಪೃಹೋ ಮುಕ್ತಬಂಧನಃ ।
ಔರ್ವೋಪದಿಷ್ಟಮಾರ್ಗೇಣ ಲೇಭೇ ಗತಿಮನುತ್ತಮಾಮ್ ॥ ೩೧ ॥

ಮೋಹಿತರಾಗಿರುವುದೇ ಇದಕ್ಕೆ ಕಾರಣವಾಗಿದೆ. ಅವರು ಬಹಿರ್ಮುಖರಾದ್ದರಿಂದ ಹೊರಗಿನ ವಸ್ತುಗಳನ್ನು ಮಾತ್ರ ನೋಡುತ್ತಾರೆ; ಆದರೆ ತಮ್ಮ ಹೃದಯದಲ್ಲಿ ನೆಲೆಸಿರುವ ನಿನ್ನನ್ನು ನೋಡಲಾರರು. ॥ ೨೩॥ ನೀನು ಜ್ಞಾನಘನನೂ, ಏಕರಸನೂ ಆಗಿರುವೆ. ಮಾಯೆಯಿಂದ ಉಂಟಾಗುವ ಭೇದಭಾವವನ್ನೂ ಮತ್ತು ಅದರಿಂದ ಉಂಟಾಗುವ ಅಜ್ಞಾನವನ್ನೂ ನಾಶಪಡಿಸಿಕೊಂಡಿರುವ ಮುನಿಗಳು ಆತ್ಮಸ್ವರೂಪದ ಅನುಭವದಿಂದ ನಿನ್ನನ್ನು ನಿರಂತರವಾಗಿ ಧ್ಯಾನಿಸುತ್ತಿರುವರು. ಮಾಯೆಯ ಗುಣಗಳಿಗೆ ವಶನಾಗಿ ಮೂಢನಾದ ನಾನು ನಿನ್ನನ್ನು ಹೇಗೆ ತಾನೇ ಧ್ಯಾನಿಸಬಲ್ಲೆನು? ॥ ೨೪ ॥ ಮಾಯೆಯ ಗುಣಗಳು, ಗುಣಗಳಿಂದಾಗುವ ಕರ್ಮ ಹಾಗೂ ಕರ್ಮಗಳ ಸಂಸ್ಕಾರಗಳು ಇವುಗಳಿಂದುಂಟಾದ ಲಿಂಗ ಶರೀರವು ನಿನ್ನಲ್ಲಿ ಇಲ್ಲವೇ ಇಲ್ಲ. ನಿನಗೆ ನಾಮವಾಗಲೀ, ರೂಪವಾಗಲೀ ಇಲ್ಲ. ನಿನ್ನಲ್ಲಿ ಕಾರ್ಯವಾಗಲೀ, ಕಾರಣವಾಗಲೀ ಇಲ್ಲ. ನೀನು ಸನಾತನ ಆತ್ಮನಾಗಿರುವೆ. ಜ್ಞಾನೋಪದೇಶಕ್ಕಾಗಿಯೇ ನೀನು ಈ ಶರೀರವನ್ನು ಧರಿಸಿಕೊಂಡಿರುವೆ. ಅಂತಹ ಪುರಾಣಪುರುಷನಾದ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೨೫ ॥ ಪ್ರಭೋ! ನಿನ್ನ ಮಾಯೆಯಿಂದ ರಚಿತವಾದ ಈ ಲೋಕದಲ್ಲಿ ಕಾಮ, ಕ್ರೋಧ, ಲೋಭ, ಈರ್ಷೆ, ಮೋಹಾದಿಗಳಿಂದ ಬುದ್ಧಿಗೆಟ್ಟಿರುವ ಜನರು ಮಡದಿ, ಮಕ್ಕಳು, ಮನೆ-ಮಠ ಇವುಗಳನ್ನು ಶಾಶ್ವತವೆಂದು ಭ್ರಮಿಸಿ ಸಂಸಾರದಲ್ಲಿ ಅಲೆಯುತ್ತಾ ಇರುತ್ತಾರೆ. ॥ ೨೬ ॥ ಸಮಸ್ತ ಪ್ರಾಣಿಗಳಿಗೆ ಆತ್ಮನಾಗಿರುವ ಪ್ರಭೋ! ಇಂದು ನಿನ್ನ ದಿವ್ಯದರ್ಶನದಿಂದ ನನ್ನಲ್ಲಿದ್ದ ಕಾಮ-ಕರ್ಮೇಂದ್ರಿಯಗಳಿಗೆ ಆಶ್ರಯಭೂತನಾಗಿರುವ ದೃಢವಾದ ಮೋಹಪಾಶವು ಕತ್ತರಿಸಲ್ಪಟ್ಟಿತು. ॥ ೨೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಾನ್ ಕಪಿಲಮುನಿಯನ್ನು ಅಂಶುಮಂತನು ಹೀಗೆ ಕೀರ್ತಿಸಿದಾಗ ಅವನು ಮನಸ್ಸಿನಲ್ಲೇ ಅಂಶುಮಂತನನ್ನು ಅನುಗ್ರಹಿಸುತ್ತಾ ಇಂತೆಂದನು. ॥ ೨೮ ॥

**ಶ್ರೀಭಗವಂತನು ಹೇಳಿದನು** – ವತ್ಸ! ಈ ಕುದುರೆಯು ನಿನ್ನ ತಾತನ ಯಜ್ಞಪಶುವಾಗಿದೆ. ಇದನ್ನು ನೀನು ತೆಗೆದುಕೊಂಡು ಹೋಗು. ಸುಟ್ಟುಹೋಗಿರುವ ನಿನ್ನ ಚಿಕ್ಕಪ್ಪಂದಿರ ಉದ್ಧಾರವು ಕೇವಲ ಗಂಗಾಜಲದಿಂದ ಆದೀತು. ಇದಲ್ಲದೆ ಬೇರೆ ಯಾವ ಉಪಾಯವೂ ಇಲ್ಲ. ॥ ೨೯ ॥ ಇದನ್ನು ಕೇಳಿ ಅಂಶುಮಂತನು ಪ್ರದಕ್ಷಿಣೆಮಾಡಿ ಮುನಿಯನ್ನು ನಮಸ್ಕರಿಸಿ, ಅವನನ್ನು ಪ್ರಸನ್ನಗೊಳಿಸಿ ಕುದುರೆಯನ್ನು ರಾಜಧಾನಿಗೆ ತಂದನು. ಸಗರನು ಆ ಯಜ್ಞಪಶುವಿನಿಂದ ಉಳಿದ ಯಜ್ಞಕ್ರಿಯೆಗಳನ್ನು ಮುಗಿಸಿದನು. ॥ ೩೦ ॥ ಬಳಿಕ ಸಗರರಾಜನು ಅಂಶುಮಂತನಿಗೆ ರಾಜ್ಯಭಾರವನ್ನು ವಹಿಸಿಕೊಟ್ಟು ತಾನು ವಿಷಯಗಳಿಂದ ನಿಃಸ್ಪೃಹನಾಗಿ, ಬಂಧನಮುಕ್ತನಾದನು. ಅವನು ಮಹರ್ಷಿ ಔರ್ವರು ಅರುಹಿದ ಮಾರ್ಗದಂತೆ ಪರಮಪದವನ್ನು ಪಡೆದುಕೊಂಡನು. ॥ ೩೧ ॥

*ಎಂಟನೆಯ ಅಧ್ಯಾಯವು ಮುಗಿಯಿತು. ॥ ೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ ಸಗರೋಪಾಖ್ಯಾನೇಽಷ್ಟಮೋಽಧ್ಯಾಯಃ ॥ ೮ ॥

# ಒಂಭತ್ತನೆಯ ಅಧ್ಯಾಯ

## ಭಗೀರಥನ ಚರಿತ್ರೆ ಮತ್ತು ಗಂಗಾವತರಣ

*ಶ್ರೀಶುಕ ಉವಾಚ*

ಅಂಶುಮಾಂಶ್ಚ ತಪಸ್ತೇಪೇ ಗಂಗಾನಯನಕಾಮ್ಯಯಾ ।
ಕಾಲಂ ಮಹಾಂತಂ ನಾಶಕ್ನೋತ್ತತಃ ಕಾಲೇನ ಸಂಸ್ಥಿತಃ ॥ ೧ ॥

ದಿಲೀಪಸ್ತತ್ಸುತಸ್ತದ್ವದಶಕ್ತಃ ಕಾಲಮೇಯಿವಾನ್ ।
ಭಗೀರಥಸ್ತಸ್ಯ ಪುತ್ರಸ್ತೇಪೇ ಸ ಸುಮಹತ್ತಪಃ ॥ ೨ ॥

ದರ್ಶಯಾಮಾಸ ತಂ ದೇವೀ ಪ್ರಸನ್ನಾ ವರದಾಸ್ಮಿ ತೇ ।
ಇತ್ಯುಕ್ತಃ ಸ್ವಮಭಿಪ್ರಾಯಂ ಶಶಂಸಾವನತೋ ನೃಪಃ ॥ ೩ ॥

ಕೋಽಪಿ ಧಾರಯಿತಾ ವೇಗಂ ಪತಂತ್ಯಾ ಮೇ ಮಹೀತಲೇ ।
ಅನ್ಯಥಾ ಭೂತಲಂ ಭಿತ್ತ್ವಾ ನೃಪ ಯಾಸ್ಯೇ ರಸಾತಲಮ್ ॥ ೪ ॥

ಕಿಂ ಚಾಹಂ ನ ಭುವಂ ಯಾಸ್ಯೇ ನರಾ ಮಯ್ಯಾಮೃಜಂತ್ಯಘಮ್ ।
ಮೃಜಾಮಿ ತದಘಂ ಕುತ್ರ ರಾಜಂಸ್ತತ್ರ ವಿಚಿಂತ್ಯತಾಮ್ ॥ ೫ ॥

*ಭಗೀರಥ ಉವಾಚ*

ಸಾಧವೋ ನ್ಯಾಸಿನಃ ಶಾಂತಾ ಬ್ರಹ್ಮಿಷ್ಠಾ ಲೋಕಪಾವನಾಃ ।
ಹರಂತ್ಯಘಂ ತೇಽಙ್ಗಸಂಗಾತ್ತೇಷ್ವಾಸ್ತೇ ಹ್ಯಘಭಿದ್ಧರಿಃ ॥ ೬ ॥

ಧಾರಯಿಷ್ಯತಿ ತೇ ವೇಗಂ ರುದ್ರಸ್ತ್ವಾತ್ಮಾ ಶರೀರಿಣಾಮ್ ।
ಯಸ್ಮಿನ್ನೋತಮಿದಂ ಪ್ರೋತಂ ವಿಶ್ವಂ ಶಾಟೀವ ತಂತುಷು ॥ ೭ ॥

ಇತ್ಯುಕ್ತ್ವಾ ಸ ನೃಪೋ ದೇವಂ ತಪಸಾತೋಷಯಚ್ಛಿವಮ್ ।
ಕಾಲೇನಾಲ್ಪೀಯಸಾ ರಾಜಂಸ್ತಸ್ಯೇಶಃ ಸಮತುಷ್ಯತ ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ –** ಎಲೈ ಪರೀಕ್ಷಿತನೇ! ಅಂಶುಮಂತನು ಗಂಗೆಯನ್ನು ಕರೆತರುವ ಆಶಯದಿಂದ ಅನೇಕ ವರ್ಷಗಳವರೆಗೆ ಘೋರ ತಪಸ್ಸನ್ನಾಚರಿಸಿದನು. ಆದರೆ ಅವನಿಗೆ ಸಫಲತೆ ದೊರೆಯಲಿಲ್ಲ, ಕಾಲವು ಸನ್ನಿಹಿತವಾಗಲು ಅವನು ಕಾಲವಶನಾದನು. ॥ ೧ ॥ ಅಂಶುಮಂತನ ಪುತ್ರ ದಿಲೀಪನೂ ತಂದೆಯಂತೆಯೇ ತಪಸ್ಸನ್ನು ಮಾಡಿದನು. ಆದರೆ ಅವನೂ ಅಸಫಲನೇ ಆದನು. ಕಾಲಧರ್ಮದಿಂದ ಅವನೂ ಮೃತ್ಯು ವನ್ನೈದಿದನು. ದಿಲೀಪನ ಪುತ್ರ ಭಗೀರಥನೂ ಮಹಾತಪಸ್ಸನ್ನು ಆಚರಿಸಿದನು. ॥ ೨ ॥ ಅವನ ತಪಸ್ಸಿನಿಂದ ಪ್ರಸನ್ನಳಾದ ಭಗವತಿ ಗಂಗಾದೇವಿಯು ಅವನಿಗೆ ದರ್ಶನವಿತ್ತು – 'ರಾಜನೇ! ನಿನಗೆ ವರವನ್ನು ಕೊಡಲು ಬಂದಿರುವೆನು' ಎಂದು ಹೇಳಿದಳು. ಆಗ ರಾಜಾ ಭಗೀರಥನು ವಿನಮ್ರನಾಗಿ 'ತಾಯೇ! ನೀನು ಭೂಲೋಕಕ್ಕೆ ಆಗಮಿಸು' ಎಂದು ತನ್ನ ಮನೋರಥವನ್ನು ಪ್ರಕಟಪಡಿಸಿದನು. ॥ ೩ ॥

ಗಂಗಾದೇವಿಯು ಹೇಳಿದಳು – ವತ್ಸ ಭಗೀರಥ! ರಭಸದಿಂದ ನಾನು ಸ್ವರ್ಗದಿಂದ ಭೂಮಿಗೆ ಧುಮುಕುವಾಗ ನನ್ನ ವೇಗವನ್ನು ಧರಿಸುವವರು ಯಾರಾದರೂ ಇರಬೇಕು. ಇಲ್ಲದಿದ್ದರೆ ನಾನು ಪೃಥಿವಿಯನ್ನು ಭೇದಿಸಿಕೊಂಡು ರಸಾತಳಕ್ಕೆ ಸೇರಿ ಹೋಗುವೆನು. ॥ ೪ ॥ ಇದಲ್ಲದೆ ಜನರು ನನ್ನಲ್ಲಿ ತಮ್ಮ ಪಾಪ ಗಳನ್ನು ತೊಳೆದುಕೊಳ್ಳುವರು. ಮತ್ತೆ ನಾನು ಆ ಪಾಪಗಳನ್ನು ಎಲ್ಲಿ ತೊಳೆದುಕೊಳ್ಳಲೀ? ಈ ಕಾರಣದಿಂದಲೂ ನಾನು ಭೂಮಿಗೆ ಬರಲಾರೆನು. ಭಗೀರಥನೇ! ಈ ವಿಷಯದಲ್ಲಿ ನೀನೂ ವಿಚಾರ ಮಾಡು. ॥ ೫ ॥

**ಭಗೀರಥನು ಹೇಳಿದನು –** ತಾಯೇ! ಲೋಕ- ಪರಲೋಕ ಗಳನ್ನೂ, ಮಡದಿ-ಮಕ್ಕಳನ್ನೂ, ಮನೆ-ಮಠಗಳನ್ನೂ, ಐಶ್ವರ್ಯ ವನ್ನೂ, ಸುಖೋಪಭೋಗಗಳನ್ನೂ, ಕಾಮ - ಕ್ರೋಧಾದಿ ಗಳನ್ನೂ, ಪರಿತ್ಯಜಿಸಿರುವ ಶಾಂತರಾದ, ಬ್ರಹ್ಮನಿಷ್ಠರಾದ, ಲೋಕ ಪಾವನರಾದ ಸಾಧುಗಳು ತಮ್ಮ ಅಂಗಸ್ಪರ್ಶದಿಂದ ನಿನ್ನ ಪಾಪ ಗಳನ್ನು ತೊಳೆದುಬಿಡುವರು. ಏಕೆಂದರೆ, ಅವರ ಹೃದಯಕಮಲ ದಲ್ಲಿ ಅಘ ರೂಪನಾದ ಅಘಾಸುರನ ಹಂತಕನಾದ, ಪಾಪನಾಶಕ ನಾದ ಶ್ರೀಹರಿಯು ಸರ್ವದಾ ನೆಲೆಸಿರುತ್ತಾನೆ. ॥ ೬ ॥ ಸಮಸ್ತ ಪ್ರಾಣಿಗಳಿಗೂ ಆತ್ಮಸ್ವರೂಪನಾದ ರುದ್ರದೇವರು ನಿನ್ನ ವೇಗವನ್ನು ಧರಿಸುತ್ತಾನೆ. ಬಟ್ಟೆಯಲ್ಲಿ ದಾರವು ವ್ಯಾಪಿಸಿರುವಂತೆ ಸಮಸ್ತ ಜಗತ್ತು ರುದ್ರದೇವರಲ್ಲಿ ಹಾಸುಹೊಕ್ಕಾಗಿದೆ. ॥ ೭ ॥ ಪರೀಕ್ಷಿತನೇ! ಗಂಗಾಮಾತೆಗೆ ಹೀಗೆ ಹೇಳಿ ಭಗೀರಥನು ತಪಸ್ಸಿನ ಮೂಲಕ ಭಗವಾನ್ ಶಂಕರನನ್ನು ಒಲಿಸಿದನು. ಆಶುತೋಷನಾದ ಪರಶಿವನು ಅತ್ಯಲ್ಪಕಾಲದಲ್ಲೇ ಪ್ರಸನ್ನನಾದನು. ॥ ೮ ॥

ತಥೇತಿ ರಾಜ್ಞಾಭಿಹಿತಂ ಸರ್ವಲೋಕಹಿತಃ ಶಿವಃ ।
ದಧಾರಾವಹಿತೋ ಗಂಗಾಂ ಪಾದಪೂತಜಲಾಂ ಹರೇಃ
॥ ೯ ॥

ಭಗೀರಥಃ ಸ ರಾಜರ್ಷಿರ್ನಿನ್ಯೇ ಭುವನಪಾವನೀಮ್ ।
ಯತ್ರ ಸ್ವಪಿತೄಣಾಂ ದೇಹಾ ಭಸ್ಮೀಭೂತಾಃ ಸ್ಮ ಶೇರತೇ
॥ ೧೦ ॥

ರಥೇನ ವಾಯುವೇಗೇನ ಪ್ರಯಾಂತಮನುಧಾವತೀ ।
ದೇಶಾನ್‌ಪುನಂತೀ ನಿರ್ದಗ್ಧಾನಾಸಿಂಚತ್ಸಗರಾತ್ಮಜಾನ್
॥ ೧೧ ॥

ಯಜ್ಜಲಸ್ಪರ್ಶಮಾತ್ರೇಣ ಬ್ರಹ್ಮದಂಡಹತಾ ಅಪಿ ।
ಸಗರಾತ್ಮಜಾ ದಿವಂ ಜಗ್ಮುಃ ಕೇವಲಂ ದೇಹಭಸ್ಮಭಿಃ
॥ ೧೨ ॥

ಭಸ್ಮೀಭೂತಾಂಗಸಂಗೇನ ಸ್ವರ್ಯಾತಾಃ ಸಗರಾತ್ಮಜಾಃ ।
ಕಿಂ ಪುನಃ ಶ್ರದ್ಧಯಾ ದೇವೀಂ ಯೇ ಸೇವಂತೇ ಧೃತವ್ರತಾಃ
॥ ೧೩ ॥

ನ ಹ್ಯೇತತ್ಪರಮಾಶ್ಚರ್ಯಂ ಸ್ವರ್ಧುನ್ಯಾ ಯದಿಹೋದಿತಮ್ ।
ಅನಂತಚರಣಾಂಭೋಜಪ್ರಸೂತಾಯಾ ಭವಚ್ಛಿದಃ
॥ ೧೪ ॥

ಸಂನಿವೇಶ್ಯ ಮನೋ ಯಸ್ಮಿಞ್ಛ್ರದ್ಧಯಾ ಮುನಯೋಽಮಲಾಃ ।
ತ್ರೈಗುಣ್ಯಂ ದುಸ್ತ್ಯಜಂ ಹಿತ್ವಾಸದ್ಯೋ ಯಾತಾಸ್ತದಾತ್ಮತಾಮ್
॥ ೧೫ ॥

ಶ್ರುತೋ ಭಗೀರಥಾಜ್ಜಜ್ಞೇ ತಸ್ಯ ನಾಭೋಽಪರೋಽಭವತ್ ।
ಸಿಂಧುದ್ವೀಪಸ್ತತಸ್ತಸ್ಮಾದಯುತಾಯುಸ್ತತೋಽಭವತ್
॥ ೧೬ ॥

ಋತುಪರ್ಣೋ ನಲಸಖೋ ಯೋಽಶ್ವವಿದ್ಯಾಮಯಾನ್ನಲಾತ್ ।
ದತ್ತ್ವಾಕ್ಷಹೃದಯಂ ಚಾಸ್ಮೈ ಸರ್ವಕಾಮಸ್ತು ತತ್ಸುತಃ
॥ ೧೭ ॥

ತತಃ ಸುದಾಸಸ್ತತ್ಪುತ್ರೋ ಮದಯಂತೀಪತಿರ್ನೃಪ ।
ಆಹುರ್ಮಿತ್ರಸಹಂ ಯಂ ವೈ ಕಲ್ಮಾಷಾಂಘ್ರಿಮುತ ಕ್ವಚಿತ್ ।
ವಸಿಷ್ಠಶಾಪಾದ್ರಕ್ಷೋಽಭೂದನಪತ್ಯಃ ಸ್ವಕರ್ಮಣಾ
॥ ೧೮ ॥

ಭಗವಾನ್ ಪರಶಿವನಾದರೋ ಸಮಸ್ತ ವಿಶ್ವದ ಹಿತೈಷಿಯಾಗಿದ್ದಾನೆ. ರಾಜನ ಮಾತಿಗೆ 'ತಥಾಸ್ತು' ಎಂದು ಹೇಳಿ ಅಂಗೀಕರಿಸಿ, ಆಕಾಶದ ಕಡೆಯಿಂದ ಭೋರ್ಗರೆಯುತ್ತಾ ಬಂದ, ವಿಷ್ಣುವಿನ ಪಾದಸ್ಪರ್ಶದಿಂದ ಪಾವನವಾದ ಜಲ ಪ್ರವಾಹದಿಂದ ಕೂಡಿದ್ದ ಗಂಗಾದೇವಿಯನ್ನು ಅವನು ಜಾಗರೂಕನಾಗಿ ತನ್ನ ಶಿರಸ್ಸಿನಲ್ಲಿ ಧರಿಸಿದನು. ॥ ೯ ॥ ಇದಾದ ಬಳಿಕ ರಾಜರ್ಷಿಯಾದ ಭಗೀರಥನು ಶಿವನ ಜಟಾಜೂಟದಿಂದ ಹರಿದುಬಂದ ಆ ಗಂಗಾನದಿಯನ್ನು ತನ್ನ ಪಿತೃಗಳ ಭಸ್ಮೀ ಭೂತವಾದ ಶರೀರಗಳಿದ್ದ ಸ್ಥಳಕ್ಕೆ ಕರೆದುಕೊಂಡು ಹೋದನು. ॥ ೧೦ ॥ ವಾಯುವೇಗಕ್ಕೆ ಸಮಾನವಾದ ವೇಗವುಳ್ಳ ರಥದಲ್ಲಿ ಕುಳಿತು ಭಗೀರಥನು ಮುಂದೆ ಹೋಗುತ್ತಿದ್ದನು. ಹಲವಾರು ದೇಶಗಳನ್ನು ತನ್ನ ಶುಭ ಜಲಪ್ರವಾಹದಿಂದ ಪಾವನಗೊಳಿಸುತ್ತಾ ಗಂಗಾದೇವಿಯೂ ಭಗೀರಥನ ಹಿಂದೆಯೇ ಹೋಗುತ್ತಿದ್ದಳು. ಹೀಗೆ ಗಂಗಾ-ಸಾಗರ ಸಂಗಮಕ್ಕೆ ತಲುಪಿದ ಗಂಗೆಯು ಸುಟ್ಟುಹೋಗಿದ್ದ ಸಗರನ ಅರವತ್ತುಸಾವಿರ ಮಕ್ಕಳನ್ನು ತನ್ನ ಪುಣ್ಯಜಲದಲ್ಲಿ ಮುಳುಗಿಸಿಬಿಟ್ಟಳು. ॥ ೧೧ ॥ ಸಗರನ ಪುತ್ರರು ಬ್ರಾಹ್ಮಣನ ತಿರಸ್ಕಾರದಿಂದ ಭಸ್ಮವಾಗಿ ಹೋಗಿದ್ದರಿಂದ ಅವರ ಉದ್ಧಾರಕ್ಕೆ ಇತರ ಯಾವುದೇ ಉಪಾಯವಿಲ್ಲದಿದ್ದರೂ ಕೇವಲ ಶರೀರದ ಬೂದಿಯೊಂದಿಗೆ ಗಂಗಾಜಲದ ಸ್ಪರ್ಶವಾದ್ದರಿಂದ ಅವರೆಲ್ಲರೂ ಸ್ವರ್ಗಲೋಕಕ್ಕೆ ಹೋದರು. ॥ ೧೨ ॥ ಪರೀಕ್ಷಿತನೇ ! ಪವಿತ್ರವಾದ ಗಂಗಾಜಲವು ಸಗರನ ಮಕ್ಕಳ ಶರೀರದ ಭಸ್ಮವನ್ನು ಸ್ಪರ್ಶಿಸಿದ್ದರಿಂದಲೇ ಅವರೆಲ್ಲರೂ ಸ್ವರ್ಗಕ್ಕೆ ಹೋದರೆಂದ ಮೇಲೆ ಶ್ರದ್ಧೆಯಿಂದ ವ್ರತಾನುಷ್ಠಾನಮಾಡುತ್ತಾ ಶ್ರೀಗಂಗಾದೇವಿಯನ್ನು ಸೇವಿಸುವವರ ವಿಷಯದಲ್ಲಿ ಹೇಳುವುದೇನಿದೆ ? ॥ ೧೩ ॥ ಗಂಗಾ ದೇವಿಯ ಮಹಿಮೆಯ ಸಂಬಂಧದಲ್ಲಿ ನಾನು ಹೇಳಿದುದರಲ್ಲಿ ಆಶ್ಚರ್ಯಪಡಬೇಕಾಗಿಲ್ಲ, ಏಕೆಂದರೆ, ಗಂಗೆಯು ಭಗವಂತನ ಚರಣ ಕಮಲಗಳಿಂದ ಹೊರಟಿರುವವಳು. ಆ ಚರಣಗಳನ್ನು ಶ್ರದ್ಧೆಯಿಂದ ಚಿಂತಿಸುತ್ತಾ ಮಹಾಮುನಿಗಳೆಲ್ಲರೂ ನಿರ್ಮಲರಾಗಿ ಹೋಗುತ್ತಾರೆ. ತ್ರಿಗುಣಗಳ ಕಷ್ಟತರ ಬಂಧನವನ್ನು ಕತ್ತರಿಸಿ ಒಡನೆಯೇ ಭಗವತ್ ಸ್ವರೂಪರಾಗಿ ಹೋಗುತ್ತಾರೆ. ಹಾಗಿರುವಾಗ ಗಂಗೆಯು ಸಂಸಾರ ಬಂಧನವನ್ನು ಕತ್ತರಿಸುವುದರಲ್ಲಿ ಆಶ್ಚರ್ಯವೇನಿದೆ ? ॥ ೧೪-೧೫ ॥

ಭಗೀರಥನಿಗೆ ಶ್ರುತನೆಂಬ ಪುತ್ರನಿದ್ದನು. ಶ್ರುತನಿಗೆ ನಾಭ. ಇವನು ಹಿಂದಿನ ನಾಭನಿಗಿಂತ ಬೇರೆಯಾದವನು. ನಾಭನಿಗೆ ಸಿಂಧುದ್ವೀಪನೆಂಬ ಪುತ್ರನು. ಅವನಲ್ಲಿ ಅಯುತಾಯು ಜನಿಸಿದನು. ಅಯುತಾಯುವಿಗೆ ಋತುಪರ್ಣ ಮಗನಾದನು. ಅವನು ನಳನ ಮಿತ್ರನಾಗಿದ್ದನು. ಋತುಪರ್ಣನು ನಳನಿಂದ ಅಶ್ವವಿದ್ಯೆಯನ್ನು ಕಲಿತು, ಬದಲಿಗೆ ನಳನಿಗೆ ಅಕ್ಷಹೃದಯ (ಪಗಡೆಯಾಟ) ವನ್ನು ಹೇಳಿಕೊಟ್ಟನು. ಋತುಪರ್ಣನಿಗೆ ಸರ್ವಕಾಮನೆಂಬ ಪುತ್ರನಾದನು. ॥ ೧೬-೧೭ ॥ ಪರೀಕ್ಷಿತನೇ ! ಸರ್ವಕಾಮನಿಗೆ ಸುದಾಸನೆಂಬ ಮಗನಿದ್ದನು. ಸುದಾಸನ ಪುತ್ರ ಸೌದಾಸನು. ಸೌದಾಸನಿಗೆ ಮದಯಂತಿ ಎಂಬ ಪತ್ನಿಯಿದ್ದಳು. ಸೌದಾಸನನ್ನೇ ಕೆಲವರು ಮಿತ್ರಸಹನೆಂದು ಹೇಳುತ್ತಿದ್ದರು. ಇನ್ನೂ ಕೆಲವರು ಕಲ್ಮಾಷಪಾದ ಎಂದೂ ಕರೆಯುತ್ತಿದ್ದರು. ಅವನು ವಸಿಷ್ಠರ ಶಾಪದಿಂದ ರಾಕ್ಷಸನಾಗಿದ್ದನು. ಮತ್ತೆ ತನ್ನ ಕರ್ಮಗಳಿಂದಾಗಿ ಸಂತಾನಹೀನನಾದನು. ॥ ೧೮ ॥

*ರಾಜೋವಾಚ*

**ಕಿಂ ನಿಮಿತ್ತೋ ಗುರೋಃ ಶಾಪಃ ಸೌದಾಸಸ್ಯ ಮಹಾತ್ಮನಃ ।
ಏತದ್ವೇದಿತುಮಿಚ್ಛಾಮಃ ಕಥ್ಯತಾಂ ನ ರಹೋ ಯದಿ
॥ ೧೯ ॥**

*ಶ್ರೀಶುಕ ಉವಾಚ*

**ಸೌದಾಸೋ ಮೃಗಯಾಂ ಕಿಂಚಿಚ್ಚರನ್ರಕ್ಷೋ ಜಘಾನ ಹ ।
ಮುಮೋಚ ಭ್ರಾತರಂ ಸೋಽಥ ಗತಃ ಪ್ರತಿಚಿಕೀರ್ಷಯಾ
॥ ೨೦ ॥**

**ಸ ಚಿಂತಯನ್ನಘಂ ರಾಜ್ಞಃ ಸೂದರೂಪಧರೋ ಗೃಹೇ ।
ಗುರವೇ ಭೋಕ್ತುಕಾಮಾಯ ಪಕ್ತ್ವಾ ನಿನ್ಯೇ ನರಾಮಿಷಮ್
॥ ೨೧ ॥**

**ಪರಿವೇಕ್ಷ್ಯಮಾಣಂ ಭಗವಾನ್ವಿಲೋಕ್ಯಾಭಕ್ಷ್ಯಮಂಜಸಾ ।
ರಾಜಾನಮಶಪತ್ಕ್ರುದ್ಧೋ ರಕ್ಷೋ ಹ್ಯೇವಂ ಭವಿಷ್ಯಸಿ
॥ ೨೨ ॥**

**ರಕ್ಷಃಕೃತಂ ತದ್ವಿದಿತ್ವಾ ಚಕ್ರೇ ದ್ವಾದಶವಾರ್ಷಿಕಮ್ ।
ಸೋಽಪ್ಯಪೋಽಂಜಲಿನಾಽಽದಾಯ ಗುರುಂ ಶಪ್ತುಂ ಸಮುದ್ಯತಃ
॥ ೨೩ ॥**

**ವಾರಿತೋ ಮದಯಂತ್ಯಾಪೋ ರುಶತೀಃ ಪಾದಯೋರ್ಜಹೌ ।
ದಿಶಃ ಖಮವನೀಂ ಸರ್ವಂ ಪಶ್ಯಂಜೀವಮಯಂ ನೃಪಃ
॥ ೨೪ ॥**

**ರಾಕ್ಷಸಂ ಭಾವಮಾಪನ್ನಃ ಪಾದೇ ಕಲ್ಮಾಷತಾಂ ಗತಃ ।
ವ್ಯವಾಯಕಾಲೇ ದದೃಶೇ ವನೌಕೋದಂಪತೀ ದ್ವಿಜೌ
॥ ೨೫ ॥**

**ಕ್ಷುಧಾರ್ತೋ ಜಗೃಹೇ ವಿಪ್ರಂ ತತ್ಪತ್ನ್ಯಾಹಾಕೃತಾರ್ಥವತ್ ।
ನ ಭವಾನ್ ರಾಕ್ಷಸಃ ಸಾಕ್ಷಾದಿಕ್ಷ್ವಾಕೂಣಾಂ ಮಹಾರಥಃ
॥ ೨೬ ॥**

**ಮದಯಂತ್ಯಾಃ ಪತಿರ್ವೀರ ನಾಧರ್ಮಂ ಕರ್ತುಮರ್ಹಸಿ ।
ದೇಹಿ ಮೇಽಪತ್ಯಕಾಮಾಯಾ ಅಕೃತಾರ್ಥಂ ಪತಿಂ ದ್ವಿಜಮ್
॥ ೨೭ ॥**

**ಪರೀಕ್ಷಿದ್ರಾಜನು ಕೇಳಿದನು** – ಪೂಜ್ಯರೇ! ಮಹಾತ್ಮನಾದ ಸೌದಾಸನಿಗೆ ಗುರು ವಸಿಷ್ಠರು ಏಕೆ ಶಪಿಸಿದರು? ಇದನ್ನು ತಿಳಿಯಲು ನಾವೆಲ್ಲರೂ ಬಯಸುತ್ತಿದ್ದೇವೆ. ಯಾವುದೇ ರಹಸ್ಯವಿಲ್ಲದಿದ್ದರೆ ದಯಮಾಡಿ ಹೇಳಿರಿ. ॥ ೧೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಒಮ್ಮೆ ರಾಜಾ ಸೌದಾಸನು ಬೇಟೆಯಾಡಲು ಕಾಡಿಗೆ ಹೋಗಿದ್ದನು. ಅವನು ಓರ್ವ ರಾಕ್ಷಸನನ್ನು ಕೊಂದುಹಾಕಿದನು ಹಾಗೂ ಅವನ ತಮ್ಮನನ್ನು ಬಿಟ್ಟುಬಿಟ್ಟನು. ಅವನು ರಾಜನ ಈ ಕೆಲಸವನ್ನು ಅನ್ಯಾಯವೆಂದು ತಿಳಿದು, ಅಣ್ಣನ ಸಾವಿನ ಸೇಡು ತೀರಿಸಿಕೊಳ್ಳಲು ಅವನು ಅಡಿಗೆಯವನಾಗಿ ರಾಜನ ಅರಮನೆ ಸೇರಿದನು. ಒಂದು ದಿನ ಗುರು ವಸಿಷ್ಠರು ಸೌದಾಸನಲ್ಲಿಗೆ ಊಟಕ್ಕೆ ಬಂದಾಗ ಅಡಿಗೆಯವನು ನರಮಾಂಸವನ್ನು ಬೇಯಿಸಿ ಬಡಿಸಿದನು. ॥ ೨೦-೨೧ ॥ ಬಡಿಸಿದ ವಸ್ತುವು ಸರ್ವಥಾ ಅಭಕ್ಷ್ಯವಾದುದು ಎಂದು ತಿಳಿದಾಗ ಸರ್ವಸಮರ್ಥರಾದ ವಸಿಷ್ಠರು ಕ್ರೋಧಗೊಂಡು ರಾಜನಿಗೆ – 'ಈ ಕೃತ್ಯದಿಂದಾಗಿ ನೀನು ರಾಕ್ಷಸನಾಗಿ ಹೋಗು' ಎಂದು ಶಾಪವನ್ನು ಕೊಟ್ಟರು. ॥ ೨೨ ॥ ಆದರೆ ಈ ಕೆಲಸವು ರಾಜನದ್ದಲ್ಲ, ರಾಕ್ಷಸನದು ಎಂದು ತಿಳಿದಾಗ ಅವರು ಆ ಶಾಪವನ್ನು ಕೇವಲ ಹನ್ನೆರಡು ವರ್ಷಗಳಿಗೆ ಸೀಮಿತಗೊಳಿಸಿದರು. ಆ ಸಮಯದಲ್ಲಿ ಸೌದಾಸನೂ ತನ್ನ ಬೊಗಸೆಯಲ್ಲಿ ನೀರನ್ನೆತ್ತಿಕೊಂಡು ಗುರು ವಸಿಷ್ಠರಿಗೆ ಶಾಪವನ್ನೀಯಲು ಸಿದ್ಧನಾದನು. ॥ ೨೩ ॥ ಆದರೆ ರಾಜನ ಪತ್ನಿ ಮದಯಂತಿಯು ಹೀಗೆ ಮಾಡಬಾರದೆಂದು ತಡೆದಳು. ಆಗ ಸೌದಾಸನು ಯೋಚಿಸಿದನು – ದಿಕ್ಕುಗಳು, ಆಕಾಶ ಮತ್ತು ಪೃಥಿವಿ ಎಲ್ಲವೂ ಜೀವಮಯವೇ ಆಗಿರುವುವು. ಎಲ್ಲಿಯೇ ಆಗಲಿ, ಈ ತೀಕ್ಷ್ಣ ಜಲವನ್ನು ಚೆಲ್ಲಿದರೂ ಪ್ರಾಣಿಗಳ ವಿನಾಶವಾಗಬಹುದು ಎಂದು ಭಾವಿಸಿ ಕೊನೆಗೆ ಅವನು ಆದನ್ನು ತನ್ನ ಕಾಲುಗಳ ಮೇಲೆಯೇ ಹಾಕಿಕೊಂಡನು. ಇದರಿಂದ ಸೌದಾಸನಿಗೆ ಮಿತ್ರಸಹನೆಂಬ ಹೆಸರಾಯಿತು. ॥ ೨೪ ॥ ಆ ಜಲದಿಂದ ಅವನ ಕಾಲುಗಳು ಕಪ್ಪಾದುವು. ಆದರಿಂದ ಅವನಿಗೆ ಕಲ್ಮಾಷಪಾದ ಎಂದೂ ಹೆಸರಾಯಿತು. ಈಗ ಅವನು ರಾಕ್ಷಸನಾಗಿದ್ದನು. ಒಂದು ದಿನ ರಾಕ್ಷಸನಾಗಿದ್ದ ಕಲ್ಮಾಷಪಾದ ರಾಜನು ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಬ್ರಾಹ್ಮಣ ದಂಪತಿಗಳು ರತಿಸುಖದಲ್ಲಿರುವುದನ್ನು ನೋಡಿದನು. ॥ ೨೫ ॥ ಕಲ್ಮಾಷಪಾದನು ಹಸಿದಿದ್ದನು. ಅವನು ಬ್ರಾಹ್ಮಣನನ್ನು ಹಿಡಿದುಕೊಂಡನು. ಆಗ ಬ್ರಾಹ್ಮಣ ಪತ್ನಿಯ ಕಾಮನೆಯು ಪೂರ್ಣಗೊಂಡಿರಲಿಲ್ಲ, ಅವಳೆಂದಳು – ಮಹಾರಾಜ! ನೀನು ನಿಶ್ಚಯವಾಗಿ ರಾಕ್ಷಸನಲ್ಲ, ನೀನು ಇಕ್ಷ್ವಾಕುವಂಶದ ವೀರ ಮಹಾರಥಿ ಮಹಾರಾಣಿ ಮದಯಂತಿಯ ಪತಿಯಾಗಿರುವೆ. ನೀನು ಇಂತಹ ಅಧರ್ಮವನ್ನು ಮಾಡುವುದು ಉಚಿತವಲ್ಲ, ನಾನು ಸಂತಾನದ ಕಾಮನೆಯಿಂದ ನನ್ನ ಪತಿಯೊಡನೆ ಸೇರಿದ್ದೆ, ನನ್ನ ಪತಿಯೂ ಪೂರ್ಣಕಾಮನಾಗಲಿಲ್ಲ, ಆದುದರಿಂದ ದಯಮಾಡಿ ನನ್ನ ಪತಿಯನ್ನು ಬಿಟ್ಟುಬಿಡು. ॥ ೨೬-೨೭ ॥

ದೇಹೋಽಯಂ ಮಾನುಷೋ ರಾಜನ್ಪುರುಷಸ್ಯಾಖಿಲಾರ್ಥದಃ ।
ತಸ್ಮಾದಸ್ಯ ವಧೋ ವೀರ ಸರ್ವಾರ್ಥವಧ ಉಚ್ಯತೇ
॥ ೨೮ ॥

ಏಷ ಹಿ ಬ್ರಾಹ್ಮಣೋ ವಿದ್ವಾಂಸ್ತಪಃಶೀಲಗುಣಾನ್ವಿತಃ ।
ಆರಿರಾಧಯಿಷುರ್ಬ್ರಹ್ಮ ಮಹಾಪುರುಷಸಂಜ್ಞಿತಮ್ ।
ಸರ್ವಭೂತಾತ್ಮಭಾವೇನ ಭೂತೇಷ್ವಂತರ್ಹಿತಂ ಗುಣೈಃ
॥ ೨೯ ॥

ಸೋಽಯಂ ಬ್ರಹ್ಮರ್ಷಿವರ್ಯಸ್ತೇ ರಾಜರ್ಷಿಪ್ರವರಾದ್ವಿಭೋ ।
ಕಥಮರ್ಹತಿ ಧರ್ಮಜ್ಞ ವಧಂ ಪಿತುರಿವಾತ್ಮಜಃ
॥ ೩೦ ॥

ತಸ್ಯ ಸಾಧೋರಪಾಪಸ್ಯ ಭ್ರೂಣಸ್ಯ ಬ್ರಹ್ಮವಾದಿನಃ ।
ಕಥಂ ವಧಂ ಯಥಾ ಬಭ್ರೋರ್ಮನ್ಯತೇ ಸನ್ಮತೋ ಭವಾನ್
॥ ೩೧ ॥

ಯದ್ಯಯಂ ಕ್ರಿಯತೇ ಭಕ್ಷಸ್ತರ್ಹಿ ಮಾಂ ಖಾದ ಪೂರ್ವತಃ ।
ನ ಜೀವಿಷ್ಯೇ ವಿನಾ ಯೇನ ಕ್ಷಣಂ ಚ ಮೃತಕಂ ಯಥಾ
॥ ೩೨ ॥

ಏವಂ ಕರುಣಭಾಷಿಣ್ಯಾ ವಿಲಪಂತ್ಯಾ ಅನಾಥವತ್ ।
ವ್ಯಾಘ್ರಃ ಪಶುಮಿವಾಖಾದತ್ಸೌದಾಸಃ ಶಾಪಮೋಹಿತಃ
॥ ೩೩ ॥

ಬ್ರಾಹ್ಮಣೀ ವೀಕ್ಷ್ಯ ದಿಧಿಷುಂ ಪುರುಷಾದೇನ ಭಕ್ಷಿತಮ್ ।
ಶೋಚಂತ್ಯಾತ್ಮಾನಮುರ್ವೀಶಮಶಪತ್ಕುಪಿತಾ ಸತೀ
॥ ೩೪ ॥

ಯಸ್ಮಾನ್ಮೇ ಭಕ್ಷಿತಃ ಪಾಪ ಕಾಮಾರ್ತಾಯಾಃ ಪತಿಸ್ತ್ವಯಾ ।
ತವಾಪಿ ಮೃತ್ಯುರಾಧಾನಾದಕೃತಪ್ರಜ್ಞ ದರ್ಶಿತಃ
॥ ೩೫ ॥

ಏವಂ ಮಿತ್ರಸಹಂ ಶಪ್ತ್ವಾ ಪತಿಲೋಕಪರಾಯಣಾ ।
ತದಸ್ಥೀನಿ ಸಮಿದ್ಧೇಽಗ್ನೌ ಪ್ರಾಸ್ಯ ಭರ್ತುರ್ಗತಿಂ ಗತಾ
॥ ೩೬ ॥

ರಾಜನೇ ! ಈ ಮನುಷ್ಯ ಶರೀರವು ಜೀವನಿಗೆ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕುವಿಧವಾದ ಪುರುಷಾರ್ಥಗಳನ್ನು ಸಾಧಿಸಿ ಕೊಡುವಂತಹುದು. ಆದಕ್ಕಾಗಿ ವೀರನೇ ! ಈ ಶರೀರವನ್ನು ನಾಶಗೊಳಿಸುವುದು ಎಲ್ಲ ಪುರುಷಾರ್ಥಗಳನ್ನು ಹತ್ಯೆಮಾಡಿದಂತೆ ಎಂದು ಹೇಳಲಾಗಿದೆ. ॥ ೨೮ ॥ ಈ ಬ್ರಾಹ್ಮಣನಾದರೋ ವಿದ್ವಾಂಸನಾಗಿದ್ದಾನೆ. ತಪಸ್ಸು ಸೌಶೀಲ್ಯ ಮತ್ತು ಉತ್ತಮ ಗುಣಗಳಿಂದ ಸಂಪನ್ನನಾಗಿರುವನು. ಯಾರು ಸಮಸ್ತ ಪದಾರ್ಥಗಳಲ್ಲಿ ಇದ್ದರೂ ಅವುಗಳ ಬೇರೆ-ಬೇರೆ ಗುಣಗಳಿಂದ ಅಡಗಿರುವನೋ, ಅಂತಹ ಪರಬ್ರಹ್ಮ ಪುರುಷೋತ್ತಮ ನನ್ನು ಸಮಸ್ತ ಪ್ರಾಣಿಗಳ ಆತ್ಮರೂಪನೆಂದು ಅರಿತು ಇವನು ಆರಾಧಿ ಸುತ್ತಿರುವನು. ॥ ೨೯ ॥ ಮಹಾರಾಜನೇ ! ನೀನು ಶಕ್ತಿಶಾಲಿಯಾಗಿ ರುವೆ ಧರ್ಮದ ಮರ್ಮವನ್ನು ಚೆನ್ನಾಗಿ ಅರಿತುಕೊಂಡಿರುವೆ. ತಂದೆಯ ಕೈಯಿಂದ ಮಗನ ಹತ್ಯೆಯು ಉಚಿತವಲ್ಲವೋ ಅಂತೆಯೇ ನಿನ್ನಂತಹ ಶ್ರೇಷ್ಠ ರಾಜರ್ಷಿಯ ಕೈಯಿಂದ ನನ್ನ ಪತಿಯಾದ ಈ ಶ್ರೇಷ್ಠಬ್ರಹ್ಮರ್ಷಿಯನ್ನು ವಧಿಸುವುದು ಯಾವರೀತಿಯಿಂದಲೂ ಉಚಿತವಲ್ಲ. ॥ ೩೦ ॥ ನೀನು ಸಾಧುಸಮ್ಮತನಾಗಿರುವೆ. ನನ್ನ ಪತಿಯು ನಿಷ್ಪಾಪನೂ, ಪರಮ ಸಾಧುವೂ, ಬ್ರಹ್ಮವಾದಿಯೂ, ಶ್ರೋತ್ರಿಯನೂ ಆಗಿರುವನು. ಗೋಹತ್ಯೆಗೆ ಸಮಾನವಾದ ನನ್ನ ಪತಿಯ ವಧೆಯನ್ನು ನೀನು ಸಮುಚಿತವಾದುದೆಂದು ಹೇಗೆ ಭಾವಿಸುವೆ ? ॥ ೩೧ ॥ ಹೀಗಿದ್ದರೂ ನೀನು ಇವರನ್ನು ತಿಂದು ಬಿಡುವುದಾದರೆ ಮೊದಲಿಗೆ ನನ್ನನ್ನು ತಿಂದುಬಿಡು. ಏಕೆಂದರೆ, ಪತಿಯ ಹೊರತು ನಾನು ಹೆಣದಂತಾಗುವೆನು. ಒಂದು ಕ್ಷಣವೂ ಜೀವಿಸಿರಲಾರೆನು. ॥ ೩೨ ॥ ಬ್ರಾಹ್ಮಣಪತ್ನಿಯು ಕರುಣಾಪೂರ್ಣ ವಾದ ಮಾತುಗಳಿಂದ ಹೀಗೆ ಹೇಳಿ ಅನಾಥಳಂತೆ ಅಳತೊಡಗಿದಳು. ಆದರೆ ಸೌದಾಸನು ಶಾಪದಿಂದ ಮೋಹಿತನಾದ್ದರಿಂದ ಅವಳ ಪ್ರಾರ್ಥನೆಯ ಕಡೆಗೆ ಸ್ವಲ್ಪವೂ ಗಮನ ಕೊಡಲಿಲ್ಲ. ಅವನು ಹುಲಿಯು ಪಶುವನ್ನು ತಿಂದುಬಿಡುವಂತೆ ಆ ಬ್ರಾಹ್ಮಣನನ್ನೂ ತಿಂದು ಬಿಟ್ಟನು. ॥ ೩೩ ॥ ಗರ್ಭಾಧಾನಮಾಡಲಿದ್ದ ಪತಿಯನ್ನು ರಾಕ್ಷಸ ರೂಪದಲ್ಲಿದ್ದ ರಾಜನು ತನ್ನ ಸಮಕ್ಷದಲ್ಲಿಯೇ ಭಕ್ಷಿಸಿದ್ದಕ್ಕಾಗಿ ಬ್ರಾಹ್ಮಣಿಗೆ ಅತೀವ ದುಃಖವಾಯಿತು. ಮರುಕ್ಷಣದಲ್ಲೇ ಆ ಸಾಧ್ವಿಬ್ರಾಹ್ಮಣಿಯು ಕ್ರೋಧಗೊಂಡು ರಾಜನಿಗೆ ಶಾಪವನ್ನಿತ್ತಳು. ॥ ೩೪ ॥ 'ಎಲವೋ ಪಾಪಿಯೇ ! ಮೂರ್ಖನೇ ! ಕಾಮಪೀಡಿತ ಳಾಗಿದ್ದ ನನ್ನ ಮನೋರಥವು ಪೂರೈಸುವುದರೊಳಗಾಗಿ ನೀನು ನನ್ನ ಪತಿಯನ್ನು ಭಕ್ಷಿಸಿದೆಯಾದ ಕಾರಣ ನೀನು ಗರ್ಭಾಧಾನಕ್ಕಾಗಿ ಪತ್ನಿ ಯನ್ನು ಸೇರಿದೊಡನೆ ನಿನಗೆ ಮೃತ್ಯುದೇವತೆಯು ಕಾಣಿಸಿ ಕೊಳ್ಳುತ್ತದೆ.' ॥ ೩೫ ॥ ಹೀಗೆ ಪತಿಲೋಕಪರಾಯಣೆಯಾದ ಬ್ರಾಹ್ಮಣಿಯು ಮಿತ್ರಸಹನಿಗೆ ಶಾಪವನ್ನಿತ್ತು, ಪತಿಯ ಅಸ್ಥಿಗಳನ್ನು ಸಂಗ್ರಹಿಸಿ ಚಿತೆಯನ್ನು ರಚಿಸಿ ಅದರ ಮೇಲಿಟ್ಟು ಧಗ-ಧಗಿಸುವ ಅಗ್ನಿಯಲ್ಲಿ ತಾನೂ ಧುಮುಕಿ ಪತಿಯೊಡನೆ ಸಹಗಮನ ಮಾಡಿ ಪತಿಯು ಪಡೆದ ಸದ್ಗತಿಯನ್ನೇ ತಾನೂ ಪಡೆದುಕೊಂಡಳು. ॥ ೩೬ ॥

ವಿಶಾಪೋ ದ್ವಾದಶಾಬ್ದಾಂತೇ ಮೈಥುನಾಯ ಸಮುದ್ಯತಃ ।
ವಿಜ್ಞಾಯ ಬ್ರಾಹ್ಮಣೀಶಾಪಂ ಮಹಿಷ್ಯಾ ಸ ನಿವಾರಿತಃ ॥ ೩೭ ॥

ತತ ಊರ್ಧ್ವಂ ಸ ತತ್ಯಾಜ ಸ್ತ್ರೀಸುಖಂ ಕರ್ಮಣಾ ಪ್ರಜಾಃ ।
ವಸಿಷ್ಠಸ್ತದನುಜ್ಞಾತೋ ಮದಯಂತ್ಯಾಂ ಪ್ರಜಾಮಧಾತ್ ॥ ೩೮ ॥

ಸಾ ವೈ ಸಪ್ತ ಸಮಾ ಗರ್ಭಮಬಿಭ್ರನ್ನ ವ್ಯಜಾಯತ ।
ಜಘ್ನೇಽಶ್ಮನೋದರಂ ತಸ್ಯಾಃ ಸೋಽಶ್ಮಕಸ್ತೇನ ಕಥ್ಯತೇ ॥ ೩೯ ॥

ಅಶ್ಮಕಾನ್ಮೂಲಕೋ ಜಜ್ಞೇ ಯಃ ಸ್ತ್ರೀಭಿಃ ಪರಿರಕ್ಷಿತಃ ।
ನಾರೀಕವಚ ಇತ್ಯುಕ್ತೋ ನಿಃಕ್ಷತ್ರೇ ಮೂಲಕೋಽಭವತ್ ॥ ೪೦ ॥

ತತೋ ದಶರಥಸ್ತಸ್ಮಾತ್ಪುತ್ರ ಐಡವಿಡಸ್ತತಃ ।
ರಾಜಾ ವಿಶ್ವಸಹೋ ಯಸ್ಯ ಖಟ್ವಾಂಗಶ್ಚಕ್ರವರ್ತ್ಯಭೂತ್ ॥ ೪೧ ॥

ಯೋ ದೇವೈರರ್ಥಿತೋ ದೈತ್ಯಾನವಧೀದ್ಯುಧಿ ದುರ್ಜಯಃ ।
ಮುಹೂರ್ತಮಾಯುರ್ಜ್ಞಾತ್ವೈತ್ಯ ಸ್ವಪುರಂ ಸಂದದೇ ಮನಃ ॥ ೪೨ ॥

ನ ಮೇ ಬ್ರಹ್ಮಕುಲಾತ್ಪ್ರಾಣಾಃ ಕುಲದೈವಾನ್ನ ಚಾತ್ಮಜಾಃ ।
ನ ಶ್ರಿಯೋ ನ ಮಹೀ ರಾಜ್ಯಂ ನ ದಾರಾಶ್ಚಾತಿವಲ್ಲಭಾಃ ॥ ೪೩ ॥

ನ ಬಾಲ್ಯೇಽಪಿ ಮತಿರ್ಮಹ್ಯಮಧರ್ಮೇ ರಮತೇ ಕ್ವಚಿತ್ ।
ನಾಪಶ್ಯಮುತ್ತಮಶ್ಲೋಕಾದನ್ಯತ್ಕಿಂಚನ ವಸ್ತ್ವಹಮ್ ॥ ೪೪ ॥

ದೇವೈಃ ಕಾಮವರೋ ದತ್ತೋ ಮಹ್ಯಂ ತ್ರಿಭುವನೇಶ್ವರೈಃ ।
ನ ವೃಣೇ ತಮಹಂ ಕಾಮಂ ಭೂತಭಾವನಭಾವನಃ ॥ ೪೫ ॥

ಯೇ ವಿಕ್ಷಿಪ್ತೇಂದ್ರಿಯಧಿಯೋ ದೇವಾಸ್ತೇ ಸ್ವಹೃದಿ ಸ್ಥಿತಮ್ ।
ನ ವಿಂದಂತಿ ಪ್ರಿಯಂ ಶಶ್ವದಾತ್ಮಾನಂ ಕಿಮುತಾಪರೇ ॥ ೪೬ ॥

ಹನ್ನೆರಡು ವರ್ಷಗಳು ಕಳೆದ ಬಳಿಕ ಸೌದಾಸನು ಶಾಪಮುಕ್ತನಾದನು. ಸಂತೋಷಭರಿತನಾಗಿದ್ದ ರಾಜನು ಪತ್ನಿಯೊಡನೆ ಸಮಾಗಮಕ್ಕೆ ಹೋದಾಗ ಮದಯಂತಿಯು ಆತನನ್ನು ತಡೆದಳು. ಏಕೆಂದರೆ, ಅವಳಿಗೆ ಬ್ರಾಹ್ಮಣಿಯ ಶಾಪವೃತ್ತಾಂತವು ತಿಳಿದಿತ್ತು. ॥ ೩೭ ॥

ಅನಂತರ ರಾಜನು ಸ್ತ್ರೀಸುಖವನ್ನು ಪೂರ್ಣವಾಗಿ ಪರಿತ್ಯಜಿಸಿದನು. ಹೀಗೆ ಅವನು ತನ್ನ ಕರ್ಮಫಲದಿಂದಾಗಿ ಸಂತಾನಹೀನನಾದನು. ರಾಜನ ಅನುಮತಿಯನ್ನು ಪಡೆದು ವಸಿಷ್ಠರು ಮದಯಂತಿಗೆ ಗರ್ಭಾಧಾನಮಾಡಿದರು. ॥ ೩೮ ॥ ಮದಯಂತಿಯು ಏಳು ವರ್ಷಗಳವರೆಗೆ ಗರ್ಭಧಾರಣೆ ಮಾಡಿದಳು. ಆದರೆ ಅವಳಿಗೆ ಮಗು ಹುಟ್ಟಲಿಲ್ಲ, ಆಗ ವಸಿಷ್ಠರು ಅವಳ ಹೊಟ್ಟೆಯನ್ನು ಕಲ್ಲಿನಿಂದ ಕುಟ್ಟಿದಾಗ ಶಿಶುವಿನ ಜನನವಾಯಿತು. ಕಲ್ಲಿನ ಏಟಿನಿಂದ ಹುಟ್ಟಿದ್ದರಿಂದ ಆ ಮಗುವಿನ ಹೆಸರು ಅಶ್ಮಕವೆಂದಾಯಿತು. ॥ ೩೯ ॥ ಅಶ್ಮಕನಿಗೆ 'ಮೂಲಕ'ನೆಂಬುವನು ಪುತ್ರನಾದನು. ಪರಶುರಾಮನು ಪೃಥಿವಿಯನ್ನು ಕ್ಷತ್ರಿಯರಹಿತನನ್ನಾಗಿಸುತ್ತಿದ್ದಾಗ ಸ್ತ್ರೀಯರು ಮೂಲಕನನ್ನು ಅಡಗಿಸಿಟ್ಟಿದ್ದರು. ಇದರಿಂದ ಇವನಿಗೆ 'ನಾರೀ ಕವಚ' ಎಂದೂ ಹೆಸರಾಯಿತು. ಅವನು ಪೃಥಿವಿಯು ಕ್ಷತ್ರಿಯ ಹೀನನಾದಾಗ ಆ ವಂಶದ ಮೂಲ(ಪ್ರವರ್ತಕ)ನಾದ್ದರಿಂದ ಅವನನ್ನೂ 'ಮೂಲಕ'ನೆಂದು ಕರೆಯುತ್ತಿದ್ದರು. ॥ ೪೦ ॥ ಮೂಲಕನಿಗೆ ದಶರಥನು ಹುಟ್ಟಿದನು. ದಶರಥನಿಗೆ ಎಡವಿಡನಾದನು. ಎಡವಿಡನಿಗೆ ವಿಶ್ವಸಹ ರಾಜನಾದನು. ವಿಶ್ವಸಹನ ಪುತ್ರನೇ ಚಕ್ರವರ್ತಿ ಖಟ್ವಾಂಗರಾಜನಾದನು. ॥ ೪೧ ॥ ಯುದ್ಧದಲ್ಲಿ ಅವನು ಅಜೇಯನಾಗಿದ್ದನು. ದೇವತೆಗಳ ಪ್ರಾರ್ಥನೆಯಂತೆ ಅವನು ರಾಕ್ಷಸರನ್ನು ವಧಿಸಿದ್ದನು. ದೇವತೆಗಳಿಂದ ಅವನಿಗೆ ತನ್ನ ಆಯುಸ್ಸು, ಕೇವಲ ಎರಡೇ ಗಳಿಗೆಗಳು ಮಾತ್ರ ಉಳಿದಿದೆ ಎಂದು ತಿಳಿದಾಗ ಖಟ್ವಾಂಗನು ರಾಜಧಾನಿಗೆ ಮರಳಿ ತನ್ನ ಮನಸ್ಸನ್ನು ಭಗವಂತನಲ್ಲಿ ತೊಡಗಿಸಿದನು. ॥ ೪೨ ॥ ಅವನು ಮನಸ್ಸಿನಲ್ಲೇ ಅಂದುಕೊಂಡನು – 'ನನ್ನ ಕುಲದ ಇಷ್ಟದೇವರು ಬ್ರಾಹ್ಮಣರಾಗಿದ್ದಾರೆ. ಅವರಿಂದ ಹೊರತಾಗಿ ನನಗೆ ನನ್ನ ಪ್ರಾಣಗಳೂ ಪ್ರಿಯವಾಗಿಲ್ಲ, ಪತ್ನೀ, ಪುತ್ರರು, ಸಂಪತ್ತು , ರಾಜ್ಯ, ಪೃಥಿವಿಯೂ ಕೂಡ ನನಗೆ ಬ್ರಾಹ್ಮಣರಷ್ಟು ಪ್ರಿಯರಲ್ಲ. ॥ ೪೩ ॥ ಬಾಲ್ಯದಿಂದಲೂ ನನ್ನ ಮನಸ್ಸು ಎಂದಿಗೂ ಅಧರ್ಮದ ಕಡೆಗೆ ಹೋಗಲಿಲ್ಲ, ನಾನು ಪುಣ್ಯಶ್ಲೋಕನಾದ ಭಗವಂತನನ್ನು ಬಿಟ್ಟು ಬೇರೇನನ್ನೂ ಕಂಡಿಲ್ಲ. ॥ ೪೪ ॥ ಮೂರುಲೋಕಗಳ ಒಡೆಯರಾದ ದೇವತೆಗಳು ನನಗೆ ಬಯಸಿದ ವರವನ್ನು ಕೇಳಲು ಹೇಳಿದಾಗಲೂ, ನಾನು ಭೋಗಲಾಲಸೆಯಿಂದ ಆ ವರವನ್ನು ಪಡೆದುಕೊಳ್ಳಲಿಲ್ಲ, ಏಕೆಂದರೆ, ಸಮಸ್ತ ಪ್ರಾಣಿಗಳ ಜೀವನಪ್ರದನಾದ ಶ್ರೀಹರಿಯ ಧ್ಯಾನದಲ್ಲಿಯೇ ನನ್ನ ಮನಸ್ಸು ಲೀನವಾಗಿಬಿಟ್ಟಿತ್ತು. ॥ ೪೫ ॥ ದೇವತೆಗಳ ಇಂದ್ರಿಯಗಳು, ಮನಸ್ಸು ವಿಷಯಾದಿಗಳಲ್ಲಿ ರಮಿಸುವುದರಿಂದ, ಸತ್ತ್ವಗುಣ ಪ್ರಧಾನರಾಗಿದ್ದರೂ ತಮ್ಮ ಹೃದಯದಲ್ಲಿ ವಿರಾಜಮಾನನಾಗಿರುವ, ಸದಾಕಾಲ ಪ್ರಿಯತಮನರೂಪದಲ್ಲಿರುವ ಆತ್ಮಸ್ವರೂಪೀ ಭಗವಂತನನ್ನು ಅರಿಯರು. ಹಾಗಿರುವಾಗ ರಜೋಗುಣೀ ಮತ್ತು ತಮೋಗುಣಿಗಳಾದವರು ಹೇಗೆ ತಾನೆ ತಿಳಿಯಬಲ್ಲರು ? ॥ ೪೬ ॥

ಅಥೇಶಮಾಯಾರಚಿತೇಷು ಸಂಗಂ
ಗುಣೇಷು ಗಂಧರ್ವಪುರೋಪಮೇಷು ।
ರೂಢಂ ಪ್ರಕೃತ್ಯಾಽಽತ್ಮನಿ ವಿಶ್ವಕರ್ತು-
ರ್ಭಾವೇನ ಹಿತ್ವಾ ತಮಹಂ ಪ್ರಪದ್ಯೇ ॥ ೪೭ ॥

ಅದಕ್ಕಾಗಿ ನಾನು ಈಗ ಈ ವಿಷಯಗಳಲ್ಲಿ ರಮಿಸುವುದಿಲ್ಲ. ಇದಾದರೋ ಮಾಯೆಯ ಆಟವಾಗಿದೆ. ಆಕಾಶದಲ್ಲಿ ಕಂಡು ಬರುವ ಮಿಥ್ಯೆಯಾದ ಗಂಧರ್ವನಗರಕ್ಕಿಂತ ಹೆಚ್ಚಿನ ಅಸ್ತಿತ್ವ ಇವುಗಳಿಗಿಲ್ಲ. ಇವುಗಳಾದರೋ ಅಜ್ಞಾನವಶದಿಂದಲೇ ಚಿತ್ತದಲ್ಲಿ ನೆಲೆಸಿವೆ. ಪ್ರಪಂಚದ ನಿಜವಾದ ಕರ್ತೃವಾದ ಭಗವಂತನ ಧ್ಯಾನ ದಲ್ಲಿ ಲೀನನಾಗಿ, ವಿಷಯಗಳನ್ನು ಬಿಟ್ಟು ಕೇವಲ ಅವನನ್ನೇ ಶರಣು ಹೊಂದುತ್ತೇನೆ. ॥ ೪೭ ॥ ಪರೀಕ್ಷಿತನೇ ! ಭಗವಂತನು ಖಟ್ವಾಂಗನ ಬುದ್ಧಿಯನ್ನು ಮೊದಲಿಂದಲೇ ತನ್ನತ್ತ ಸೆಳೆದು ಕೊಂಡಿದ್ದನು. ಇದರಿಂದ ಅವನು ಅಂತ್ಯಸಮಯದಲ್ಲಿ ಇಂತಹ ನಿಶ್ಚಯ ಮಾಡಲು ಸಾಧ್ಯವಾಯಿತು.

ಇತಿ ವ್ಯವಸಿತೋ ಬುದ್ಧ್ಯಾ ನಾರಾಯಣಗೃಹೀತಯಾ ।
ಹಿತ್ವಾನ್ಯಭಾವಮಜ್ಞಾನಂ ತತಃ ಸ್ವಂ ಭಾವಮಾಶ್ರಿತಃ ॥ ೪೮ ॥

ಈಗ ಅವನು ಶರೀರಾದಿ ಅನಾತ್ಮ ಪದಾರ್ಥಗಳಲ್ಲಿದ್ದ ಅಜ್ಞಾನ ಮೂಲವಾದ ಆತ್ಮ ಭಾವವನ್ನು ಪರಿತ್ಯಜಿಸಿ ತನ್ನ ವಾಸ್ತವಿಕ ಆತ್ಮ ಸ್ವರೂಪದಲ್ಲಿ ಸ್ಥಿತನಾದನು. ॥ ೪೮ ॥ ಆ ಸ್ವರೂಪವು ಸಾಕ್ಷಾತ್ ಪರಬ್ರಹ್ಮವಾಗಿದೆ. ಅದು ಸೂಕ್ಷ್ಮಕ್ಕೂ ಸೂಕ್ಷ್ಮವಾಗಿದ್ದು ಶೂನ್ಯದಂತೆ ಇದೆ. ಆದರೆ ಅದು ಶೂನ್ಯವಲ್ಲ ಪೂರ್ಣ, ಪರಮಸತ್ಯವಾಗಿದೆ. ಪರಮ ಭಕ್ತರು ಅದನ್ನೇ 'ಭಗವಾನ್ ವಾಸುದೇವ' ಎಂಬ ಹೆಸರಿನಿಂದ ವರ್ಣಿಸುತ್ತಾ ಇರುವರು. ॥ ೪೯ ॥

ಯತ್ತದ್ಬ್ರಹ್ಮ ಪರಂ ಸೂಕ್ಷ್ಮಮಶೂನ್ಯಂ ಶೂನ್ಯಕಲ್ಪಿತಮ್ ।
ಭಗವಾನ್ವಾಸುದೇವೇತಿ ಯಂ ಗೃಣಂತಿ ಹಿ ಸಾತ್ವತಾಃ ॥ ೪೯ ॥

ಒಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೯ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ
ಸೂರ್ಯವಂಶಾನುವರ್ಣನೇ ನವಮೋಽಧ್ಯಾಯಃ ॥ ೯ ॥

# ಹತ್ತನೆಯ ಅಧ್ಯಾಯ

## ಭಗವಾನ್ ಶ್ರೀರಾಮನ ಲೀಲಾವರ್ಣನೆಗಳು

*ಶ್ರೀಶುಕ ಉವಾಚ*

ಖಟ್ವಾಂಗಾದ್ದೀರ್ಘಬಾಹುಶ್ಚ ರಘುಸ್ತಸ್ಮಾತ್ ಪೃಥುಶ್ರವಾಃ ।
ಅಜಸ್ತತೋ ಮಹಾರಾಜಸ್ತಸ್ಮಾದ್ ದಶರಥೋಽಭವತ್ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ ! ಖಟ್ವಾಂಗನಿಗೆ ದೀರ್ಘಬಾಹು ಎಂಬ ಪುತ್ರನಿದ್ದನು. ಅವನಿಂದ ಪರಮಯಶಸ್ವೀ ರಘು ಜನಿಸಿದನು. ರಘುವಿನಿಂದ ಅಜನೂ, ಅಜನಿಂದ ದಶರಥ ಮಹಾರಾಜನು ಜನಿಸಿದನು. ॥ ೧ ॥ ದೇವತೆ ಗಳ ಪ್ರಾರ್ಥನೆಯಂತೆ ಸಾಕ್ಷಾತ್ ಪರಬ್ರಹ್ಮ ಪರಮಾತ್ಮನಾದ ಭಗವಾನ್ ಶ್ರೀಹರಿಯು ತನ್ನ ಅಂಶಾಂಶಗಳಿಂದ ನಾಲ್ಕು ರೂಪ ಗಳನ್ನು ಧರಿಸಿ ದಶರಥಮಹಾರಾಜನಿಗೆ ಪುತ್ರರೂಪನಾದನು. ಅವರ ಹೆಸರು – ರಾಮ, ಲಕ್ಷ್ಮಣ, ಭರತ ಮತ್ತು ಶತ್ರುಘ್ನ ಎಂಬು ದಾಗಿದ್ದವು. ॥ ೨ ॥

ತಸ್ಯಾಪಿ ಭಗವಾನೇಷ ಸಾಕ್ಷಾದ್ಬ್ರಹ್ಮಮಯೋ ಹರಿಃ ।
ಅಂಶಾಂಶೇನ ಚತುರ್ಧಾಗಾತ್ಪುತ್ರತ್ವಂ ಪ್ರಾರ್ಥಿತಃ ಸುರೈಃ ।
ರಾಮಲಕ್ಷ್ಮಣಭರತಶತ್ರುಘ್ನಾ ಇತಿ ಸಂಜ್ಞಯಾ ॥ ೨ ॥

ಪರೀಕ್ಷಿತನೇ ! ಸೀತಾಪತಿ ಭಗವಾನ್ ಶ್ರೀರಾಮನ ಚರಿತ್ರೆಯಾದರೋ ತತ್ತ್ವದರ್ಶಿಗಳಾದ ಋಷಿಗಳು ಬಹಳವಾಗಿ ವರ್ಣಿಸಿರುವರು. ನೀನು ಅದನ್ನು ಅನೇಕಬಾರಿ ಕೇಳಿಯೂ ಇರುವೆ. ॥ ೩ ॥

ತಸ್ಯಾನುಚರಿತಂ ರಾಜನ್ನೃಷಿಭಿಸ್ತತ್ತ್ವದರ್ಶಿಭಿಃ ।
ಶ್ರುತಂ ಹಿ ವರ್ಣಿತಂ ಭೂರಿ ತ್ವಯಾ ಸೀತಾಪತೇರ್ಮುಹುಃ ॥ ೩ ॥

ಗುರ್ವರ್ಥೇ ತ್ಯಕ್ತರಾಜ್ಯೋ ವ್ಯಚರದನುವನಂ
ಪದ್ಮಪದ್ಭ್ಯಾಂ ಪ್ರಿಯಾಯಾಃ
ಪಾಣಿಸ್ಪರ್ಶಾಕ್ಷಮಾಭ್ಯಾಂ ಮೃಜಿತಪಥರುಜೋ-
ಯೋ ಹರೀಂದ್ರಾನುಜಾಭ್ಯಾಮ್ ।

ಭಗವಂತನಾದ ಶ್ರೀರಾಮನು ತನ್ನ ತಂದೆ ದಶರಥನ ವಾಕ್ಯವನ್ನು ಸತ್ಯವಾಗಿಸಲು ರಾಜ್ಯಸಿಂಹಾಸನವನ್ನು ಪರಿತ್ಯಜಿಸಿ ಕಾಡಾಡಿಯಾಗಿ ಸಂಚರಿಸಿದನು. ಪರಮ ಸುಕುಮಾರಿಯಾದ ಜಾನಕಿಯ ಕರಸ್ಪರ್ಶ ವನ್ನೂ ಸಹಿಸದಷ್ಟು ಸುಕೋಮಲವಾಗಿದ್ದವು ಶ್ರೀರಾಮಚಂದ್ರನ ಚರಣಗಳು. ಅಂತಹ ಚರಣಕಮಲಗಳು ವನದಲ್ಲಿ ಸಂಚರಿಸು

ವೈರೂಪ್ಯಾಚ್ಛೂರ್ಪಣಖ್ಯಾಃ ಪ್ರಿಯವಿರಹರುಷಾಽಽ-
ರೋಪಿತಭ್ರೂವಿಜೃಂಭ-
ತ್ರಸ್ತಾಬ್ಧಿರ್ಬದ್ಧಸೇತುಃ ಖಲದವದಹನಃ
ಕೋಸಲೇಂದ್ರೋಽವತಾನ್ನಃ ॥ ೪ ॥

ವಿಶ್ವಾಮಿತ್ರಾಧ್ವರೇ ಯೇನ ಮಾರೀಚಾದ್ಯಾ ನಿಶಾಚರಾಃ ।
ಪಶ್ಯತೋ ಲಕ್ಷ್ಮಣಸ್ಯೈವ ಹತಾ ನೈರ್ಋತಪುಂಗವಾಃ ॥ ೫ ॥

ಯೋ ಲೋಕವೀರಸಮಿತೌ ಧನುರೈಶಮುಗ್ರಂ
ಸೀತಾಸ್ವಯಂವರಗೃಹೇ ತ್ರಿಶತೋಪನೀತಮ್ ।
ಆದಾಯ ಬಾಲಗಜಲೀಲ ಇವೇಕ್ಷುಯಷ್ಟಿಂ
ಸಜ್ಜೀಕೃತಂ ನೃಪ ವಿಕೃಷ್ಯ ಬಭಂಜ ಮಧ್ಯೇ ॥ ೬ ॥

ಜಿತ್ವಾನುರೂಪಗುಣಶೀಲವಯೋಽಂಗರೂಪಾಂ
ಸೀತಾಭಿಧಾಂ ಶ್ರಿಯಮುರಸ್ಯಭಿಲಬ್ಧಮಾನಾಮ್ ।
ಮಾರ್ಗೇ ವ್ರಜನ್ ಭೃಗುಪತೇರ್ವ್ಯನಯತ್ಪ್ರರೂಢಂ
ದರ್ಪಂ ಮಹೀಮಕೃತ ಯಸ್ತ್ರಿರರಾಜಬೀಜಾಮ್ ॥ ೭ ॥

ಯಃ ಸತ್ಯಪಾಶಪರಿವೀತಪಿತುರ್ನಿದೇಶಂ
ಸ್ತ್ರೈಣಸ್ಯ ಚಾಪಿ ಶಿರಸಾ ಜಗೃಹೇ ಸಭಾರ್ಯಃ ।
ರಾಜ್ಯಂ ಶ್ರಿಯಂ ಪ್ರಣಯಿನಃ ಸುಹೃದೋ ನಿವಾಸಂ
ತ್ಯಕ್ತ್ವಾ ಯಯೌ ವನಮಸೂನಿವ ಮುಕ್ತಸಂಗಃ ॥ ೮ ॥

ರಕ್ಷಸ್ಸ್ವಸುರ್ವ್ಯಕೃತ ರೂಪಮಶುದ್ಧಬುದ್ಧೇ-
ಸ್ತಸ್ಯಾಃ ಖರತ್ರಿಶಿರದೂಷಣಮುಖ್ಯಬಂಧೂನ್ ।
ಜಘ್ನೇ ಚತುರ್ದಶ ಸಹಸ್ರಮಪಾರಣೀಯ-
ಕೋದಂಡಪಾಣಿರಟಮಾನ ಉವಾಸ ಕೃಚ್ಛ್ರಮ್ ॥ ೯ ॥

ವಾಗ, ದಣಿದಾಗ ಹನುಮಂತ ಮತ್ತು ಲಕ್ಷ್ಮಣರು ಅವನನ್ನು ಒತ್ತುತ್ತಾ ದಣಿವಾರಿಸುತ್ತಿದ್ದರು. ಶೂರ್ಪಣಖಿಯ ಕಿವಿ-ಮೂಗುಗಳನ್ನು ಕತ್ತರಿಸಿ ಅವಳನ್ನು ವಿರೂಪಗೊಳಿಸಿದುದರಿಂದ ಪ್ರಿಯತಮೆಯಾದ ಸೀತೆಯ ವಿಯೋಗದುಃಖವನ್ನು ಶ್ರೀರಾಮನು ಸಹಿಸಬೇಕಾಯಿತು. ಈ ವಿಯೋಗದಿಂದ ಕ್ರುದ್ಧನಾದ ಶ್ರೀರಾಮನ ಹುಬ್ಬುಗಳು ಗಂಟಿಕ್ಕಿದುವು. ಇದನ್ನು ನೋಡಿದ ಸಮುದ್ರರಾಜನೂ ಭಯಗೊಂಡನು. ಇದಾದ ಬಳಿಕ ಶ್ರೀರಾಮನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ಲಂಕೆಗೆ ಹೋಗಿ ದುಷ್ಟರಾದ ರಾಕ್ಷಸರನ್ನು ಕಾಡ್ಗಿಚ್ಚು ಕಾಡನ್ನು ಸುಟ್ಟುಬಿಡುವಂತೆ ಭಸ್ಮಮಾಡಿಬಿಟ್ಟನು. ಅಂತಹ ಕೋಸಲೇಂದ್ರನಾದ ಶ್ರೀರಾಮನು ನಮ್ಮನ್ನು ರಕ್ಷಿಸಲಿ. ॥ ೪ ॥

ಭಗವಾನ್ ಶ್ರೀರಾಮನು ವಿಶ್ವಾಮಿತ್ರನ ಯಜ್ಞರಕ್ಷಣೆಯಲ್ಲಿ ಲಕ್ಷ್ಮಣನ ಸಮಕ್ಷಮದಲ್ಲಿ ಮಾರೀಚನೇ ಮೊದಲಾದ ಮಹಾರಾಕ್ಷಸರನ್ನು ಸಂಹರಿಸಿದನು. ॥ ೫ ॥ ಪರೀಕ್ಷಿತನೇ ! ಜನಕಪುರಿಯಲ್ಲಿ ಸೀತಾಸ್ವಯಂವರದ ಸಿದ್ಧತೆಗಳಾಗುತ್ತಿದ್ದವು. ಜಗತ್ತಿನಲ್ಲಿ ವೀರರೆನಿಸಿಕೊಂಡಿರುವರೆಲ್ಲರೂ ಅಲ್ಲಿಗೆ ಆಗಮಿಸಿದ್ದರು. ಆ ಎಲ್ಲ ವೀರರ ಮಧ್ಯದಲ್ಲಿ ಭಯಂಕರವಾದ ಭಗವಾನ್ ಶಿವನ ಧನುಸ್ಸನ್ನು ಇರಿಸಲಾಗಿತ್ತು. ಅದು ಎಷ್ಟು ಭಾರವಾಗಿತ್ತೆಂದರೆ – ಮೂರುನೂರು ವೀರಭಟರಿಂದ ಬಹು ಪ್ರಯಾಸದಿಂದ ಅದನ್ನು ಸ್ವಯಂವರ ಮಂಟಪಕ್ಕೆ ತರಲಾಗಿತ್ತು. ಅಂತಹ ಧನುಸ್ಸನ್ನು ಮೇಲಕ್ಕೆತ್ತಿ ಅದನ್ನು ಹೆದೆಯೇರಿಸಿ ನಾಣನ್ನು ಸೆಳೆದೊಡನೆಯೇ ಆ ಧನುಸ್ಸು ಮಧ್ಯದಲ್ಲಿ ಮುರಿದು ಎರಡು ತುಂಡಾಗಿ ಕೆಳಕ್ಕೆ ಬಿತ್ತು. ॥ ೬ ॥ ಭಗವಂತನು ತನ್ನ ವಕ್ಷಃಸ್ಥಳದಲ್ಲಿ ಧರಿಸಿಕೊಂಡು ಸಮ್ಮಾನಿತಳಾದ ಶ್ರೀಲಕ್ಷ್ಮೀದೇವಿಯೇ ಸೀತೆಯಾಗಿ ಜನಕನ ಪಟ್ಟಣದಲ್ಲಿ ಅವತರಿಸಿದ್ದಳು. ಅವಳು ಗುಣ, ಶೀಲ, ವಯಸ್ಸು, ಆಕೃತಿ ಮತ್ತು ರೂಪಗಳಲ್ಲಿ ಶ್ರೀರಾಮನಿಗೆ ಅನುರೂಪಳಾಗಿದ್ದಳು. ಭಗವಂತನು ಧನುಸ್ಸನ್ನು ಭಂಜಿಸಿ ಸೀತೆಯನ್ನು ಗೆದ್ದುಕೊಂಡಿದ್ದನು. ಅಲ್ಲಿಂದ ಅಯೋಧ್ಯೆಗೆ ಮರಳಿ ಬರುವಾಗ ದಾರಿಯಲ್ಲಿ ಇಪ್ಪತ್ತೊಂದು ಬಾರಿ ಭೂಮಂಡಲದ ಕ್ಷತ್ರಿಯರನ್ನೆಲ್ಲ ಸಂಹರಿಸಿದ ಪರಶುರಾಮರು ಭೆಟ್ಟಿಯಾದರು. ಭಗವಾನ್ ಶ್ರೀರಾಮನು ಪರಶುರಾಮರ ಬೆಳೆದಿರುವ ಗರ್ವವನ್ನೂ ಅಡಗಿಸಿದನು. ॥ ೭ ॥ ಇದಾದ ಬಳಿಕ ತಂದೆಯ ಮಾತನ್ನು ಸತ್ಯವಾಗಿಸಲು ಶ್ರೀರಾಮನು ವನವಾಸವನ್ನು ಕೈಗೊಂಡನು. ಮಹಾರಾಜಾ ದಶರಥನು ತನ್ನ ಪತ್ನಿಗೆ ಅಧೀನನಾಗಿಯೇ ಅವಳಿಗೆ ಅಂತಹ ಮಾತನ್ನು ಕೊಟ್ಟಿದ್ದನು. ಏಕೆಂದರೆ, ಅವನು ಸತ್ಯವೆಂಬ ಬಂಧನದಿಂದ ಕಟ್ಟಲ್ಪಟ್ಟಿದ್ದನು. ಅದಕ್ಕಾಗಿ ಭಗವಂತನು ತನ್ನ ತಂದೆಯ ಆಜ್ಞೆಯನ್ನು ಶಿರಸಾವಹಿಸಿಕೊಂಡು ಅನಾಸಕ್ತ ಪುರುಷನು ತನ್ನ ಪ್ರಾಣಗಳನ್ನು ತ್ಯಜಿಸುವಂತೆ – ರಾಜ್ಯವನ್ನೂ, ಐಶ್ವರ್ಯವನ್ನೂ, ಪ್ರಿಯರನ್ನೂ, ಹಿತೈಷಿಗಳನ್ನೂ, ಮಿತ್ರರನ್ನೂ, ಅರಮನೆಯನ್ನೂ ಬಿಟ್ಟು ತನ್ನ ಪತ್ನಿಯೊಂದಿಗೆ ಅರಣ್ಯಕ್ಕೆ ಹೊರಟನು. ಏಕೆಂದರೆ, ಅವನಿಗೆ ಯಾರ ಕುರಿತು ಯಾವುದೇ ಆಸಕ್ತಿ ಇರಲಿಲ್ಲ. ॥ ೮ ॥ ಕಾಡಿಗೆ ತೆರಳಿ ಭಗವಂತನು ಅಲ್ಲಿ ರಾಕ್ಷಸರಾಜನಾದ ರಾವಣನ ತಂಗಿಯಾದ ಶೂರ್ಪಣಖಿಯನ್ನು ವಿರೂಪ ಗೊಳಿಸಿದನು. ಏಕೆಂದರೆ, ಅವಳ ಬುದ್ಧಿಯು ಬಹಳ ಕಲುಷಿತ, ಕಾಮವಾಸನೆಯಿಂದ ಅಶುದ್ಧವಾಗಿತ್ತು. ಅವಳ ಮುಖ್ಯ ಬಂಧುಗಳಾದ

ಸೀತಾಕಥಾಶ್ರವಣದೀಪಿತಹೃಚ್ಛಯೇನ
ಸೃಷ್ಟಂ ವಿಲೋಕ್ಯ ನೃಪತೇ ದಶಕಂಧರೇಣ ।
ಜಘ್ನೇಽದ್ಭುತೈಣವಪುಷಾಽಽಶ್ರಮತೋಽಪಕೃಷ್ಟೋ
ಮಾರೀಚಮಾಶು ವಿಶಿಖೇನ ಯಥಾ ಕಮುಗ್ರಃ ॥ ೧೦ ॥

ರಕ್ಷೋಽಧಮೇನ ವೃಕವದ್ವಿಪಿನೇಽಸಮಕ್ಷಂ
ವೈದೇಹರಾಜದುಹಿತರ್ಯಪಯಾಪಿತಾಯಾಮ್ ।
ಭ್ರಾತ್ರಾ ವನೇ ಕೃಪಣವತ್ಪ್ರಿಯಯಾ ವಿಯುಕ್ತಃ
ಸ್ತ್ರೀಸಂಗಿನಾಂ ಗತಿಮಿತಿ ಪ್ರಥಯಂಶ್ಚಚಾರ ॥ ೧೧ ॥

ದಗ್ಧ್ವಾಽಽತ್ಮಕೃತ್ಯಹತಕೃತ್ಯಮಹನ್ ಕಬಂಧಂ
ಸಖ್ಯಂ ವಿಧಾಯ ಕಪಿಭಿರ್ದಯಿತಾಗತಿಂ ತೈಃ ।
ಬುದ್ಧ್ವಾಥವಾಲಿನಿ ಹತೇ ಪ್ಲವಗೇಂದ್ರಸೈನ್ಯೈ-
ರ್ವೇಲಾಮಗಾತ್ಸ ಮನುಜೋಽಜಭವಾರ್ಚಿತಾಂಘ್ರಿಃ ॥ ೧೨ ॥

ಯದ್ರೋಷವಿಭ್ರಮವಿವೃತ್ತಕಟಾಕ್ಷಪಾತ-
ಸಂಭ್ರಾಂತನಕ್ರಮಕರೋ ಭಯಗೀರ್ಣಘೋಷಃ ।
ಸಿಂಧುಃ ಶಿರಸ್ಯರ್ಹಣಂ ಪರಿಗೃಹ್ಯ ರೂಪೀ
ಪಾದಾರವಿಂದಮುಪಗಮ್ಯ ಬಭಾಷ ಏತತ್ ॥ ೧೩ ॥

ನ ತ್ವಾಂ ವಯಂ ಜಡಧಿಯೋ ನು ವಿದಾಮ ಭೂಮನ್
ಕೂಟಸ್ಥಮಾದಿಪುರುಷಂ ಜಗತಾಮಧೀಶಮ್ ।
ಯತ್ಸತ್ತ್ವತಃ ಸುರಗಣಾ ರಜಸಃ ಪ್ರಜೇಶಾ
ಮನ್ಯೋಶ್ಚ ಭೂತಪತಯಃ ಸ ಭವಾನ್ಗುಣೇಶಃ ॥ ೧೪ ॥

ಖರ-ತ್ರಿಶಿರ-ದೂಷಣರನ್ನು ಹಾಗೂ ಹದಿನಾಲ್ಕು ಸಾವಿರ ರಾಕ್ಷಸರನ್ನೂ ಸಂಹರಿಸಿದನು. ಶತ್ರುಗಳಿಂದ ಎದುರಿಸಲು ಅಸಾಧ್ಯವಾದ ಕೋದಂಡವನ್ನು ಧರಿಸಿದ್ದ ಶ್ರೀರಾಮನು ಅರಣ್ಯದಲ್ಲಿ ಸಂಚರಿಸುತ್ತಾ ಬಹಳ ಕಷ್ಟದಿಂದ ಕಾಲಕಳೆಯುತ್ತಿದ್ದನು. ॥ ೯ ॥ ಪರೀಕ್ಷಿತನೇ ! ಸೀತಾದೇವಿಯ ರೂಪ ಲಾವಣ್ಯಗಳನ್ನು ಶೂರ್ಪಣಖಿಯಿಂದ ಕೇಳಿದ ರಾವಣನು ಕಾಮಾತುರನಾದನು. ಅವನು ಮಾರೀಚನನ್ನು ಅದ್ಭುತವಾದ ಜಿಂಕೆಯ ವೇಷದಲ್ಲಿ ಶ್ರೀರಾಮನ ಪರ್ಣಕುಟಿಯ ಬಳಿಗೆ ಕಳಿಸಿದನು. ಮಾರೀಚನು ನಿಧಾನವಾಗಿ ಭಗವಂತನನ್ನು ದೂರಕ್ಕೆ ಕೊಂಡೊಯ್ದನು. ಕೊನೆಗೆ ಶ್ರೀರಾಮನು ತನ್ನ ಬಾಣದಿಂದ ಅವನನ್ನು ದಕ್ಷಪ್ರಜಾಪತಿಯನ್ನು ವೀರಭದ್ರನು ಸಂಹರಿಸಿದಂತೆ ಕ್ಷಣಮಾತ್ರದಲ್ಲಿ ಸಂಹರಿಸಿಬಿಟ್ಟನು. ॥ ೧೦ ॥ ಭಗವಾನ್ ಶ್ರೀರಾಮನು ಆಶ್ರಮದಿಂದ ಬಹಳ ದೂರ ಹೋಗಿರಲಾಗಿ, ಲಕ್ಷ್ಮಣನೂ ಆಶ್ರಮದಲ್ಲಿರದಿದ್ದಾಗ ನೀಚನಾದ ರಾಕ್ಷಸ ರಾವಣನು ತೋಳವು ಕುರಿಮರಿಯನ್ನು ಅಪಹರಿಸುವಂತೆ ವಿದೇಹನಂದಿನಿಯಾದ, ಸುಕುಮಾರಿಯಾದ ಶ್ರೀಸೀತಾದೇವಿಯನ್ನು ಅಪಹರಿಸಿ ಕೊಂಡುಹೋದನು. ಹೀಗೆ ಪ್ರಾಣಪ್ರಿಯಳಾದ ಸೀತೆಯಿಂದ ಅಗಲಿದ ಶ್ರೀರಾಮನು ಲಕ್ಷ್ಮಣನೊಡನೆ ಕಾಡಿನಲ್ಲಿ ದೀನನಂತೆ ಅಲೆದಾಡುತ್ತಿದ್ದನು. ತನ್ನ ದುರವಸ್ಥೆಯಿಂದಾಗಿ ರಾಮನು ಸ್ತ್ರೀಸಂಗಿಗಳಾದ ಸಂಸಾರಿಗಳಿಗೆ ಇದೇ ವಿಧವಾದ ಪರಿಸ್ಥಿತಿಯುಂಟಾಗುವುದೆಂಬುದನ್ನು ಪ್ರಸಿದ್ಧಪಡಿಸುತ್ತಾ ಸಂಚರಿಸುತ್ತಿದ್ದನು. ॥ ೧೧ ॥ ಬಳಿಕ ಶ್ರೀರಾಮನು ಭಗವತ್ಸೇವಾರೂಪವಾದ ಕರ್ಮದಿಂದ ಮೊದಲೇ ಕರ್ಮಬಂಧನದಿಂದ ಮುಕ್ತನಾದ ಜಟಾಯುವಿಗೆ ದಾಹಸಂಸ್ಕಾರ ಮಾಡಿದನು. ಮತ್ತೆ ಕಬಂಧನನ್ನು ಸಂಹರಿಸಿದನು. ಅನಂತರ ಸುಗ್ರೀವಾದಿ ವಾನರರೊಂದಿಗೆ ಸ್ನೇಹವನ್ನು ಬೆಳೆಸಿ ವಾಲಿಯನ್ನು ವಧಿಸಿ, ವಾನರರ ಮೂಲಕ ತನ್ನ ಪ್ರಾಣಪ್ರಿಯೆಯು ಎಲ್ಲಿರುವಳೆಂದು ತಿಳಿದುಕೊಂಡನು. ಬ್ರಹ್ಮರುದ್ರರಿಂದ ಅರ್ಚಿಸಲ್ಪಡುವ ಪಾದಪದ್ಮಗಳುಳ್ಳ, ಮನುಷ್ಯರಂತೆ ಲೀಲೆಯಾಡುತ್ತಿರುವ ಭಗವಾನ್ ಶ್ರೀರಾಮನು ಕಪಿಗಳ ಸೈನ್ಯದೊಂದಿಗೆ ಸಮುದ್ರತೀರಕ್ಕೆ ತಲುಪಿದನು. ॥ ೧೨ ॥ ಅಲ್ಲಿ ಉಪವಾಸ ವ್ರತದಿಂದಾಗಲೀ, ಪ್ರಾರ್ಥನೆಯಿಂದಾಗಲೀ ಸಮುದ್ರರಾಜನ ಮೇಲೆ ಯಾವುದೇ ಪ್ರಭಾವ ಬೀಳದಿದ್ದಾಗ ಭಗವಂತನು ಕ್ರೋಧದ ಲೀಲೆಯನ್ನು ತೋರುತ್ತಾ ತನ್ನ ಉಗ್ರವಾದ ಓರೆನೋಟದಿಂದ ಸಮುದ್ರರಾಜನನ್ನು ನೋಡಿದನು. ಆಗಲೇ ಸಮುದ್ರದ ದೊಡ್ಡ ದೊಡ್ಡ ಮೀನು, ಮೊಸಳೆಗಳು ಭ್ರಾಂತವಾದವು. ಭಯದಿಂದಾಗಿ ಸಮುದ್ರದ ಗರ್ಜನೆ ಉಡುಗಿಹೋಯಿತು. ಆಗ ಸಮುದ್ರನು ಸಶರೀರಿಯಾಗಿ ತನ್ನ ತಲೆಯಲ್ಲಿ ಅನರ್ಘ್ಯವಾದ ಉಪಹಾರಗಳನ್ನು ಹೊತ್ತುಕೊಂಡು ಬಂದು ಭಗವಂತನ ಚರಣಕಮಲಗಳಲ್ಲಿ ಶರಣಾಗಿ ಇಂತೆಂದನು. ॥ ೧೩ ॥ ಓ ಅನಂತನೇ ! ನಾವು ಮೂರ್ಖರಾಗಿರುವುದರಿಂದ ನಿನ್ನ ನಿಜವಾದ ಸ್ವರೂಪವನ್ನು ತಿಳಿಯೆವು. ನೀನು ಸಮಸ್ತ ಜಗತ್ತಿನ ಏಕಮಾತ್ರ ಸ್ವಾಮಿಯೂ, ಆದಿಕಾರಣನೂ, ಜಗತ್ತಿನ ಪರಿವರ್ತನೆ ಗಳಲ್ಲಿ ಏಕರಸನೂ ಆಗಿರುವೆ. ನೀನು ಸಮಸ್ತ ಗುಣಗಳ

ಕಾಮಂ ಪ್ರಯಾಹಿ ಜಹಿ ವಿಶ್ರವಸೋಽವಮೇಹಂ
ತ್ರೈಲೋಕ್ಯರಾವಣಮವಾಪ್ನುಹಿ ವೀರ ಪತ್ನೀಮ್ ।
ಬಧ್ನೀಹಿ ಸೇತುಮಿಹ ತೇ ಯಶಸೋ ವಿತತ್ಯೈ
ಗಾಯಂತಿ ದಿಗ್ವಿಜಯಿನೋ ಯಮುಪೇತ್ಯ ಭೂಪಾಃ ॥ ೧೫ ॥

ಬದ್ಧ್ವೋದಧೌ ರಘುಪತಿರ್ವಿವಿಧಾದ್ರಿಕೂಟೈಃ
ಸೇತುಂ ಕಪೀಂದ್ರಕರಕಂಪಿತಭೂರುಹಾಂಗೈಃ ।
ಸುಗ್ರೀವನೀಲಹನುಮತ್ಪ್ರಮುಖೈರನೀಕೈಃ
ಲಂಕಾಂ ವಿಭೀಷಣದೃಶಾಽಽವಿಶದಗ್ರದಗ್ಧಾಮ್ ॥ ೧೬ ॥

ಸಾ ವಾನರೇಂದ್ರಬಲರುದ್ಧವಿಹಾರಕೋಷ್ಠ-
ಶ್ರೀದ್ವಾರಗೋಪುರಸದೋವಲಭೀವಿಟಂಕಾ ।
ನಿರ್ಭಜ್ಯಮಾನಧಿಷಣಧ್ವಜಹೇಮಕುಂಭ-
ಶೃಂಗಾಟಕಾ ಗಜಕುಲೈರ್ಹ್ರದಿನೀವ ಘೂರ್ಣಾ ॥ ೧೭ ॥

ರಕ್ಷಃಪತಿಸ್ತದವಲೋಕ್ಯ ನಿಕುಂಭಕುಂಭ-
ಧೂಮ್ರಾಕ್ಷದುರ್ಮುಖಸುರಾಂತನರಾಂತಕಾದೀನ್ ।
ಪುತ್ರಂ ಪ್ರಹಸ್ತಮತಿಕಾಯವಿಕಂಪನಾದೀನ್
ಸರ್ವಾನುಗಾನ್ಸಮಹಿನೋದಥ ಕುಂಭಕರ್ಣಮ್ ॥ ೧೮ ॥

ತಾಂ ಯಾತುಧಾನಪೃತನಾಮಸಿಶೂಲಚಾಪ-
ಪ್ರಾಸರ್ಷ್ಟಿಶಕ್ತಿಶರತೋಮರಖಡ್ಗದುರ್ಗಾಮ್ ।
ಸುಗ್ರೀವಲಕ್ಷ್ಮಣಮರುತ್ಸುತಗಂಧಮಾದ-
ನೀಲಾಂಗದರ್ಕ್ಷಪನಸಾದಿಭಿರನ್ವಿತೋಽಗಾತ್ ॥ ೧೯ ॥

ಸ್ವಾಮಿ ಯಾಗಿರುವೆ. ಇದರಿಂದ ನೀನು ಸತ್ತ್ವಗುಣವನ್ನು ಸ್ವೀಕರಿಸಿದಾಗ ದೇವತೆಗಳ, ರಜೋಗುಣವನ್ನು ಸ್ವೀಕರಿಸಿದಾಗ ಪ್ರಜಾಪತಿಗಳ, ತಮೋಗುಣ ವನ್ನು ಸ್ವೀಕರಿಸಿದಾಗ ನಿನ್ನ ಕ್ರೋಧದಿಂದ ರುದ್ರಗಣಗಳ ಉತ್ಪತ್ತಿಯಾಗುತ್ತದೆ. ॥ ೧೪ ॥

ವೀರಶಿರೋಮಣಿಯೇ ! ನೀನು ನಿನ್ನ ಇಚ್ಛಾನುಸಾರವಾಗಿ ನನ್ನನ್ನು(ಸಮುದ್ರವನ್ನು) ದಾಟಿಕೊಂಡು ಹೋಗಬಹುದು. ಮೂರು ಲೋಕಗಳನ್ನು ಗೋಳಾಡಿಸುತ್ತಿರುವ ವಿಶ್ರವಸನ ಕುಪುತ್ರನಾದ ರಾವಣನನ್ನು ಸಂಹರಿಸಿ ನಿನ್ನ ಪತ್ನಿಯನ್ನು ಶೀಘ್ರವಾಗಿ ಪಡೆದುಕೋ. ಆದರೆ ನನ್ನದೊಂದು ಪ್ರಾರ್ಥನೆಯಿದೆ. ನೀನು ಇಲ್ಲಿ ನನ್ನಮೇಲೆ ಒಂದು ಸೇತುವೆಯನ್ನು ನಿರ್ಮಿಸು. ಇದರಿಂದ ನಿನ್ನ ಕೀರ್ತಿಯ ವಿಸ್ತಾರವಾಗುವುದು ಹಾಗೂ ಮುಂದೆ ಮಹಾ-ಮಹಾ ನರಪತಿಗಳು ದಿಗ್ವಿಜಯಮಾಡುತ್ತಾ ಇಲ್ಲಿಗೆ ಬಂದಾಗ ಅವರು ನಿನ್ನ ಕೀರ್ತಿಯ ಗುಣಗಾನಮಾಡುವರು.॥ ೧೫ ॥

ಭಗವಾನ್ ಶ್ರೀರಾಮನು ಅನೇಕಾನೇಕ ಪರ್ವತ ಶಿಖರಗಳಿಂದ ಸಮುದ್ರದ ಮೇಲೆ ಸೇತುವೆಯನ್ನು ಕಟ್ಟಿಸಿದನು. ದೊಡ್ಡ-ದೊಡ್ಡ ವಾನರರು ತಮ್ಮ ಕೈಗಳಿಂದ ಪರ್ವತಗಳನ್ನು ಎತ್ತಿ ತರುತ್ತಿದ್ದಾಗ ಅವುಗಳ ವೃಕ್ಷಗಳು, ದೊಡ್ಡ-ದೊಡ್ಡ ಬಂಡೆಗಳು ಗಡ-ಗಡನೆ ನಡುಗುತ್ತಿದ್ದವು. ಇದಾದ ಬಳಿಕ ವಿಭೀಷಣನ ಸಲಹೆಯಂತೆ ಭಗವಂತನು ಸುಗ್ರೀವ, ನೀಲ, ಹನುಮಂತ ಮುಂತಾದ ಪ್ರಮುಖ ವೀರರೊಂದಿಗೆ ಮತ್ತು ಅತುಲ ವಾನರ ಸೇನೆಯೊಂದಿಗೆ ಲಂಕೆಯನ್ನು ಪ್ರವೇಶಿಸಿದನು. ಆದಾದರೋ ಶ್ರೀಹನುಮಂತನಿಂದ ಮೊದಲೇ ಸುಡಲ್ಪಟ್ಟಿತ್ತು. ॥ ೧೬ ॥ ಆ ಸಮಯದಲ್ಲಿ ವಾನರ ರಾಜನ ಸೈನ್ಯವು ಲಂಕೆಯಲ್ಲಿ ಅಡ್ಡಾಡುತ್ತಾ ವಿಹಾರಸ್ಥಾನಗಳನ್ನೂ, ಧಾನ್ಯದ ಕಣಜಗಳನ್ನೂ, ಬಾಗಿಲುಗಳನ್ನೂ, ಮಹಾದ್ವಾರಗಳನ್ನೂ, ಸಭಾಭವನಗಳನ್ನೂ, ಮೊಗಸಾಲೆಗಳನ್ನೂ ಮತ್ತು ಪಕ್ಷಿಗಳು ವಾಸಿಸುವ ಸ್ಥಳಗಳನ್ನೂ ಆಕ್ರಮಿಸಿತು. ಅವರು ಅಲ್ಲಿಯ ವೇದಿಗಳನ್ನು, ಧ್ವಜಗಳನ್ನೂ, ಚಿನ್ನದ ಕಲಶಗಳನ್ನೂ, ಚೌಕಗಳನ್ನೂ ಒಡೆದು ಹಾಕಿದರು. ಆಗ ಲಂಕೆಯು ಆನೆಗಳ ಹಿಂಡು ನದಿಯನ್ನು ಕದಡಿ ಹಾಕಿದಂತೆ ಕಂಡುಬರುತ್ತಿತ್ತು. ॥ ೧೭ ॥ ಇದನ್ನು ನೋಡಿದ ರಾಕ್ಷಸ ರಾಜ ರಾವಣನು ನಿಕುಂಭ, ಕುಂಭ, ಧೂಮ್ರಾಕ್ಷ, ದುರ್ಮುಖ, ಸುರಾಂತಕ, ನರಾಂತಕ, ಪ್ರಹಸ್ತ, ಅತಿಕಾಯ, ವಿಕಂಪನ ಮುಂತಾದ ತನ್ನ ಎಲ್ಲ ಅನುಚರರನ್ನು, ಪುತ್ರನಾದ ಮೇಘನಾದನನ್ನು, ಕೊನೆಗೆ ತಮ್ಮನಾದ ಕುಂಭಕರ್ಣನನ್ನೂ ಯುದ್ಧಮಾಡಲು ಕೊಟ್ಟು ಕಳಿಸಿದನು. ॥ ೧೮ ॥ ರಾಕ್ಷಸರ ಆ ವಿಶಾಲವಾದ ಸೈನ್ಯವು ಖಡ್ಗ, ತ್ರಿಶೂಲ, ಧನುಸ್ಸು, ಪ್ರಾಸ, ಋಷ್ಟಿ, ಶಕ್ತಿ, ಬಾಣ, ಶೂಲ ಮುಂತಾದ ಅಸ್ತ್ರ-ಶಸ್ತ್ರಗಳಿಂದ ಸುರಕ್ಷಿತ ಮತ್ತು ಅತ್ಯಂತ ದುರ್ಗಮ ವಾಗಿತ್ತು. ಭಗವಾನ್ ಶ್ರೀರಾಮನು ಸುಗ್ರೀವ, ಲಕ್ಷ್ಮಣ, ಹನುಮಂತ, ಗಂಧಮಾದನ, ನೀಲ, ಅಂಗದ, ಜಾಂಬವಂತ, ಪನಸ ಮೊದಲಾದ ವೀರರನ್ನು ಜೊತೆಗೂಡಿ ರಾಕ್ಷಸರ ಸೈನ್ಯವನ್ನು ಎದುರಿಸಿದನು. ॥ ೧೯ ॥ ರಘುವಂಶ ಶಿರೋಮಣಿಯಾದ ಭಗವಾನ್ ಶ್ರೀರಾಮನ ಅಂಗದಾದಿ ಎಲ್ಲ ಸೇನಾಪತಿಗಳು ರಾಕ್ಷಸರ ರಥ-ಗಜಾಶ್ವ-ಪದಾತಿ ಸೈನ್ಯವನ್ನು ದ್ವಂದ್ವಯುದ್ಧದ ಮೂಲಕವಾಗಿ ಎದುರಿಸಿದರು ಮತ್ತು ರಾಕ್ಷಸರನ್ನು ವೃಕ್ಷಗಳಿಂದ, ಪರ್ವತ ಶಿಖರ

ತೇಽನೀಕಪಾ ರಘುಪತೇರಭಿಪತ್ಯ ಸರ್ವೇ
ದ್ವಂದ್ವಂ ವರೂಥಮಿಭಪತ್ತಿರಥಾಶ್ವಯೋಧೈಃ ।
ಜಘ್ನುರ್ದ್ರುಮೈರ್ಗಿರಿಗದೇಷುಭಿರಂಗದಾದ್ಯಾಃ
ಸೀತಾಭಿಮರ್ಶಹತಮಂಗಲರಾವಣೇಶಾನ್ ॥ ೨೦ ॥

ಗಳಿಂದ ಗದೆ, ಬಾಣಗಳಿಂದಲೂ ಪ್ರಹರಿಸಿದರು. ಮಂಗಳಮಯಿಯಾದ ಸೀತಾದೇವಿಯನ್ನು ಸ್ಪರ್ಶಿಸಿದ ಕಾರಣದಿಂದಾಗಿ ಅಮಂಗಳನಾಗಿದ್ದ ರಾವಣನನ್ನು ಒಡೆಯನನ್ನಾಗಿ ಹೊಂದಿದ್ದ ರಾಕ್ಷಸರಿಗೆ ವಿನಾಶವೆಂಬುದು ಮೊದಲೇ ಸಿದ್ಧವಾಗಿ ಹೋಗಿದ್ದಿತು. ॥ ೨೦ ॥

ರಕ್ಷಃಪತಿಃ ಸ್ವಬಲನಷ್ಟಿಮವೇಕ್ಷ್ಯ ರುಷ್ಟ
ಆರುಹ್ಯ ಯಾನಕಮಥಾಭಿಸಸಾರ ರಾಮಮ್ ।
ಸ್ವಃಸ್ಯಂದನೇ ದ್ಯುಮತಿ ಮಾತಲಿನೋಪನೀತೇ
ವಿಭ್ರಾಜಮಾನಮಹನನ್ನಿಶಿತೈಃ ಕ್ಷುರಪ್ರೈಃ ॥ ೨೧ ॥

ರಾಕ್ಷಸರಾಜನಾದ ರಾವಣೇಶ್ವರನು ತನ್ನ ಸೈನ್ಯವು ದಿನ-ದಿನಕ್ಕೂ ನಾಶವಾಗುವುದನ್ನು ಕಂಡು ಅತ್ಯಂತ ಕ್ರುದ್ಧನಾಗಿ ಪುಷ್ಪಕ ವಿಮಾನವನ್ನೇರಿ ಬಂದು ಶ್ರೀರಾಮನಿಗೆ ಎದುರಾಗಿ ನಿಂತನು. ಆ ಸಮಯಕ್ಕೆ ಸರಿಯಾಗಿ ಇಂದ್ರನ ಸಾರಥಿಯಾದ ಮಾತಲಿಯು ತೇಜೋಮಯವಾದ ದಿವ್ಯರಥವನ್ನು ನಡೆಸಿಕೊಂಡು ಶ್ರೀರಾಮನ ಬಳಿಗೆ ಬಂದನು. ಮಂಗಳಮೂರ್ತಿಯಾದ ಶ್ರೀರಾಮನು ಆ ದಿವ್ಯ ರಥವನ್ನು ಹತ್ತಿಕುಳಿತನು. ಒಡನೆಯೇ ರಾವಣನು ತನ್ನ ತೀಕ್ಷ್ಣವಾದ ಬಾಣಗಳಿಂದ ಶ್ರೀರಾಮನನ್ನು ಪ್ರಹರಿಸತೊಡಗಿದನು. ॥ ೨೧ ॥

ರಾಮಸ್ತಮಾಹ ಪುರುಷಾದಪುರೀಷ ಯನ್ನಃ
ಕಾಂತಾಸಮಕ್ಷಮಸತಾಪಹೃತಾ ಶ್ವವತ್ತೇ ।
ತ್ಯಕ್ತತ್ರಪಸ್ಯ ಫಲಮದ್ಯ ಜುಗುಪ್ಸಿತಸ್ಯ
ಯಚ್ಛಾಮಿ ಕಾಲ ಇವ ಕರ್ತುರಲಂಘ್ಯವೀರ್ಯಃ ॥ ೨೨ ॥

ಆಗ ಭಗವಾನ್ ಶ್ರೀರಾಮನು ರಾವಣನಿಗೆ ಹೇಳಿದನು – ಎಲೈ ನೀಚರಾಕ್ಷಸನೇ! ಹವಿಸ್ಸನ್ನು ಕದಿಯುವ ನಾಯಿಯಂತೆ ನೀನು ನಾನು ಇಲ್ಲದಿರುವಾಗ ನನ್ನ ಪ್ರಾಣಪ್ರಿಯಳಾದ ಪತ್ನಿಯನ್ನು ಅಪಹರಿಸಿ ತಂದಿರುವೆ. ನಿನ್ನಂತಹ ನಿಂದ್ಯನೂ, ನಾಚಿಕೆಗೆಟ್ಟವನೂ ಬೇರೆ ಯಾವನಿದ್ದಾನೆ? ಮೀರಿ ನಡೆಯಲು ಅಸಾಧ್ಯನಾದ ಕಾಲ ಪುರುಷನು ಅವುಗಳ ಕರ್ಮಾನುಸಾರವಾಗಿ ಪ್ರಾಣಿಗಳನ್ನು ಶಿಕ್ಷಿಸುವಂತೆ ನಿನ್ನ ಜುಗುಪ್ಸಿತವಾದ ಕಾರ್ಯಕ್ಕೆ ತಕ್ಕ ಫಲವನ್ನು ನಾನೀಗಲೇ ಕೊಡುತ್ತೇನೆ. ॥ ೨೨ ॥

ಏವಂ ಕ್ಷಿಪನ್ ಧನುಷಿ ಸಂಧಿತಮುತ್ಸಸರ್ಜ
ಬಾಣಂ ಸ ವಜ್ರಮಿವ ತದ್ಧೃದಯಂ ಬಿಭೇದ ।
ಸೋಽಸೃಗ್ವಮನ್ ದಶಮುಖೈರ್ನ್ಯಪತತ್ ವಿಮಾನಾ-
ದ್ಧಾಹೇತಿ ಜಲ್ಪತಿ ಜನೇ ಸುಕೃತೀವ ರಿಕ್ತಃ ॥ ೨೩ ॥

ಹೀಗೆ ದುಷ್ಟನಾದ ರಾವಣನನ್ನು ನಿಂದಿಸುತ್ತಾ ಭಗವಾನ್ ಶ್ರೀರಾಮನು ಧನುಸ್ಸಿಗೆ ಹೂಡಿದ್ದ ಬಾಣವನ್ನು ಅವನ ಮೇಲೆ ಪ್ರಯೋಗಿಸಿದನು. ಆ ಬಾಣವು ವಜ್ರದಂತಿರುವ ಅವನ ಹೃದಯವನ್ನು ಭೇದಿಸಿಬಿಟ್ಟಿತು. ಅವನು ತನ್ನ ಹತ್ತು ಮುಖಗಳಿಂದಲೂ ರಕ್ತವನ್ನು ಕಾರುತ್ತಾ ಪುಣ್ಯಾತ್ಮರು ಭೋಗ ಮುಗಿದಾಗ ಸ್ವರ್ಗದಿಂದ ಕೆಳಗೆ ಬೀಳುವಂತೆಯೇ ವಿಮಾನದಿಂದ ಉರುಳಿ ಬಿದ್ದನು. ಆ ಸಮಯದಲ್ಲಿ ಅವನ ಪುರಜನರೂ, ಪರಿಜನರೂ ಅಯ್ಯೋ! ಅಯ್ಯೋ! ಎಂದು ಕೂಗಿಕೊಂಡರು. ॥ ೨೩ ॥

ತತೋ ನಿಷ್ಕ್ರಮ್ಯ ಲಂಕಾಯಾ ಯಾತುಧಾನ್ಯಃ ಸಹಸ್ರಶಃ ।
ಮಂದೋದರ್ಯಾ ಸಮಂ ತಸ್ಮಿನ್ ಪ್ರರುದತ್ಯ ಉಪಾದ್ರವನ್ ॥ ೨೪ ॥

ಅನಂತರ ಸಾವಿರಾರು ರಾಕ್ಷಸಿಯರು ಮಂದೋದರಿಯೊಂದಿಗೆ ಅಳುತ್ತಾ ಲಂಕೆಯಿಂದ ಹೊರಬಿದ್ದು ರಣಭೂಮಿಗೆ ಬಂದರು. ॥ ೨೪ ॥

ಸ್ವಾನ್ ಸ್ವಾನ್ ಬಂಧೂನ್ಪರಿಷ್ವಜ್ಯ ಲಕ್ಷ್ಮಣೇಷುಭಿರರ್ದಿತಾನ್ ।
ರುರುದುಃ ಸುಸ್ವರಂ ದೀನಾ ಘ್ನಂತ್ಯ ಆತ್ಮಾನಮಾತ್ಮನಾ ॥ ೨೫ ॥

ಅವರ ಸ್ವಜನ-ಸಂಬಂಧಿಗಳು ಲಕ್ಷ್ಮಣನ ಬಾಣಗಳಿಂದ ಛಿನ್ನ-ಭಿನ್ನರಾಗಿ ಬಿದ್ದಿರುವುದನ್ನು ನೋಡಿದರು. ಅವರು ತಮ್ಮ ಕೈಯಿಂದ ಎದೆಯನ್ನು ಬಡಿದುಕೊಂಡು ತಮ್ಮ ಸಂಬಂಧಿಗಳನ್ನು ಅಪ್ಪಿಕೊಳ್ಳುತ್ತಾ ಗಟ್ಟಿಯಾಗಿ ವಿಲಾಪಿಸ ತೊಡಗಿದರು. ॥ ೨೫ ॥

ಹಾ ಹತಾಃ ಸ್ಮ ವಯಂ ನಾಥ ಲೋಕರಾವಣ ರಾವಣ ।
ಕಂ ಯಾಯಾಚ್ಛರಣಂ ಲಂಕಾ ತ್ವದ್ವಿಹೀನಾ ಪರಾರ್ದಿತಾ ॥ ೨೬ ॥

ಅಯ್ಯೋ! ಮೂರು ಲೋಕಗಳನ್ನೂ ಭಯದಿಂದ ತಲ್ಲಣಗೊಳಿಸುತ್ತಿದ್ದ ರಾವಣೇಶ್ವರನೇ! ನಾಥನೇ! ಇಂದು ನಾವೆಲ್ಲರೂ ಹಾಳಾಗಿ ಹೋದೆವು. ನೀನಿಲ್ಲದ ಕಾರಣದಿಂದಾಗಿ ಶತ್ರುಗಳಿಂದ ಈ ಲಂಕೆಯು ಧ್ವಂಸವಾಗಿಬಿಟ್ಟಿದೆ. ಈಗ ಲಂಕೆಯು ಯಾರ ಅಧೀನದಲ್ಲಿರುವುದೆಂಬುದೇ ಒಂದು ಪ್ರಶ್ನೆಯಾಗಿದೆ. ॥ ೨೬ ॥

ನೈವಂ ವೇದ ಮಹಾಭಾಗ ಭವಾನ್ಕಾಮವಶಂ ಗತಃ ।
ತೇಜೋಽನುಭಾವಂ ಸೀತಾಯಾ ಯೇನ ನೀತೋ ದಶಾಮಿಮಾಮ್ ॥ ೨೭ ॥

ಪ್ರಭುವೇ! ನೀನು ಎಲ್ಲ ರೀತಿಯಿಂದಲೂ ಸಂಪನ್ನನಾಗಿದ್ದೆ. ಯಾವುದೇ ಕೊರತೆ ಇರಲಿಲ್ಲ. ಆದರೆ ನೀನು ಕಾಮವಶನಾಗಿ ಸೀತೆಯು ಎಷ್ಟು ತೇಜಸ್ವಿನಿಯಾಗಿದ್ದಾಳೆ, ಅವಳ ಪ್ರಭಾವವೆಷ್ಟೆಂಬುದನ್ನು ತಿಳಿಯದೇ ಹೋದೆ. ನಿನ್ನ ಈ ತಪ್ಪೇ ಇಂತಹ ದುರ್ದಶೆಗೆ ಕಾರಣವಾಯಿತಲ್ಲ! ॥ ೨೭ ॥

ಕೃತ್ಯೈಷಾ ವಿಧವಾ ಲಂಕಾ ವಯಂ ಚ ಕುಲನಂದನ ।
ದೇಹಃ ಕೃತೋಽನ್ನಂ ಗೃಧ್ರಾಣಾಮಾತ್ಮಾ ನರಕಹೇತವೇ
॥ ೨೮ ॥

ಶ್ರೀಶುಕ ಉವಾಚ

ಸ್ವಾನಾಂ ವಿಭೀಷಣಶ್ಚಕ್ರೇ ಕೋಸಲೇಂದ್ರಾನುಮೋದಿತಃ ।
ಪಿತೃಮೇಧವಿಧಾನೇನ ಯದುಕ್ತಂ ಸಾಂಪರಾಯಿಕಮ್
॥ ೨೯ ॥

ತತೋ ದದರ್ಶ ಭಗವಾನಶೋಕವನಿಕಾಶ್ರಮೇ ।
ಕ್ಷಾಮಾಂ ಸ್ವವಿರಹವ್ಯಾಧಿಂ ಶಿಂಶಪಾಮೂಲಮಾಶ್ರಿತಾಮ್
॥ ೩೦ ॥

ರಾಮಃ ಪ್ರಿಯತಮಾಂ ಭಾರ್ಯಾಂ ದೀನಾಂ ವೀಕ್ಷ್ಯಾನ್ವಕಂಪತ ।
ಆತ್ಮಸಂದರ್ಶನಾಹ್ಲಾದವಿಕಸನ್ಮುಖಪಂಕಜಾಮ್
॥ ೩೧ ॥

ಆರೋಪ್ಯಾರುರುಹೇ ಯಾನಂ ಭ್ರಾತೃಭ್ಯಾಂ ಹನುಮದ್ಯುತಃ ।
ವಿಭೀಷಣಾಯ ಭಗವಾನ್ ದತ್ತ್ವಾ ರಕ್ಷೋಗಣೇಶತಾಮ್
॥ ೩೨ ॥

ಲಂಕಾಮಾಯುಶ್ಚ ಕಲ್ಪಾಂತಂ ಯಯೌ ಚೀರ್ಣವ್ರತಃ ಪುರೀಮ್ ।
ಅವಕೀರ್ಯಮಾಣಃ ಕುಸುಮೈರ್ಲೋಕಪಾಲಾರ್ಪಿತೈಃ ಪಥಿ
॥ ೩೩ ॥

ಉಪಗೀಯಮಾನಚರಿತಃ ಶತಧೃತ್ಯಾದಿಭಿರ್ಮುದಾ ।
ಗೋಮೂತ್ರಯಾವಕಂ ಶ್ರುತ್ವಾ ಭ್ರಾತರಂ ವಲ್ಕಲಾಂಬರಮ್
॥ ೩೪ ॥

ಮಹಾಕಾರುಣಿಕೋಽತಪ್ಯಜ್ಜಟಿಲಂ ಸ್ಥಂಡಿಲೇಶಯಮ್ ।
ಭರತಃ ಪ್ರಾಪ್ತಮಾಕರ್ಣ್ಯ ಪೌರಾಮಾತ್ಯಪುರೋಹಿತೈಃ
॥ ೩೫ ॥

ಪಾದುಕೇ ಶಿರಸಿ ನ್ಯಸ್ಯ ರಾಮಂ ಪ್ರತ್ಯುದ್ಯತೋಽಗ್ರಜಮ್ ।
ನಂದಿಗ್ರಾಮಾತ್ ಸ್ವಶಿಬಿರಾದ್ ಗೀತವಾದಿತ್ರನಿಃಸ್ವನೈಃ
॥ ೩೬ ॥

ಅಂದು ನಿನ್ನ ಕಾರ್ಯಗಳಿಂದ ನಾವೆಲ್ಲರೂ ಮತ್ತು ಸಮಸ್ತ ರಾಕ್ಷಸವಂಶವು ಆನಂದಿತರಾಗಿದ್ದೆವು. ಇಂದು ನಾವೆಲ್ಲರೂ ಹಾಗೂ ಇಡೀ ಲಂಕಾ ನಗರಿಯು ವಿಧವೆಯಾಯಿತು. ನಿನ್ನ ದೇಹವು ರಣ ಹದ್ದು ಮೊದಲಾದ ಪಕ್ಷಿಗಳಿಗೆ ಆಹಾರವಾಗಿ ಪರಿಣಮಿಸಿತು. ನಿನ್ನ ಆತ್ಮನು ನರಕಭಾಜನವಾಗಿದೆ. ಇದೆಲ್ಲವೂ ನಿನ್ನ ಮೂರ್ಖತೆಯ ಮತ್ತು ಕಾಮುಕತೆಯ ಫಲವಾಗಿದೆ. ॥ ೨೮ ॥

**ಶ್ರೀಶುಕಮಹಾ ಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಕೋಸಲೇಶ್ವರನಾದ ಭಗವಾನ್ ಶ್ರೀರಾಮಚಂದ್ರನ ಅಣತಿಯಂತೆ ವಿಭೀಷಣನು ತನ್ನ ಸ್ವಜನ-ಸಂಬಂಧಿಗಳಿಗೆ ಪಿತೃಮೇಧವಿಧಿಯನ್ನನುಸರಿಸಿ ಅಂತ್ಯೇಷ್ಟಿಗಳನ್ನು ಮಾಡಿದನು. ॥ ೨೯ ॥ ಇದಾದ ಬಳಿಕ ಭಗವಾನ್ ಶ್ರೀರಾಮನು ಅಶೋಕವನದ ಆಶ್ರಮದಲ್ಲಿ ಅಶೋಕ ವೃಕ್ಷದ ಬುಡದಲ್ಲಿ ಕುಳಿತಿದ್ದ ಸೀತಾದೇವಿಯನ್ನು ನೋಡಿದನು. ಅವಳು ಅವನ ವಿರಹವ್ಯಥೆಯಿಂದ ಪೀಡಿತಳಾಗಿದ್ದು ಅತ್ಯಂತ ದುರ್ಬಲಳಾಗಿದ್ದಳು. ॥ ೩೦ ॥ ಅತ್ಯಂತ ದೈನ್ಯಾವಸ್ಥೆಯಲ್ಲಿದ್ದ ಪ್ರಿಯತಮೆಯಾದ ಅರ್ಧಾಂಗಿನಿಯನ್ನು ನೋಡಿ ಶ್ರೀರಾಮನ ಹೃದಯವು ಪ್ರೀತಿ ಮತ್ತು ಕೃಪೆಯಿಂದ ತುಂಬಿಬಂತು. ಇತ್ತ ಭಗವಂತನ ದರ್ಶನವನ್ನು ಪಡೆದ ಸೀತೆಯ ಹೃದಯವೂ ಪ್ರೇಮಾನಂದದಿಂದ ಪರಿಪೂರ್ಣವಾಯಿತು. ಆಕೆಯ ಮುಖಕಮಲವು ಅರಳಿಕೊಂಡಿತು. ॥ ೩೧ ॥ ಭಗವಂತನು ವಿಭೀಷಣನಿಗೆ ರಾಕ್ಷಸರ ಒಡೆತನ, ಲಂಕೆಯ ರಾಜ್ಯ ಮತ್ತು ಒಂದು ಕಲ್ಪದ ಆಯುಸ್ಸನ್ನೂ ದಯಪಾಲಿಸಿದನು. ಇದಾದ ಬಳಿಕ ಮೊದಲಿಗೆ ಸೀತೆಯನ್ನು ಪುಷ್ಪಕವಿಮಾನದಲ್ಲಿ ಕುಳ್ಳಿರಿಸಿ ತನ್ನ ಈರ್ವರೂ ತಮ್ಮಂದಿರಾದ ಲಕ್ಷ್ಮಣ, ಸುಗ್ರೀವರನ್ನೂ ಹಾಗೂ ಸೇವಕನಾದ ಹನುಮಂತನೊಂದಿಗೆ ಸ್ವಯಂ ಪುಷ್ಪಕವಿಮಾನವನ್ನೇರಿದನು. ಹೀಗೆ ಹದಿನಾಲ್ಕು ವರ್ಷಗಳ ವ್ರತವು ಪೂರ್ಣವಾದಾಗ ಅವನು ತನ್ನ ನಗರಕ್ಕೆ ಹೊರಟನು. ಆಗ ಮಾರ್ಗದಲ್ಲಿ ಬ್ರಹ್ಮಾದಿ ಲೋಕಪಾಲರೂ, ದೇವತೆಗಳೂ ತುಂಬು ಪ್ರೇಮದಿಂದ ಹೂವುಗಳ ಮಳೆಯನ್ನು ಕರೆಯುತ್ತಿದ್ದರು. ॥ ೩೨-೩೩ ॥

ಇತ್ತ ಬ್ರಹ್ಮಾದಿ ದೇವತೆಗಳು ಆನಂದಭರಿತರಾಗಿ ಭಗವಂತನ ಲೀಲಾಪ್ರಸಂಗಗಳನ್ನು ಗಾನಮಾಡುತ್ತಿದ್ದರು. ಅತ್ತಲಾಗಿ ಶ್ರೀರಾಮನ ಆಗಮನದ ನಿರೀಕ್ಷಣೆಯಲ್ಲಿಯೇ ಕಾತರನಾಗಿದ್ದ ಭರತನು ಕೇವಲ ಗೋಮೂತ್ರದಲ್ಲಿ ಬೇಯಿಸಿದ ಜವೆಯ ಗಂಜಿಯನ್ನು ಮಾತ್ರವೇ ಸೇವಿಸುತ್ತಿದ್ದನು. ಅಣ್ಣನಂತೆಯೇ ನಾರುಮಡಿಯನ್ನೇ ಉಡುತ್ತಿದ್ದನು. ಜಟಾಧಾರಿಯಾಗಿದ್ದನು. ನೆಲದ ಮೇಲೆ ದರ್ಭೆಗಳನ್ನು ಹಾಸಿಕೊಂಡು ಮಲಗುತ್ತಿದ್ದನು. ಈ ಸಮಾಚಾರವನ್ನು ಕೇಳಿದ ಪರಮ ಕಾರುಣಿಕನಾದ ಶ್ರೀರಾಮನು ಕಳವಳಗೊಂಡನು. ಹದಿನಾಲ್ಕು ವರ್ಷಗಳ ವನವಾಸವನ್ನು ಮುಗಿಸಿ ಶ್ರೀರಾಮನು ಅಯೋಧ್ಯೆಯ ಕಡೆಗೆ ಬರುತ್ತಿರುವನೆಂದು ತಿಳಿದೊಡನೆಯೇ ಆನಂದಭರಿತನಾದ ಭರತನು ಪುರವಾಸಿಗಳನ್ನು, ಮಂತ್ರಿ, ಪುರೋಹಿತರನ್ನು ಜೊತೆಗೆ ಕರೆದುಕೊಂಡು ಭಗವಂತನ ಚರಣಪಾದುಕೆಗಳನ್ನು ಶಿರದಮೇಲೆ ಹೊತ್ತುಕೊಂಡು ರಾಮನ ಸ್ವಾಗತಕ್ಕಾಗಿ ಹೊರಟನು. ನಂದಿಗ್ರಾಮದಲ್ಲಿದ್ದ ತನ್ನ ಶಿಬಿರದಿಂದ ಭರತನು ಹೊರಟಾಗ ಪುರಜನರು ಅವನೊಂದಿಗೆ ಮಂಗಳಗೀತೆಗಳನ್ನು ಹಾಡುತ್ತಾ, ವಾದ್ಯಘೋಷ

ಬ್ರಹ್ಮಘೋಷೇಣ ಚ ಮುಹುಃ ಪಠದ್ಭಿರ್ಬ್ರಹ್ಮವಾದಿಭಿಃ ।
ಸ್ವರ್ಣಕಕ್ಷಪತಾಕಾಭಿರ್ಹೈಮೈಶ್ಚಿತ್ರಧ್ವಜೈ ರಥೈಃ
॥ ೩೭ ॥

ಸದಶ್ವೈ ರುಕ್ಮಸನ್ನಾಹೈರ್ಭಟೈಃ ಪುರಟವರ್ಮಭಿಃ ।
ಶ್ರೇಣೀಭಿರ್ವಾರಮುಖ್ಯಾಭಿರ್ಭೃತ್ಯೈಶ್ಚೈವ ಪದಾನುಗೈಃ
॥ ೩೮ ॥

ಪಾರಮೇಷ್ಠ್ಯಾನ್ಯುಪಾದಾಯ ಪಣ್ಯಾನ್ಯುಚ್ಚಾವಚಾನಿ ಚ ।
ಪಾದಯೋರ್ನ್ಯಪತತ್ಪ್ರೇಮ್ಣಾ ಪ್ರಕ್ಲಿನ್ನಹೃದಯೇಕ್ಷಣಃ
॥ ೩೯ ॥

ಪಾದುಕೇ ನ್ಯಸ್ಯ ಪುರತಃ ಪ್ರಾಂಜಲಿರ್ಬಾಷ್ಪಲೋಚನಃ ।
ತಮಾಶ್ಲಿಷ್ಯ ಚಿರಂ ದೋರ್ಭ್ಯಾಂ ಸ್ನಾಪಯನ್ನೇತ್ರಜೈರ್ಜಲೈಃ
॥ ೪೦ ॥

ರಾಮೋ ಲಕ್ಷ್ಮಣಸೀತಾಭ್ಯಾಂ ವಿಪ್ರೇಭ್ಯೋ ಯೇಽರ್ಹಸತ್ತಮಾಃ ।
ತೇಭ್ಯಃ ಸ್ವಯಂ ನಮಶ್ಚಕ್ರೇ ಪ್ರಜಾಭಿಶ್ಚ ನಮಸ್ಕೃತಃ
॥ ೪೧ ॥

ಧುನ್ವಂತ ಉತ್ತರಾಸಂಗಾನ್ಪತಿಂ ವೀಕ್ಷ್ಯ ಚಿರಾಗತಮ್ ।
ಉತ್ತರಾಃ ಕೋಸಲಾ ಮಾಲ್ಯೈಃ ಕಿರಂತೋ ನನೃತುರ್ಮುದಾ
॥ ೪೨ ॥

ಪಾದುಕೇ ಭರತೋಽಗೃಹ್ಣಾಚ್ಚಾಮರವ್ಯಜನೋತ್ತಮೇ ।
ವಿಭೀಷಣಃ ಸಸುಗ್ರೀವಃ ಶ್ವೇತಚ್ಛತ್ರಂ ಮರುತ್ಸುತಃ
॥ ೪೩ ॥

ಧನುರ್ನಿಷಂಗಾಞ್ಛತ್ರುಘ್ನಃ ಸೀತಾ ತೀರ್ಥಕಮಂಡಲುಮ್ ।
ಅಬಿಭ್ರದಂಗದಃ ಖಡ್ಗಂ ಹೈಮಂ ಚರ್ಮರ್ಕ್ಷರಾಣ್ನೃಪ
॥ ೪೪ ॥

ಪುಷ್ಪಕಸ್ಥೋಽನ್ವಿತಃ ಸ್ತ್ರೀಭಿಃ ಸ್ತೂಯಮಾನಶ್ಚ ವಂದಿಭಿಃ ।
ವಿರೇಜೇ ಭಗವಾನ್ರಾಜನ್ ಗ್ರಹೈಶ್ಚಂದ್ರ ಇವೋದಿತಃ
॥ ೪೫ ॥

ಭ್ರಾತೃಭಿರ್ನಂದಿತಃ ಸೋಽಪಿ ಸೋತ್ಸವಾಂ ಪ್ರಾವಿಶತ್ಪುರೀಮ್ ।
ಪ್ರವಿಶ್ಯ ರಾಜಭವನಂ ಗುರುಪತ್ನೀಃ ಸ್ವಮಾತರಮ್
॥ ೪೬ ॥

ಗಳೊಡನೆ ಹೊರಟರು. ವೇದವಿದರಾದ ಬ್ರಾಹ್ಮಣರು ಸ್ವಸ್ತಿವಾಚನ ಮಾಡುತ್ತಿದ್ದರು. ಅವರ ಧ್ವನಿಯು ಎಲ್ಲೆಡೆ ಪ್ರತಿಧ್ವನಿಸಿತು. ಸುವರ್ಣಮಯವಾದ ಪತಾಕೆಗಳು ಎಲ್ಲೆಡೆ ಹಾರಾಡುತ್ತಿದ್ದವು. ಚಿತ್ರವಿಚಿತ್ರವಾದ ಧ್ವಜಗಳಿಂದ ಕೂಡಿದ ಸುವರ್ಣಮಯವಾದ ರಥಗಳೂ, ಸುವರ್ಣಮಯವಾದ ಜೀನುಗಳಿಂದ ಸಮಲಂಕೃತ ವಾದ ಕುದುರೆಗಳೂ, ಸುವರ್ಣಮಯವಾದ ಕವಚಗಳನ್ನೂ ಧರಿಸಿದ್ದ ಸೈನಿಕರು ಭರತನನ್ನು ಹಿಂಬಾಲಿಸಿ ಹೋಗುತ್ತಿದ್ದರು. ಶ್ರೀಮಂತ ಶ್ರೇಷ್ಠಿವರ್ಗ, ಶ್ರೇಷ್ಠ ವಾರಾಂಗನೆಯರೂ, ಕಾಲಾಳುಗಳು ಮಹಾರಾಜರಿಗೆ ಯೋಗ್ಯವಾದ ಸಕಲ ವಸ್ತುಗಳನ್ನು ಎತ್ತಿಕೊಂಡು ಭರತನೊಂದಿಗೆ ನಡೆಯುತ್ತಿದ್ದರು. ಭಗವಂತನನ್ನು ನೋಡುತ್ತಲೇ ಪ್ರೇಮೋದ್ರೇಕದಿಂದ ಭರತನ ಹೃದಯವು ಕರಗಿ, ಕಣ್ಣುಗಳಲ್ಲಿ ಆನಂದಾಶ್ರುಗಳು ಚಿಮ್ಮಿದುವು. ಅವನು ಭಗವಂತನ ಶ್ರೀಚರಣ ಗಳಲ್ಲಿ ಬಿದ್ದು ಹೊರಳಾಡಿದನು. ॥ ೩೪-೩೯ ॥ ಭರತನು ಪ್ರಭು ವಿನ ಮುಂದೆ ಆವನ ಪಾದುಕೆಗಳನ್ನು ಇರಿಸಿದನು ಮತ್ತು ಕೈ ಜೋಡಿಸಿಕೊಂಡು ನಿಂತುಕೊಂಡನು. ಕಣ್ಣುಗಳಿಂದ ಅಶ್ರುಗಳು ಹರಿಯುತ್ತಿದ್ದವು. ಭಗವಂತನು ತನ್ನ ಎರಡೂ ಕೈಗಳಿಂದ ಬರ ಸೆಳೆದುಕೊಂಡು ದೀರ್ಘವಾಗಿ ಭರತನನ್ನು ಆಲಿಂಗಿಸಿ ಕೊಂಡನು. ಭಗವಂತನ ಕಣ್ಣುಗಳಿಂದ ಹರಿದ ಅಶ್ರುಜಲದಿಂದ ಭರತನ ಮೈ ನೆನೆದುಹೋಯಿತು. ॥ ೪೦ ॥ ಅನಂತರ ಸೀತಾ ಲಕ್ಷ್ಮಣರೊಂದಿಗೆ ಭಗವಾನ್ ಶ್ರೀರಾಮನು ಬ್ರಾಹ್ಮಣರಿಗೆ, ಪೂಜ್ಯ ಗುರುಗಳಿಗೆ, ಹಿರಿಯರಿಗೆ ನಮಸ್ಕರಿಸಿದನು. ಸಮಸ್ತ ಪ್ರಜಾಜನರು ಭಕ್ತಿಯಿಂದ ತಲೆಬಾಗಿ ಭಗವಂತನ ಚರಣಗಳಲ್ಲಿ ವಂದಿಸಿಕೊಂಡರು. ॥ ೪೧॥ ಆ ಸಮಯದಲ್ಲಿ ಉತ್ತರ ಕೋಸಲದೇಶದಲ್ಲಿ ವಾಸಿಸುವ ಸಮಸ್ತ ಪ್ರಜೆಯು ತನ್ನ ಸ್ವಾಮಿಯಾದ ಭಗವಂತನನ್ನು ಬಹಳ ದಿನಗಳ ಬಳಿಕ ಬಂದಿರುವುದನ್ನು ಕಂಡು ತಮ್ಮ ಉತ್ತರೀಯವನ್ನು ಹಾರಿ ಸುತ್ತಾ ಶ್ರೀರಾಮನ ಮೇಲೆ ಹೂವುಗಳ ಮಳೆಗರೆಯುತ್ತಾ ಆನಂದ ದಿಂದ ಕುಣಿದಾಡಿದರು. ॥ ೪೨ ॥ ಭರತನು ಭಗವಂತನ ಪಾದುಕೆ ಗಳನ್ನು ಎತ್ತಿಕೊಂಡನು, ವಿಭೀಷಣನು ಚಾಮರವನ್ನೂ, ಸುಗ್ರೀವನು ಬೀಸಣಿಗೆಯನ್ನೂ, ಹನುಮಂತನು ಬಿಳಿಯ ಕೊಡೆ ಯನ್ನೂ ಹಿಡಿದುಕೊಂಡರು. ॥ ೪೩ ॥ ಪರೀಕ್ಷಿತನೇ! ಶತ್ರುಘ್ನನು ಶ್ರೀರಾಮನ ಧನುಸ್ಸನ್ನೂ, ಬತ್ತಳಿಕೆಯನ್ನೂ, ಸೀತೆಯು ತೀರ್ಥ ಗಳಿಂದ ತುಂಬಿದ ಕಮಂಡಲುವನ್ನೂ, ಅಂಗದನು ಚಿನ್ನದ ಖಡ್ಗ ವನ್ನೂ, ಜಾಂಬವಂತರು ಗುರಾಣಿಯನ್ನು ಹಿಡಿದು ಕೊಂಡರು. ॥ ೪೪ ॥ ಇವರೊಂದಿಗೆ ಭಗವಂತನು ಪುಷ್ಪಕವಿಮಾನದಲ್ಲಿ ವಿರಾಜ ಮಾನನಾದನು. ಸುತ್ತಲೂ ಶುಭಾಂಗಿಯರು ಯಥಾಸ್ಥಾನದಲ್ಲಿ ಕುಳಿತರು. ವಂದಿ-ಮಾಗಧರು ಸ್ತುತಿಸತೊಡಗಿದರು. ಗ್ರಹ ಗಳೊಡನೆ ಚಂದ್ರನೇ ಉದಯಿಸಿರುವನೋ ಎಂಬಂತೆ ಶ್ರೀರಾಮ ಚಂದ್ರನು ಪುಷ್ಪಕವಿಮಾನದಲ್ಲಿ ಶೋಭಿಸಿದನು. ॥ ೪೫ ॥

ಭಗವಂತನು ಹೀಗೆ ಸಹೋದರರಿಂದ ಅಭಿನಂದನೆಯನ್ನು ಸ್ವೀಕರಿಸಿ, ಅವರೊಂದಿಗೆ ಅಯೋಧ್ಯಾಪುರವನ್ನು ಪ್ರವೇಶಿಸಿದನು. ಆಗ ಆ ಪುರವು ಆನಂದೋತ್ಸವದಿಂದ ಪರಿಪೂರ್ಣವಾಗಿ ಹೋಗಿತ್ತು. ಅರಮನೆಯನ್ನು ಪ್ರವೇಶಿಸಿ ಶ್ರೀರಾಮನು ತಾಯಿ ಕೌಸಲ್ಯೆಗೂ,

ಗುರೂನ್ವಯಸ್ಯಾವರಜಾನ್ ಪೂಜಿತಃ ಪ್ರತ್ಯಪೂಜಯತ್ ।
ವೈದೇಹೀ ಲಕ್ಷ್ಮಣಶ್ಚೈವ ಯಥಾವತ್ ಸಮುಪೇಯತುಃ ॥ ೪೭ ॥

ಪುತ್ರಾನ್ ಸ್ವಮಾತರಸ್ತಾಸ್ತು ಪ್ರಾಣಾಂಸ್ತನ್ವ ಇವೋತ್ಥಿತಾಃ ।
ಆರೋಪ್ಯಾಂಕೇಽಭಿಷಿಂಚಂತ್ಯೋ ಬಾಷ್ಪೌಘೈರ್ವಿಜಹುಃಶುಚಃ ॥ ೪೮ ॥

ಜಟಾ ನಿರ್ಮುಚ್ಯ ವಿಧಿವತ್ ಕುಲವೃದ್ಧೈಃ ಸಮಂ ಗುರುಃ ।
ಅಭ್ಯಷಿಂಚದ್ಯಥೈವೇಂದ್ರಂ ಚತುಃಸಿಂಧುಜಲಾದಿಭಿಃ ॥ ೪೯ ॥

ಏವಂ ಕೃತಶಿರಃಸ್ನಾನಃ ಸುವಾಸಾಃ ಸ್ರಗ್ವ್ಯಲಂಕೃತಃ ।
ಸ್ವಲಂಕೃತೈಃ ಸುವಾಸೋಭಿರ್ಭ್ರಾತೃಭಿರ್ಭಾರ್ಯಯಾ ಬಭೌ ॥ ೫೦ ॥

ಅಗ್ರಹೀದಾಸನಂ ಭ್ರಾತ್ರಾ ಪ್ರಣಿಪತ್ಯ ಪ್ರಸಾದಿತಃ ।
ಪ್ರಜಾಃ ಸ್ವಧರ್ಮನಿರತಾ ವರ್ಣಾಶ್ರಮಗುಣಾನ್ವಿತಾಃ ।
ಜುಗೋಪ ಪಿತೃವದ್ರಾಮೋ ಮೇನಿರೇ ಪಿತರಂ ಚ ತಮ್ ॥ ೫೧ ॥

ತ್ರೇತಾಯಾಂ ವರ್ತಮಾನಾಯಾಂ ಕಾಲಃ ಕೃತಸಮೋಽಭವತ್ ।
ರಾಮೇ ರಾಜನಿ ಧರ್ಮಜ್ಞೇ ಸರ್ವಭೂತಸುಖಾವಹೇ ॥ ೫೨ ॥

ವನಾನಿ ನದ್ಯೋ ಗಿರಯೋ ವರ್ಷಾಣಿ ದ್ವೀಪಸಿಂಧವಃ ।
ಸರ್ವೇ ಕಾಮದುಘಾ ಆಸನ್ಪ್ರಜಾನಾಂ ಭರತರ್ಷಭ ॥ ೫೩ ॥

ನಾಧಿವ್ಯಾಧಿಜರಾಗ್ಲಾನಿದುಃಖಶೋಕಭಯಕ್ಲಮಾಃ ।
ಮೃತ್ಯುಶ್ಚಾನಿಚ್ಛತಾಂ ನಾಸೀದ್ರಾಮೇ ರಾಜನ್ಯಧೋಕ್ಷಜೇ ॥ ೫೪ ॥

ಏಕಪತ್ನೀವ್ರತಧರೋ ರಾಜರ್ಷಿಚರಿತಃ ಶುಚಿಃ ।
ಸ್ವಧರ್ಮಂ ಗೃಹಮೇಧೀಯಂ ಶಿಕ್ಷಯನ್ ಸ್ವಯಮಾಚರತ್ ॥ ೫೫ ॥

ಇತರ ತಾಯಂದಿರಿಗೂ, ಗುರುಹಿರಿಯರಿಗೂ ವಂದಿಸಿದನು. ಸಮಾನರಾದ ಮಿತ್ರರನ್ನು, ಚಿಕ್ಕವರನ್ನು ಯಥಾಯೋಗ್ಯವಾಗಿ ಸಮ್ಮಾನಿಸಿದನು ಹಾಗೂ ಅವರಿಂದ ಸಮ್ಮಾನವನ್ನು ಸ್ವೀಕರಿಸಿದನು. ಶ್ರೀಸೀತಾದೇವಿಯೂ, ಲಕ್ಷ್ಮಣನೂ ಭಗವಂತನೊಂದಿಗೆ ಎಲ್ಲರೊಡನೆ ಯಥಾಯೋಗ್ಯವಾಗಿ ವ್ಯವಹರಿಸಿದರು. ॥ ೪೬-೪೭ ॥ ಆಗ ಮೃತದೇಹದಲ್ಲಿ ಪ್ರಾಣಸಂಚಾರವಾದಂತೆ ತಾಯಂದಿರು ಪುತ್ರರ ಆಗಮನದಿಂದ ಹರ್ಷಿತರಾದರು. ಅವರನ್ನು ತನ್ನ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಅವರನ್ನು ತಮ್ಮ ಕಣ್ಣೀರಿನಿಂದ ಅಭಿಷೇಕ ಮಾಡಿದರು. ಆ ಸಮಯದಲ್ಲಿ ಅವರ ಶೋಕವೆಲ್ಲ ಅಳಿದುಹೋಯಿತು. ॥ ೪೮ ॥ ಇದಾದ ಬಳಿಕ ಗುರು ವಸಿಷ್ಠರು ಇತರ ಹಿರಿಯರೊಂದಿಗೆ ವಿಧಿವತ್ತಾಗಿ ಶ್ರೀರಾಮನ ಜಟೆಯನ್ನು ತೆಗೆಸಿ – ಬೃಹಸ್ಪತಿಯು ದೇವೇಂದ್ರನಿಗೆ ಪಟ್ಟಾಭಿಷೇಕ ಮಾಡಿದಂತೆಯೇ ನಾಲ್ಕು ಸಮುದ್ರಗಳಿಂದ ಪುಣ್ಯೋದಕವನ್ನು ತರಿಸಿ ಶ್ರೀರಾಮನಿಗೆ ಪಟ್ಟಾಭಿಷೇಕ ಮಾಡಿದರು. ॥ ೪೯ ॥ ಹೀಗೆ ಮಂಗಳಮಯವಾದ, ಮಂತ್ರಪೂತವಾದ ಶುದ್ಧೋದಕದಿಂದ ತಲೆಗೆ ಸ್ನಾನಮಾಡಿದ ಶ್ರೀರಾಮನು ಸುಂದರವಾದ ವಸ್ತ್ರಾಭರಣಗಳಿಂದಲೂ, ಗಂಧಮಾಲ್ಯಾದಿಗಳಿಂದಲೂ, ಸಮಲಂಕೃತನಾದನು. ಎಲ್ಲ ಸಹೋದರರೂ ಮತ್ತು ಜಾನಕೀದೇವಿಯೂ ಸುಂದರ ವಸ್ತ್ರಾಲಂಕಾರಗಳನ್ನೂ ಧರಿಸಿದರು. ಅವರೊಂದಿಗೆ ಶ್ರೀರಾಮಚಂದ್ರನು ಅತ್ಯಂತ ಶೋಭಾಯಮಾನವಾಗಿ ವಿರಾಜಿಸಿದನು. ॥ ೫೦ ॥ ಭರತನು ಅವನ ಚರಣಗಳಲ್ಲಿ ವಂದಿಸಿ ಅವನ್ನು ಪ್ರಸನ್ನಗೊಳಿಸಿದನು ಮತ್ತು ಅವನ ಆಗ್ರಹದಿಂದ ಭಗವಾನ್ ಶ್ರೀರಾಮನು ರಾಜ್ಯಸಿಂಹಾಸನವನ್ನು ಸ್ವೀಕರಿಸಿದನು. ಬಳಿಕ ಅವನು ತಮ್ಮ-ತಮ್ಮ ಧರ್ಮಗಳಲ್ಲಿ ತತ್ಪರರಾದ ಹಾಗೂ ವರ್ಣಾಶ್ರಮದ ಆಚಾರಗಳನ್ನು ಪಾಲಿಸುವ ಪ್ರಜೆಯನ್ನು ತಂದೆಯಂತೆ ಪಾಲಿಸತೊಡಗಿದನು. ಅವನ ಪ್ರಜೆಯೂ ಆತನನ್ನು ತಂದೆಯಂತೆ ಭಾವಿಸುತ್ತಿದ್ದರು. ॥ ೫೧ ॥ ಪರೀಕ್ಷಿತನೇ! ಸಮಸ್ತ ಪ್ರಾಣಿಗಳಿಗೆ ಸುಖವನ್ನು ನೀಡುವ ಪರಮ ಧರ್ಮಜ್ಞನಾದ ಭಗವಾನ್ ಶ್ರೀರಾಮನು ರಾಜನಾದಾಗ ತ್ರೇತಾಯುಗವಿದ್ದರೂ ಕೃತಯುಗದಂತೆ ಭಾಸವಾಗುತ್ತಿತ್ತು. ॥ ೫೨ ॥ ಭರತರ್ಷಭ! ಆ ಸಮಯದಲ್ಲಿ ವನ, ಪರ್ವತಗಳು, ವರ್ಷ, ದ್ವೀಪ, ನದಿ, ಸಮುದ್ರ ಇವೆಲ್ಲವೂ ಪ್ರಜೆಗಳಿಗೆ ಕಾಮಧೇನುವಿನಂತೆ ಸಮಸ್ತ ಕಾಮನೆಗಳನ್ನೂ ಪೂರ್ಣಗೊಳಿಸುತ್ತಿದ್ದವು. ॥ ೫೩ ॥ ಇಂದ್ರಿಯಾತೀತ ಭಗವಾನ್ ಶ್ರೀರಾಮನು ರಾಜ್ಯವಾಳುತ್ತಿರುವಾಗ ಯಾರಿಗೂ ಮಾನಸಿಕ ಚಿಂತೆಯಾಗಲೀ, ಶಾರೀರಿಕ ರೋಗವಾಗಲೀ ಇರಲಿಲ್ಲ. ವೃದ್ಧಾಪ್ಯ, ದೌರ್ಬಲ್ಯ, ದುಃಖ, ಶೋಕ, ಭಯ ಹಾಗೂ ಬಳಲಿಕೆ ಹೆಸರಿಗೆ ಮಾತ್ರವೂ ಇರಲಿಲ್ಲ. ಸಾಯಲು ಬಯಸದವರ ಮೃತ್ಯುವೂ ಕೂಡ ಆಗುತ್ತಿರಲಿಲ್ಲ. ॥ ೫೪ ॥ ಭಗವಾನ್ ಶ್ರೀರಾಮನು ಏಕಪತ್ನೀವ್ರತವನ್ನು ಕೈಗೊಂಡಿದ್ದನು. ಅವನ ಚರಿತ್ರವು ಅತ್ಯಂತ ಪವಿತ್ರವಾಗಿದ್ದು ರಾಜರ್ಷಿಗಳಂತೆಯೇ ಇತ್ತು. ಗೃಹಸ್ಥೋಚಿತ ಸ್ವಧರ್ಮದ ಶಿಕ್ಷಣಕ್ಕಾಗಿ ಅವನು ಸ್ವತಃ ಆ ಧರ್ಮವನ್ನು ಆಚರಿಸುತ್ತಿದ್ದನು. ॥ ೫೫ ॥

ಪ್ರೇಮ್ಣಾನುವೃತ್ತ್ಯಾ ಶೀಲೇನ ಪ್ರಶ್ರಯಾವನತಾ ಸತೀ ।
ಧಿಯಾ ಹ್ರಿಯಾ ಚ ಭಾವಜ್ಞಾ ಭರ್ತುಃ ಸೀತಾಹರನ್ಮನಃ
॥ ೫೬ ॥

ಸತೀಶಿರೋಮಣಿಯಾದ ಸೀತಾದೇವಿಯು ತನ್ನ ಪತಿಯ ಹೃದ್ಗತವನ್ನು ಅರಿತಿದ್ದಳು. ಅವಳು ಪ್ರೇಮದಿಂದ, ಸೇವೆಯಿಂದ, ಸಚ್ಛೀಲದಿಂದ, ಅತ್ಯಂತ ವಿನಯದಿಂದ ಹಾಗೂ ತನ್ನ ಬುದ್ಧಿ ಲಜ್ಜೆ ಮುಂತಾದ ಗುಣಗಳಿಂದ ತನ್ನ ಪತಿ ಭಗವಾನ್ ಶ್ರೀರಾಮನ ಮನಸ್ಸನ್ನು ಗೆದ್ದಿದ್ದಳು. ॥ ೫೬ ॥

ಹತ್ತನೆಯ ಅಧ್ಯಾಯವು ಮುಗಿಯಿತು. ॥ ೧೦ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ ರಾಮಚರಿತೇ ದಶಮೋಽಧ್ಯಾಯಃ ॥ ೧೦ ॥

# ಹನ್ನೊಂದನೆಯ ಅಧ್ಯಾಯ

## ಭಗವಾನ್ ಶ್ರೀರಾಮನ ಉಳಿದ ಲೀಲೆಗಳ ವರ್ಣನೆ

*ಶ್ರೀಶುಕ ಉವಾಚ*

ಭಗವಾನಾತ್ಮನಾತ್ಮಾನಂ ರಾಮ ಉತ್ತಮಕಲ್ಪಕೈಃ ।
ಸರ್ವದೇವಮಯಂ ದೇವಮೀಜ ಆಚಾರ್ಯವಾನ್ಮಖೈಃ
॥ ೧ ॥

ಹೋತ್ರೇಽದದಾದ್ದಿಶಂ ಪ್ರಾಚೀಂ ಬ್ರಹ್ಮಣೇ ದಕ್ಷಿಣಾಂ ಪ್ರಭುಃ ।
ಅಧ್ವರ್ಯವೇ ಪ್ರತೀಚೀಂ ಚ ಉದೀಚೀಂ ಸಾಮಗಾಯ ಸಃ
॥ ೨ ॥

ಆಚಾರ್ಯಾಯ ದದೌ ಶೇಷಾಂ ಯಾವತೀ ಭೂಸ್ತದಂತರಾ ।
ಮನ್ಯಮಾನ ಇದಂ ಕೃತ್ಸ್ನಂ ಬ್ರಾಹ್ಮಣೋಽರ್ಹತಿ ನಿಃಸ್ಪೃಹಃ
॥ ೩ ॥

ಇತ್ಯಯಂ ತದಲಂಕಾರವಾಸೋಭ್ಯಾಮವಶೇಷಿತಃ ।
ತಥಾ ರಾಜ್ಞ್ಯಪಿ ವೈದೇಹೀ ಸೌಮಂಗಲ್ಯಾವಶೇಷಿತಾ
॥ ೪ ॥

ತೇ ತು ಬ್ರಹ್ಮಣ್ಯದೇವಸ್ಯ ವಾತ್ಸಲ್ಯಂ ವೀಕ್ಷ್ಯ ಸಂಸ್ತುತಮ್ ।
ಪ್ರೀತಾಃ ಕ್ಲಿನ್ನಧಿಯಸ್ತಸ್ಮೈ ಪ್ರತ್ಯರ್ಪ್ಯೇದಂ ಬಭಾಷಿರೇ
॥ ೫ ॥

ಅಪ್ರತ್ತಂ ನಸ್ತ್ವಯಾ ಕಿಂ ನು ಭಗವನ್ಭುವನೇಶ್ವರ ।
ಯನ್ನೋಽಂತರ್ಹೃದಯಂ ವಿಶ್ಯ ತಮೋ ಹಂಸಿ ಸ್ವರೋಚಿಷಾ
॥ ೬ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ಪರೀಕ್ಷಿತನೇ ! ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀರಾಮನು ಗುರುವಸಿಷ್ಠರನ್ನು ಆಚಾರ್ಯನನ್ನಾಗಿ ಇಟ್ಟುಕೊಂಡು ಶ್ರೇಷ್ಠತಮವಾದ ಸಾಮಗ್ರಿಗಳಿಂದ ಕೂಡಿದ ಯಜ್ಞದ ಮೂಲಕ ಸರ್ವದೇವ ಸ್ವರೂಪನಾದ, ಸ್ವಯಂ ಪ್ರಕಾಶನಾದ ಪರಮಾತ್ಮನನ್ನು ಆರಾಧಿಸಿದನು. ॥ ೧ ॥ ಯಜ್ಞಾಂತ್ಯದಲ್ಲಿ ಶ್ರೀರಾಮನು ಹೋತೃವಿಗೆ ಪೂರ್ವದಿಕ್ಕನ್ನೂ, ಬ್ರಹ್ಮನಿಗೆ ದಕ್ಷಿಣದಿಕ್ಕನ್ನೂ, ಅಧ್ವರ್ಯುವಿಗೆ ಪಶ್ಚಿಮದಿಕ್ಕನ್ನೂ, ಉದ್ಗಾತೃವಿಗೆ ಉತ್ತರದಿಕ್ಕನ್ನೂ (ಈ ದಿಕ್ಕುಗಳಿದ್ದ ರಾಜ್ಯಗಳನ್ನು) ದಕ್ಷಿಣೆಯ ರೂಪದಲ್ಲಿ ಕೊಟ್ಟನು. ॥ ೨ ॥ ಇವುಗಳ ಮಧ್ಯ ಭಾಗದಲ್ಲಿದ್ದ ಭೂಭಾಗವೆಲ್ಲವನ್ನು ಆಚಾರ್ಯರಾಗಿದ್ದ ವಸಿಷ್ಠರಿಗೆ ದಕ್ಷಿಣೆಯಾಗಿ ನೀಡಿದನು. ಅಖಂಡ ಭೂಮಂಡಲಕ್ಕೂ ನಿಸ್ಪೃಹರಾದ ಬ್ರಾಹ್ಮಣರೇ ಏಕಮಾತ್ರ ಅಧಿಕಾರಿಗಳಾಗಿದ್ದಾರೆ ಎಂಬುದು ಶ್ರೀರಾಮನ ನಿಶ್ಚಯವಾಗಿತ್ತು. ॥ ೩ ॥ ಹೀಗೆ ಅಖಂಡ ಭೂಮಂಡಲವನ್ನು ದಾನಮಾಡಿದ ನಂತರ ಅವನ ಬಳಿಯಲ್ಲಿ ಉಟ್ಟವಸ್ತ್ರ, ತೊಟ್ಟ ಅಲಂಕಾರಾದಿಗಳು ಮಾತ್ರ ಉಳಿದಿದ್ದುವು. ಅಂತೆಯೇ ಪಟ್ಟಮಹಿಷಿಯಾದ ಸೀತಾದೇವಿಯಲ್ಲಿಯೂ ಮಾಂಗಲ್ಯ ಸೂಚಕ ವಸ್ತ್ರಾಭರಣಗಳು ಮಾತ್ರವೇ ಉಳಿದಿದ್ದುವು. ॥ ೪ ॥ ಭಗವಾನ್ ಶ್ರೀರಾಮನಾದರೋ ಬ್ರಾಹ್ಮಣರನ್ನೇ ತನ್ನ ಇಷ್ಟದೇವರಾಗಿ ಭಾವಿಸಿದ್ದಾನೆ, ಅವನ ಹೃದಯದಲ್ಲಿ ಬ್ರಾಹ್ಮಣರ ಕುರಿತು ಅನಂತ ಪ್ರೀತಿಯಿದೆ ಎಂಬುದನ್ನು ಅರಿತ ಆಚಾರ್ಯಾದಿ ಬ್ರಾಹ್ಮಣರ ಹೃದಯವು ಪ್ರೇಮದಿಂದ ದ್ರವಿತವಾಯಿತು. ಅವರು ಸಂತುಷ್ಟರಾಗಿ ಇಡೀ ಪೃಥಿವಿಯನ್ನು ಭಗವಂತನಿಗೆ ಮರಳಿ ಒಪ್ಪಿಸಿ ವಿಜ್ಞಾಪಿಸಿಕೊಂಡರು. ॥ ೫ ॥ ಪ್ರಭುವೇ ! ನೀನು ಸರ್ವಲೋಕಗಳ ಏಕಮಾತ್ರ ಸ್ವಾಮಿಯಾಗಿರುವೆ. ನೀನಾದರೋ ನಮ್ಮ ಹೃದಯದೊಳಗಿದ್ದು ನಿನ್ನ ತೇಜಸ್ಸಿನಿಂದ ಅಜ್ಞಾನಾಂಧಕಾರವನ್ನು ನಾಶಪಡಿಸುತ್ತಿರುವೆ. ಹೀಗಿರುವಾಗ ನೀನು ನಮಗೆ ಕೊಡದಿರುವ ವಸ್ತುವು ಯಾವುದು ತಾನೇ ಇದೆ ? (ಆತ್ಮವಸ್ತುವನ್ನೇ ನಮಗೆ ದರ್ಶನಮಾಡಿಸಿರುವಾಗ ಬೇರಾವುದನ್ನು ನಮಗೆ ಕೊಡಬೇಕಾಗಿದೆ ?) ॥ ೬ ॥

ನಮೋ ಬ್ರಹ್ಮಣ್ಯದೇವಾಯ ರಾಮಾಯಾಕುಂಠ ಮೇಧಸೇ ।
ಉತ್ತಮಶ್ಲೋಕಧುರ್ಯಾಯ ನ್ಯಸ್ತದಂಡಾರ್ಪಿತಾಂಘ್ರಯೇ ॥ ೭ ॥

ಕದಾಚಿಲ್ಲೋಕಜಿಜ್ಞಾಸುರ್ಗೂಢೋ ರಾತ್ರ್ಯಾಮಲಕ್ಷಿತಃ ।
ಚರನ್ವಾಚೋಽಶೃಣೋದ್ರಾಮೋ ಭಾರ್ಯಾಮುದ್ದಿಶ್ಯ ಕಸ್ಯಚಿತ್ ॥ ೮ ॥

ನಾಹಂ ಬಿಭರ್ಮಿ ತ್ವಾಂ ದುಷ್ಟಾಮಸತೀಂ ಪರವೇಶ್ಮಗಾಮ್ ।
ಸ್ತ್ರೀಲೋಭೀ ಬಿಭೃಯಾತ್ಸೀತಾಂ ರಾಮೋ ನಾಹಂ ಭಜೇ ಪುನಃ ॥ ೯ ॥

ಇತಿ ಲೋಕಾದ್ಬಹುಮುಖಾದ್ದುರಾರಾಧ್ಯಾದಸಂವಿದಃ ।
ಪತ್ಯಾ ಭೀತೇನ ಸಾ ತ್ಯಕ್ತಾ ಪ್ರಾಪ್ತಾ ಪ್ರಾಚೇತಸಾಶ್ರಮಮ್ ॥ ೧೦ ॥

ಅಂತರ್ವತ್ನ್ಯಾಗತೇ ಕಾಲೇ ಯಮೌ ಸಾ ಸುಷುವೇ ಸುತೌ ।
ಕುಶೋ ಲವ ಇತಿ ಖ್ಯಾತೌ ತಯೋಶ್ಚಕ್ರೇ ಕ್ರಿಯಾ ಮುನಿಃ ॥ ೧೧ ॥

ಅಂಗದಶ್ಚಿತ್ರಕೇತುಶ್ಚ ಲಕ್ಷ್ಮಣಸ್ಯಾತ್ಮಜೌ ಸ್ಮೃತೌ ।
ತಕ್ಷಃ ಪುಷ್ಕಲ ಇತ್ಯಾಸ್ತಾಂ ಭರತಸ್ಯ ಮಹೀಪತೇ ॥ ೧೨ ॥

ಸುಬಾಹುಃ ಶ್ರುತಸೇನಶ್ಚ ಶತ್ರುಘ್ನಸ್ಯ ಬಭೂವತುಃ ।
ಗಂಧರ್ವಾನ್ಕೋಟಿಶೋ ಜಘ್ನೇ ಭರತೋ ವಿಜಯೇ ದಿಶಾಮ್ ॥ ೧೩ ॥

ತದೀಯಂ ಧನಮಾನೀಯ ಸರ್ವಂ ರಾಜ್ಞೇ ನ್ಯವೇದಯತ್ ।
ಶತ್ರುಘ್ನಶ್ಚ ಮಧೋಃ ಪುತ್ರಂ ಲವಣಂ ನಾಮ ರಾಕ್ಷಸಮ್ ।
ಹತ್ವಾಮಧುವನೇ ಚಕ್ರೇ ಮಥುರಾಂ ನಾಮ ವೈ ಪುರೀಮ್ ॥ ೧೪ ॥

ಮುನೌ ನಿಕ್ಷಿಪ್ಯ ತನಯೌ ಸೀತಾ ಭರ್ತ್ರಾ ವಿವಾಸಿತಾ ।
ಧ್ಯಾಯಂತೀ ರಾಮಚರಣೌ ವಿವರಂ ಪ್ರವಿವೇಶ ಹ ॥ ೧೫ ॥

ತಚ್ಛ್ರುತ್ವಾ ಭಗವಾನ್ರಾಮೋ ರುಂಧನ್ನಪಿ ಧಿಯಾ ಶುಚಃ ।
ಸ್ಮರಂಸ್ತಸ್ಯಾ ಗುಣಾಂಸ್ತಾನ್‌ಸ್ತಾನ್ ನಾಶಕ್ನೋದ್ರೋದ್ಧುಮೀಶ್ವರಃ ॥ ೧೬ ॥

ಪ್ರಭೋ! ನಿನ್ನ ಜ್ಞಾನವು ಅನಂತವಾಗಿದೆ. ಪುಣ್ಯಶ್ಲೋಕರಲ್ಲಿ ನೀನು ಅಗ್ರಗಣ್ಯನಾಗಿರುವೆ. ಯಾರನ್ನು ಯಾವ ಕಾರಣದಿಂದಲೂ ಪೀಡಿಸದಿರುವ ಮಹಾತ್ಮರಿಗೆ ನೀನು ತನ್ನ ಚರಣಕಮಲಗಳನ್ನು ಕರುಣಿಸಿರುವೆ. ಹೀಗಿದ್ದರೂ ನೀನು ಬ್ರಾಹ್ಮಣರನ್ನು ನಿನ್ನ ಇಷ್ಟ ದೇವರೆಂದು ಭಾವಿಸುತ್ತಿರುವೆ. ಭಗವಂತಾ! ನಿನ್ನ ಈ ರಾಮ ರೂಪವನ್ನು ನಾವು ನಮಸ್ಕರಿಸುತ್ತೇವೆ. ॥ ೭ ॥

ಪರೀಕ್ಷಿತನೇ! ಒಮ್ಮೆ ಶ್ರೀರಾಮನು ತನ್ನ ಪ್ರಜೆಗಳ ಸ್ಥಿತಿಗತಿಗಳನ್ನು ತಿಳಿಯಲು ವೇಷವನ್ನು ಮರೆಸಿಕೊಂಡು, ಯಾರಿಗೂ ತಿಳಿಯದಂತೆ ಪಟ್ಟಣದಲ್ಲಿ ಅಡ್ಡಾಡುತ್ತಿದ್ದನು. ಆಗ ಓರ್ವವ್ಯಕ್ತಿಯು ತನ್ನ ಭಾರ್ಯೆಯನ್ನು ಉದ್ದೇಶಿಸಿ ಆಡುತ್ತಿದ್ದ ಮಾತುಗಳನ್ನು ರಾಮನು ಕೇಳಿಸಿಕೊಂಡನು. ॥ ೮ ॥ 'ಎಲೆಗೇ! ನೀನು ದುಷ್ಟಳೂ, ಕುಲಟೆಯೂ ಆಗಿರುವೆ. ಅನ್ಯರ ಮನೆಯಲ್ಲಿದ್ದು ಬಂದಿರುವೆ. ಸ್ತ್ರೀಲೋಭಿಯಾದ ರಾಮನು ಲಂಕೆಯಲ್ಲಿದ್ದು ಬಂದಿರುವ ಸೀತೆಯನ್ನು ಇಟ್ಟುಕೊಂಡಿರಬಹುದು. ಆದರೆ ನಾನು ನಿನ್ನನ್ನು ಪುನಃ ಮನೆ ಸೇರಿಸಲಾರೆ. ॥ ೯ ॥ ಎಲ್ಲ ಜನರನ್ನು ಸಂತೋಷ ಪಡಿಸುವುದು ನಿಜವಾಗಿಯೂ ಬಹು ಕಷ್ಟತರವಾಗಿದೆ. ಏಕೆಂದರೆ, ಮೂರ್ಖರಿಗೆ ಕೊರತೆಯಿಲ್ಲ ತಾನೇ! ಭಗವಾನ್ ಶ್ರೀರಾಮನು ಬಹುಜನರ ಬಾಯಿಂದ ಕೇಳಿದ ಇಂತಹ ಮಾತಿನಿಂದ ಲೋಕಾಪವಾದಕ್ಕೆ ಹೆದರಿ ಸತೀ-ಸಾಧ್ವಿಯಾದ ಸೀತಾ ದೇವಿಯನ್ನು ತ್ಯಜಿಸಿಯೇ ಬಿಟ್ಟನು. ಸೀತೆಯು ವಾಲ್ಮೀಕಿಗಳ ಆಶ್ರಮದಲ್ಲಿ ಇರತೊಡಗಿದಳು. ॥ ೧೦ ॥ ಸೀತಾದೇವಿಯು ಆಗ ಗರ್ಭಿಣಿಯಾಗಿದ್ದಳು. ದಿನಗಳು ತುಂಬುತ್ತಲೇ ಆಕೆಯು ಅವಳಿ-ಜವಳಿ ಮಕ್ಕಳಿಗೆ ಜನ್ಮವನ್ನಿತ್ತಳು. ಕುಶ-ಲವರೆಂಬ ಶುಭ ನಾಮಗಳಿಂದ ಅವರು ಪ್ರಸಿದ್ಧರಾದರು. ವಾಲ್ಮೀಕಿಗಳು ಅವರ ಜಾತಕರ್ಮಾದಿ ಸಂಸ್ಕಾರಗಳನ್ನು ನೆರವೇರಿಸಿದರು. ॥ ೧೧ ॥ ಲಕ್ಷ್ಮಣನಿಗೆ ಅಂಗದ ಮತ್ತು ಚಿತ್ರಕೇತು ಎಂಬ ಈರ್ವರು ಪುತ್ರರಾದರು. ಪರೀಕ್ಷಿತನೇ! ಹೀಗೆಯೇ ಭರತನಿಗೂ ತಕ್ಷ ಹಾಗೂ ಪುಷ್ಕಲ ಎಂಬ ಇಬ್ಬರು ಪುತ್ರರಿದ್ದರು. ॥ ೧೨ ॥ ಶತ್ರುಘ್ನನಿಗೆ ಸುಬಾಹು ಮತ್ತು ಶ್ರುತಸೇನರೆಂಬ ಇಬ್ಬರು ಪುತ್ರರಾದರು. ಭರತನು ದಿಗ್ವಿಜಯವನ್ನು ಮಾಡಿ ಕೋಟಿ-ಕೋಟಿ ಗಂಧರ್ವರನ್ನು ಸಂಹರಿಸಿದನು. ॥ ೧೩ ॥ ಅವನು ಅವರ ಸರ್ವಸಂಪತ್ತನ್ನು ತಂದು ಅಣ್ಣನಾದ ಭಗವಾನ್ ಶ್ರೀರಾಮನ ಸೇವೆಯಲ್ಲಿ ಅರ್ಪಿಸಿದನು. ಶತ್ರುಘ್ನನು ಮಧುವನದಲ್ಲಿದ್ದ ಮಧು ಎಂಬ ದಾನವನ ಪುತ್ರನಾದ ಲವಣಾಸುರನನ್ನು ಕೊಂದು ಅಲ್ಲಿ ಮಥುರಾಪುರಿಯನ್ನು ನಿರ್ಮಿಸಿದನು. ॥ ೧೪ ॥ ಭಗವಾನ್ ಶ್ರೀರಾಮನಿಂದ ಪರಿತ್ಯಕ್ತಳಾದ ಸೀತಾದೇವಿಯು ಲವ-ಕುಶರನ್ನು ವಾಲ್ಮೀಕಿಯವರಿಗೆ ಒಪ್ಪಿಸಿ ಶ್ರೀರಾಮಚಂದ್ರನ ಚರಣ ಕಮಲಗಳನ್ನು ಧ್ಯಾನಿಸುತ್ತಾ ಪೃಥಿವಿ ದೇವಿಯ ಲೋಕವನ್ನು ಸೇರಿದಳು. ॥ ೧೫ ॥ ಈ ವಾರ್ತೆಯನ್ನು ಕೇಳಿದ ಸಮರ್ಥನಾದ ಭಗವಾನ್ ಶ್ರೀರಾಮನು ತನ್ನ ಶೋಕಾವೇಶವನ್ನು ಬುದ್ಧಿಯ ಮೂಲಕವಾಗಿ ತಡೆಯಲು ಪ್ರಯತ್ನಿಸಿದರೂ ಸಾಧ್ವಿಯಾದ ಸೀತಾ ದೇವಿಯ ಅನುಪಮವಾದ, ಪವಿತ್ರವಾದ ಗುಣಗಳನ್ನು ಮತ್ತೆ-ಮತ್ತೆ ಸ್ಮರಿಸುತ್ತಲೇ ಇದ್ದನು. ॥ ೧೬ ॥

ಸ್ತ್ರೀಪುಂಪ್ರಸಂಗ ಏತಾದೃಕ್ಸರ್ವತ್ರ ತ್ರಾಸಮಾವಹಃ ।
ಅಪೀಶ್ವರಾಣಾಂ ಕಿಮುತ ಗ್ರಾಮ್ಯಸ್ಯ ಗೃಹಚೇತಸಃ
॥ ೧೭ ॥

ತತ ಊರ್ಧ್ವಂ ಬ್ರಹ್ಮಚರ್ಯಂ ಧಾರಯನ್ನಜುಹೋತ್ಪ್ರಭುಃ ।
ತ್ರಯೋದಶಾಬ್ದಸಾಹಸ್ರಮಗ್ನಿಹೋತ್ರಮಖಂಡಿತಮ್
॥ ೧೮ ॥

ಸ್ಮರತಾಂ ಹೃದಿ ವಿನ್ಯಸ್ಯ ವಿದ್ಧಂ ದಂಡಕಕಂಟಕೈಃ ।
ಸ್ವಪಾದಪಲ್ಲವಂ ರಾಮ ಆತ್ಮಜ್ಯೋತಿರಗಾತ್ತತಃ
॥ ೧೯ ॥

ನೇದಂ ಯಶೋ ರಘುಪತೇಃ ಸುರಯಾಚ್ಞಯಾಽಽತ್ತ-
ಲೀಲಾತನೋರಧಿಕಸಾಮ್ಯವಿಮುಕ್ತಧಾಮ್ನಃ ।
ರಕ್ಷೋವಧೋಜಲಧಿಬಂಧನಮಸ್ತ್ರಪೂಗೈಃ
ಕಿಂ ತಸ್ಯ ಶತ್ರುಹನನೇ ಕಪಯಃ ಸಹಾಯಾಃ ॥ ೨೦ ॥

ಯಸ್ಯಾಮಲಂ ನೃಪಸದಸ್ಸು ಯಶೋಽಧುನಾಪಿ
ಗಾಯಂತ್ಯಘಘ್ನಮೃಷಯೋ ದಿಗಿಭೇಂದ್ರಪಟ್ಟಮ್ ।
ತಂ ನಾಕಪಾಲವಸುಪಾಲಕಿರೀಟಜುಷ್ಟ-
ಪಾದಾಂಬುಜಂ ರಘುಪತಿಂ ಶರಣಂ ಪ್ರಪದ್ಯೇ ॥ ೨೧ ॥

ಸ ಯೈಃ ಸ್ಪೃಷ್ಟೋಽಭಿದೃಷ್ಟೋ ವಾ ಸಂವಿಷ್ಟೋಽನುಗತೋಽಪಿ ವಾ ।
ಕೋಸಲಾಸ್ತೇ ಯಯುಃ ಸ್ಥಾನಂ ಯತ್ರ ಗಚ್ಛಂತಿ ಯೋಗಿನಃ
॥ ೨೨ ॥

ಪುರುಷೋ ರಾಮಚರಿತಂ ಶ್ರವಣೈರುಪಧಾರಯನ್ ।
ಆನೃಶಂಸ್ಯಪರೋ ರಾಜನ್ಕರ್ಮಬಂಧೈರ್ವಿಮುಚ್ಯತೇ
॥ ೨೩ ॥

ರಾಜೋವಾಚ

ಕಥಂ ಸ ಭಗವಾನ್ರಾಮೋ ಭ್ರಾತೄನ್ವಾ ಸ್ವಯಮಾತ್ಮನಃ ।
ತಸ್ಮಿನ್ವಾ ತೇಽನ್ವವರ್ತಂತ ಪ್ರಜಾಃ ಪೌರಾಶ್ಚ ಈಶ್ವರೇ
॥ ೨೪ ॥

ಪರೀಕ್ಷಿತನೇ ! ಪತಿ-ಪತ್ನಿಯ ಈ ಸಂಬಂಧವು ಎಲ್ಲೆಡೆ ಹೀಗೆಯೇ ದುಃಖಕ್ಕೆ ಕಾರಣವಾಗಿದೆ. ಈ ಮಾತು ಮಹಾಸಮರ್ಥ ಜನರ ವಿಷಯದಲ್ಲಿಯೂ ಹೀಗೆಯೇ ಇರುವಾಗ ಗೃಹಾಸಕ್ತ ವಿಷಯಿಗಳ ಕುರಿತಾದರೋ ಹೇಳುವುದು ಏನಿದೆ ? ॥ ೧೭ ॥

ಇದಾದ ಬಳಿಕ ಭಗವಾನ್ ಶ್ರೀರಾಮನು ಬ್ರಹ್ಮಚರ್ಯ ವ್ರತವನ್ನು ಕೈಗೊಂಡು ಹದಿಮೂರುಸಾವಿರ ವರ್ಷಗಳ ಕಾಲ ಅಖಂಡವಾಗಿ ಅಗ್ನಿಹೋತ್ರವನ್ನು ಮಾಡಿದನು. ॥ ೧೮ ॥ ಅನಂತರ ಶ್ರೀರಾಮನು ದಂಡಕಾರಣ್ಯದಲ್ಲಿ ಮುಳ್ಳುಗಳಿಂದ ಚುಚ್ಚಲ್ಪಟ್ಟಿದ್ದ, ಚಿಗುರಿನಂತೆ ಸುಕೋಮಲವಾದ ತನ್ನ ಪಾದಪಂಕಜಗಳನ್ನು ತನ್ನನ್ನು ಸ್ಮರಿಸುವ ಭಕ್ತರ ಹೃದಯದಲ್ಲಿ ನೆಲೆಗೊಳಿಸಿ ಆತ್ಮಜ್ಯೋತಿಯಲ್ಲಿ ಸೇರಿಹೋದನು. ॥ ೧೯ ॥

ಪರೀಕ್ಷಿತನೇ ! ಭಗವಂತನಂತಹ ಪ್ರತಾಪಶಾಲಿಯು ಬೇರೆ ಯಾರೂ ಇಲ್ಲದಿರುವಾಗ ಅವನಿಗಿಂತ ಮಿಗಿಲಾದವರು ಹೇಗೆ ಇರಬಲ್ಲರು ? ಅವನು ದೇವತೆಗಳ ಪ್ರಾರ್ಥನೆಯಿಂದಲೇ ಈ ಲೀಲಾವಿಗ್ರಹವನ್ನು ಧರಿಸಿದ್ದನು. ಇಂತಹ ಸ್ಥಿತಿಯಲ್ಲಿ ರಘುವಂಶ ಶಿರೋಮಣಿ ಭಗವಾನ್ ಶ್ರೀರಾಮನಿಗೆ – ಅಸ್ತ್ರ-ಶಸ್ತ್ರಗಳಿಂದ ರಾಕ್ಷಸರನ್ನು ಸಂಹರಿಸಿದುದು, ಸಮುದ್ರಕ್ಕೆ ಸೇತುವೆ ಕಟ್ಟಿದುದು ಇದೇನೋ ದೊಡ್ಡ ಗೌರವದ ಮಾತಲ್ಲ, ಅವನಿಗೆ ಶತ್ರುಗಳನ್ನು ಕೊಲ್ಲಲಿಕ್ಕಾಗಿ ಕಪಿಗಳ ಸಹಾಯದ ಆವಶ್ಯಕತೆಯಾದರೂ ಏನಿತ್ತು ? ಇದೆಲ್ಲವೂ ಅವನ ಲೀಲೆ ಮಾತ್ರವಾಗಿದೆ. ॥ ೨೦ ॥

ಭಗವಾನ್ ಶ್ರೀರಾಮಚಂದ್ರನ ನಿರ್ಮಲವಾದ ಯಶಸ್ಸು ಸಮಸ್ತ ಪಾಪಗಳನ್ನು ಪರಿಹರಿಸುವಂತಹುದು. ಅದು ದಿಗ್ಗಜಗಳಿಗೆ ಪಟ್ಟವಸ್ತ್ರದಂತಿರುವ ಶ್ರೀರಾಮಚಂದ್ರನ ಯಶಸ್ಸು ದಿಗಂತದ ವರೆಗೂ ಹರಡಿದೆ. ಇಂದೂ ಕೂಡ ಮಹಾ-ಮಹಾ ಋಷಿ-ಮಹರ್ಷಿಗಳು ರಾಜರುಗಳ ಸಭೆಗಳಲ್ಲಿ ಗಾನಮಾಡುತ್ತಿದ್ದಾರೆ. ಸ್ವರ್ಗದ ದೇವತೆಗಳು ಮತ್ತು ಪೃಥಿವಿಯ ನರಪತಿಗಳು ತಮ್ಮ ಸುಂದರ ಕಿರೀಟಗಳಿಂದ ಅವನ ಚರಣಕಮಲಗಳ ಸೇವೆಯನ್ನು ಮಾಡುತ್ತಿದ್ದಾರೆ. ನಾನೂ ಕೂಡ ಅಂತಹ ರಘುವಂಶ ಶಿರೋಮಣಿ ಭಗವಾನ್ ಶ್ರೀರಾಮಚಂದ್ರನನ್ನು ಶರಣು ಹೊಂದುತ್ತೇನೆ. ॥ ೨೧ ॥ ಯಾರು ಭಗವಾನ್ ಶ್ರೀರಾಮನ ದರ್ಶನ ಪಡೆದಿದ್ದರೋ, ಸ್ಪರ್ಶಿಸಿದ್ದರೋ, ಅವನ ಸಹವಾಸದಲ್ಲಿದ್ದರೋ, ಅವನನ್ನು ಅನುಸರಿಸಿದ್ದರೋ ಅವರೆಲ್ಲರೂ ಹಾಗೂ ಕೋಸಲ ದೇಶದ ನಿವಾಸಿಗಳೂ ಕೂಡ ಮಹಾಯೋಗಿಗಳು ಯೋಗಸಾಧನೆಯಿಂದ ಪಡೆದುಕೊಳ್ಳುವ ದಿವ್ಯ ಲೋಕವನ್ನು ಸೇರಿರುವರು. ॥ ೨೨ ॥ ಯಾವ ಪುರುಷರು ತಮ್ಮ ಕಿವಿಯಾರೆ ಭಗವಾನ್ ಶ್ರೀರಾಮನ ಚರಿತ್ರೆಯನ್ನು ಕೇಳಿರುವರೋ, ಅವರಿಗೆ ಸರಳತೇ, ಕೋಮಲತೆ ಮುಂತಾದ ಸದ್ಗುಣಗಳ ಪ್ರಾಪ್ತಿಯಾಗುತ್ತದೆ. ಪರೀಕ್ಷಿತನೇ ! ಕೇವಲ ಇಷ್ಟೇ ಅಲ್ಲ, ಅವನು ಸಮಸ್ತ ಕರ್ಮ ಬಂಧನದಿಂದ ಮುಕ್ತನಾಗುವನು. ॥ ೨೩ ॥

**ಪರೀಕ್ಷಿದ್ರಾಜನು ಕೇಳಿದನು** – ಪೂಜ್ಯರೇ ! ಭಗವಾನ್ ಶ್ರೀರಾಮನು ತನ್ನ ಸಹೋದರರೊಡನೆ ಹೇಗೆ ವರ್ತಿಸುತ್ತಿದ್ದನು ? ಭರತನೇ ಮೊದಲಾದ ಅವನ ಅನುಜರೂ, ಪ್ರಜೆಗಳೂ, ಅಯೋಧ್ಯಾ ನಿವಾಸಿಗಳೂ ಶ್ರೀರಾಮನ ಕುರಿತು ಹೇಗೆ ವ್ಯವಹರಿಸುತ್ತಿದ್ದರು ? ॥ ೨೪ ॥

ಶ್ರೀಶುಕ ಉವಾಚ

ಅಥಾದಿಶದ್ದಿಗ್ವಿಜಯೇ ಭ್ರಾತ್ಯ್‌ಂಸ್ತ್ರಿಭುವನೇಶ್ವರಃ ।
ಆತ್ಮಾನಂ ದರ್ಶಯನ್ ಸ್ವಾನಾಂ ಪುರೀಮೈಕ್ಷತ ಸಾನುಗಃ
॥ ೨೫ ॥

ಆಸಿಕ್ತಮಾರ್ಗಾಂ ಗಂಧೋದೈಃ ಕರಿಣಾಂ ಮದಶೀಕರೈಃ ।
ಸ್ವಾಮಿನಂ ಪ್ರಾಪ್ತಮಾಲೋಕ್ಯ ಮತ್ತಾಂ ವಾ ಸುತರಾಮಿವ
॥ ೨೬ ॥

ಪ್ರಾಸಾದಗೋಪುರಸಭಾಚೈತ್ಯದೇವಗೃಹಾದಿಷು ।
ವಿನ್ಯಸ್ತಹೇಮಕಲಶೈಃ ಪತಾಕಾಭಿಶ್ಚ ಮಂಡಿತಾಮ್
॥ ೨೭ ॥

ಪೂಗೈಃ ಸವೃಂತೈರಂಭಾಭಿಃ ಪಟ್ಟಿಕಾಭಿಃ ಸುವಾಸಸಾಮ್ ।
ಆದರ್ಶೈರಂಶುಕೈಃ ಸ್ರಗ್ಭಿಃ ಕೃತಕೌತುಕತೋರಣಾಮ್
॥ ೨೮ ॥

ತಮುಪೇಯುಸ್ತತ್ರ ತತ್ರ
ಪೌರಾ ಅರ್ಹಣಪಾಣಯಃ ।
ಆಶಿಷೋ ಯುಯುಜುರ್ದೇವ
ಪಾಹೀಮಾಂ ಪ್ರಾಕ್ತ್ವಯೋದ್ಧೃತಾಮ್ ॥ ೨೯ ॥

ತತಃ ಪ್ರಜಾ ವೀಕ್ಷ್ಯ ಪತಿಂ ಚಿರಾಗತಂ
ದಿದೃಕ್ಷಯೋತ್ಸೃಷ್ಟಗೃಹಾಃ ಸ್ತ್ರಿಯೋ ನರಾಃ ।
ಆರುಹ್ಯ ಹರ್ಮ್ಯಾಣ್ಯರವಿಂದಲೋಚನ-
ಮತೃಪ್ತನೇತ್ರಾಃ ಕುಸುಮೈರವಾಕಿರನ್ ॥ ೩೦ ॥

ಅಥ ಪ್ರವಿಷ್ಟಃ ಸ್ವಗೃಹಂ ಜುಷ್ಟಂ ಸ್ವೈಃ ಪೂರ್ವರಾಜಭಿಃ ।
ಅನಂತಾಖಿಲಕೋಶಾಢ್ಯಮನರ್ಘ್ಯೋರುಪರಿಚ್ಛದಮ್
॥ ೩೧ ॥

ವಿದ್ರುಮೋದುಂಬರದ್ವಾರೈರ್ವೈದೂರ್ಯಸ್ತಂಭಪಂಕ್ತಿಭಿಃ ।
ಸ್ಥಲೈರ್ಮಾರಕತೈಃ ಸ್ವಚ್ಛೈರ್ಭ್ರಾಜತ್ಸ್ಫಟಿಕಭಿತ್ತಿಭಿಃ
॥ ೩೨ ॥

ಚಿತ್ರಸ್ರಗ್ಭಿಃ ಪಟ್ಟಿಕಾಭಿರ್ವಾಸೋಮಣಿಗಣಾಂಶುಕೈಃ ।
ಮುಕ್ತಾಫಲೈಶ್ಚಿದುಲ್ಲಾಸೈಃ ಕಾಂತಕಾಮೋಪಪತ್ತಿಭಿಃ
॥ ೩೩ ॥

ಶ್ರೀಶುಕಮಹಾಮುನಿಗಳು ಹೇಳಿದರು – ಪರೀಕ್ಷಿತನೇ! ತ್ರಿಭುವನೇಶ್ವರ ಮಹಾರಾಜನಾದ ಶ್ರೀರಾಮನು ರಾಜ್ಯಸಿಂಹಾಸನವನ್ನು ಸ್ವೀಕರಿಸಿದ ಬಳಿಕ ತನ್ನ ಅನುಜರಿಗೆ ದಿಗ್ವಿಜಯಮಾಡಿಕೊಂಡು ಬರಲು ಆಜ್ಞಾಪಿಸಿದನು. ತಾನು ತನ್ನ ಪರಿಜನ-ಪುರಜನರಿಗೆ ದರ್ಶನವನ್ನೀಯುತ್ತಾ ತನ್ನ ಅನುಚರರೊಂದಿಗೆ ಅಯೋಧ್ಯಾಪಟ್ಟಣದ ಸೊಬಗನ್ನು ನೋಡಲು ಹೊರಟನು. ॥ ೨೫ ॥ ಆ ಸಮಯದಲ್ಲಿ ಅಯೋಧ್ಯಾನಗರದ ಮಾರ್ಗಗಳು ಸುಗಂಧಜಲದಿಂದ ಮತ್ತು ಆನೆಗಳ ಮದೋದಕದಿಂದ ನೆನೆದಿದ್ದವು. ಈ ನಗರಿಯು ಸ್ವಾಮಿಯಾದ ಭಗವಾನ್ ಶ್ರೀರಾಮನನ್ನು ನೋಡಿ ಅತ್ಯಂತ ಆನಂದ ಭರಿತವಾಗಿದೆಯೋ ಎಂಬಂತೆ ಕಾಣುತ್ತಿತ್ತು. ॥ ೨೬ ॥ ಶ್ರೀರಾಮನು ನಗರದರ್ಶನ ಮಾಡಿಕೊಂಡು ಬರುತ್ತಿರುವಾಗ ಸುವರ್ಣಕಲಶಗಳಿಂದ ಯುಕ್ತವಾಗಿದ್ದ ಪ್ರಾಸಾದಗಳನ್ನೂ, ಗೋಪುರಗಳನ್ನೂ, ಸಭಾಭವನಗಳನ್ನೂ, ವಿಹಾರಸ್ಥಳಗಳನ್ನೂ, ದೇವಾಲಯಗಳನ್ನೂ ನೋಡಿದನು. ಅಲ್ಲಲ್ಲಿ ಪತಾಕೆಗಳು ಹಾರಾಡುತ್ತಿದ್ದವು. ॥ ೨೭ ॥ ಹೊಂಬಾಳೆಗಳಿಂದ ಕೂಡಿದ ಅಡಿಕೆಮರಗಳಿಂದಲೂ, ಬಾಳೆಯ ಕಂಭದಿಂದಲೂ, ಸುಂದರವಾದ ಪಟ್ಟವಸ್ತ್ರಗಳಿಂದಲೂ ಶೃಂಗರಿಸಲ್ಪಟ್ಟಿತ್ತು. ಕನ್ನಡಿಗಳಿಂದಲೂ, ವಸ್ತ್ರ-ಪುಷ್ಪಮಾಲೆಗಳಿಂದಲೂ, ಮಾಂಗಲಿಕ ಚಿಹ್ನೆಗಳಿಂದ ಚಿತ್ರಿತವಾಗಿದ್ದ ಕೌತುಕವನ್ನುಂಟುಮಾಡುವ ತೋರಣಗಳಿಂದಲೂ ಇಡೀ ನಗರವು ಝಗ-ಝಗಿಸುತ್ತಿತ್ತು. ॥ ೨೮ ॥ ನಗರವಾಸಿಗಳು ತಮ್ಮ ಕೈಗಳಲ್ಲಿ ನಾನಾರೀತಿಯ ಕಪ್ಪ-ಕಾಣಿಕೆಗಳನ್ನು ಹಿಡಿದುಕೊಂಡು ಭಗವಂತನ ಬಳಿಗೆ ಬಂದು, ಅವನನ್ನು ಪ್ರಾರ್ಥಿಸುತ್ತಾರೆ – ದೇವದೇವನೇ! ನೀನು ನಿನ್ನ ಹಿಂದಿನ ವರಾಹಾವತಾರದಲ್ಲಿ ಈ ಭೂಮಿಯನ್ನು ಉದ್ಧರಿಸಿದ್ದೆ. ಈಗ ಇದರ ಪಾಲನೆಯನ್ನೂ ಮಾಡು. ॥ ೨೯ ॥ ಪರೀಕ್ಷಿತನೇ! ಆ ಸಮಯದಲ್ಲಿ ಬಹಳ ದಿನಗಳ ಬಳಿಕ ಭಗವಾನ್ ಶ್ರೀರಾಮನು ಇತ್ತ ಆಗಮಿಸುತ್ತಿದ್ದಾನೆ ಎಂದು ತಿಳಿದಾಗ ಎಲ್ಲ ಪ್ರಜಾಜನರು, ಸ್ತ್ರೀ-ಪುರುಷರಾದಿಯಾಗಿ ಅವನ ದರ್ಶನದ ಉತ್ಕಂಠತೆಯಿಂದ ಮನೆಗಳ ಬಾಗಿಲುಗಳನ್ನು ಹಾರುಹೊಡೆದು ಅವನ ಕಡೆಗೆ ಓಡುತ್ತಿದ್ದರು. ಅವರು ಎತ್ತರವಾದ ಮಹಡಿಗಳಲ್ಲಿ ಹತ್ತಿಕೊಂಡು ತೃಪ್ತಿಹೊಂದದ ಕಣ್ಣುಗಳಿಂದ ಕಮಲನಯನ ಭಗವಂತನನ್ನು ನೋಡುತ್ತಾ ಅವನ ಮೇಲೆ ಹೂವುಗಳ ಮಳೆಗರೆಯುತ್ತಿದ್ದರು. ॥ ೩೦ ॥

ಹೀಗೆ ಪ್ರಜಾಜನರ ನಿರೀಕ್ಷಣಮಾಡಿ ಭಗವಂತನು ಮರಳಿ ಅರಮನೆಗೆ ಬರುತ್ತಿದ್ದನು. ಆ ಅರಮನೆಯು ಹಿಂದಿನ ರಾಜರಿಂದ ಸೇವಿಸಲ್ಪಟ್ಟಿತ್ತು. ಅದರಲ್ಲಿ ಎಂದೂ ಬರಿದಾಗದ ದೊಡ್ಡ-ದೊಡ್ಡ ರತ್ನಭಂಡಾರಗಳಿದ್ದವು. ಬಹುಮೂಲ್ಯವಾದ ಅನೇಕ ಸಾಮಗ್ರಿಗಳಿಂದ ಸುಸಜ್ಜಿತವಾಗಿತ್ತು. ॥ ೩೧ ॥ ಆ ಅರಮನೆಯ ದ್ವಾರಬಂಧಗಳು, ದ್ವಾರಗಳು ಹವಳಗಳಿಂದಲೇ ನಿರ್ಮಿತವಾಗಿದ್ದವು. ಅದರಲ್ಲಿರುವ ಎಲ್ಲ ಕಂಭಗಳು ವೈಡೂರ್ಯಮಣಿಗಳದ್ದಾಗಿದ್ದವು. ಮರಕತಮಣಿಯಿಂದ ರಚಿಸಿದ ಸುಂದರ ನೆಲವಿತ್ತು. ಸ್ಫಟಿಕದ ಗೋಡೆಗಳು ಹೊಳೆಯುತ್ತಿದ್ದವು. ॥ ೩೨ ॥ ಬಣ್ಣ-ಬಣ್ಣದ ಮಾಲೆಗಳಿಂದಲೂ, ಪತಾಕೆಗಳಿಂದಲೂ, ಮಣಿಗಳ ಹೊಳಪಿನಿಂದಲೂ, ಶುದ್ಧಚೇತನದಂತೆ ಉಜ್ವಲ ಮುತ್ತುಗಳಿಂದಲೂ, ಸುಂದರವಾದ ಭೋಗಸಾಮಗ್ರಿಗಳಿಂದಲೂ, ಸುಗಂಧಿತ ಧೂಪ-ದೀಪ

ಧೂಪದೀಪೈಃ ಸುರಭಿಭಿರ್ಮಂಡಿತಂ ಪುಷ್ಪಮಂಡನೈಃ ।
ಸ್ತ್ರೀಪುಂಭಿಃ ಸುರಸಂಕಾಶೈರ್ಜುಷ್ಟಂ ಭೂಷಣಭೂಷಣೈಃ
॥ ೩೪ ॥

ಗಳಿಂದಲೂ, ಪುಷ್ಪಗಳಿಂದಲೂ, ಒಡವೆಗಳಿಂದಲೂ ಆ ಅರಮನೆಯನ್ನು ತುಂಬಾ ಶೃಂಗರಿಸಿದ್ದರು. ಅಂತಹ ದಿವ್ಯವಾದ ಅರಮನೆಯನ್ನು ಶ್ರೀರಾಮನು ಪ್ರವೇಶಿಸುತ್ತಲೇ ಆಭೂಷಣಗಳಿಗೂ ಅಲಂಕಾರಪ್ರಾಯರಾದ ದೇವೋಪಮ ಸ್ತ್ರೀ-ಪುರುಷರು ಅವನ ಸೇವೆಯಲ್ಲಿ ಸರ್ವದಾ ನಿರತರಾಗಿರುತ್ತಿದ್ದರು. ॥ ೩೩-೩೪ ॥

ತಸ್ಮಿನ್ಸ ಭಗವಾನ್ರಾಮಃ ಸ್ನಿಗ್ಧಯಾ ಪ್ರಿಯಯೇಷ್ಟಯಾ ।
ರೇಮೇ ಸ್ವಾರಾಮಧೀರಾಣಾಮೃಷಭಃ ಸೀತಯಾ ಕಿಲ
॥ ೩೫ ॥

ಪರೀಕ್ಷಿತನೇ! ಭಗವಾನ್ ಶ್ರೀರಾಮನು ಆತ್ಮಾರಾಮರಾದ ಜಿತೇಂದ್ರಿಯರಾದ ಪುರುಷರೆಲ್ಲರಿಗೂ ಶ್ರೇಷ್ಠನಾಗಿದ್ದನು. ಆ ದಿವ್ಯವಾದ ಅರಮನೆಯಲ್ಲಿ ಅವನು ತನ್ನ ಪ್ರಾಣಪ್ರಿಯಳಾದ ಪ್ರೇಮಮಯಿಯಾದ ಪತ್ನೀ ಶ್ರೀಸೀತಾದೇವಿಯೊಡನೆ ವಿಹರಿಸುತ್ತಿದ್ದನು. ॥ ೩೫ ॥

ಬುಭುಜೇ ಚ ಯಥಾಕಾಲಂ ಕಾಮಾನ್ ಧರ್ಮಮಪೀಡಯನ್ ।
ವರ್ಷಪೂಗಾನ್ಬಹೂನ್ ನೃಣಾಮಭಿಧ್ಯಾತಾಂಘ್ರಿಪಲ್ಲವಃ
॥ ೩೬ ॥

ಸಮಸ್ತ ಸ್ತ್ರೀ-ಪುರುಷರು ಯಾರ ಚರಣಕಮಲಗಳನ್ನು ಧ್ಯಾನಮಾಡುತ್ತಾ ಇರುವರೋ ಅಂತಹ ಭಗವಾನ್ ಶ್ರೀರಾಮನು ಬಹಳ ವರ್ಷಗಳವರೆಗೆ ಧರ್ಮ-ಮರ್ಯಾದೆಗಳನ್ನು ಪಾಲಿಸುತ್ತಾ ಕಾಲೋಚಿತವಾಗಿ ಸುಖೋಪಭೋಗಗಳನ್ನು ಸೇವಿಸುತ್ತಾ ರಾಜ್ಯಭಾರ ಮಾಡುತ್ತಿದ್ದನು. ॥ ೩೬ ॥

*ಹನ್ನೊಂದನೆಯ ಅಧ್ಯಾಯವು ಮುಗಿಯಿತು. ॥ ೧೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ ಶ್ರೀರಾಮೋಪಾಖ್ಯಾನೇ ಏಕಾದಶೋಽಧ್ಯಾಯಃ ॥ ೧೧ ॥

# ಹನ್ನೆರಡನೆಯ ಅಧ್ಯಾಯ

## ಉಳಿದ ಇಕ್ಷ್ವಾಕು ವಂಶದ ಅರಸರ ವರ್ಣನೆ

*ಶ್ರೀಶುಕ ಉವಾಚ*

ಕುಶಸ್ಯ ಚಾತಿಥಿಸ್ತಸ್ಮಾನ್ನಿಷಧಸ್ತತ್ಸುತೋ ನಭಃ ।
ಪುಂಡರೀಕೋಽಥ ತತ್ಪುತ್ರಃ ಕ್ಷೇಮಧನ್ವಾ ಭವತ್ತತಃ
॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಶ್ರೀರಾಮನಿಗೆ ಕುಶ-ಲವರೆಂಬ ಯಮಳರು ಹುಟ್ಟಿದ್ದರೆಂದು ಹೇಳಿದ್ದೆನಲ್ಲವೇ? ಮುಂದೆ ಕುಶನ ಸಂತಾನವು ಬೆಳೆಯಿತು. ಕುಶನ ಮಗ ಅತಿಥಿ, ಅವನಿಗೆ ನಿಷಧ, ನಿಷಧನಿಂದ ನಭ, ನಭನಿಗೆ ಪುಂಡರೀಕ, ಪುಂಡರೀಕನಿಗೆ ಕ್ಷೇಮಧನ್ವಾ ಹುಟ್ಟಿದನು. ॥ ೧ ॥

ದೇವಾನೀಕಸ್ತತೋಽನೀಹಃ ಪಾರಿಯಾತ್ರೋಽಥ ತತ್ಸುತಃ ।
ತತೋ ಬಲಸ್ಥಲಸ್ತಸ್ಮಾದ್ವಜ್ರನಾಭೋಽರ್ಕಸಂಭವಃ
॥ ೨ ॥

ಕ್ಷೇಮಧನ್ವನಿಗೆ ದೇವಾನೀಕ ಪುತ್ರನಾದನು. ದೇವಾನೀಕನಿಂದ ಅನೀಹ, ಅನೀಹನಿಂದ ಪಾರಿಯಾತ್ರ, ಪಾರಿಯಾತ್ರನಿಂದ ಬಲಸ್ಥಲ, ಬಲಸ್ಥಲನಿಗೆ ವಜ್ರನಾಭನೆಂಬ ಪುತ್ರನಾದನು. ಇವನು ಸೂರ್ಯನ ಅಂಶನಾಗಿದ್ದನು. ॥ ೨ ॥

ಖಗಣಸ್ತತ್ಸುತಸ್ತಸ್ಮಾದ್ವಿಧೃತಿಶ್ಚಾಭವತ್ ಸುತಃ ।
ತತೋ ಹಿರಣ್ಯನಾಭೋಽಭೂದ್ಯೋಗಾಚಾರ್ಯಸ್ತು ಜೈಮಿನೇಃ
॥ ೩ ॥

ವಜ್ರನಾಭನಿಂದ ಖಗಣ, ಖಗಣನಿಂದ ವಿಧೃತಿ, ವಿಧೃತಿಯಿಂದ ಹಿರಣ್ಯನಾಭನ ಉತ್ಪತ್ತಿಯಾಯಿತು. ಅವನು ಜೈಮಿನಿಯ ಶಿಷ್ಯನಾಗಿದ್ದು ಯೋಗಾಚಾರ್ಯನಾಗಿದ್ದನು. ॥ ೩ ॥

ಶಿಷ್ಯಃ ಕೌಸಲ್ಯ ಆಧ್ಯಾತ್ಮಂ ಯಾಜ್ಞವಲ್ಕ್ಯೋಽಧ್ಯಗಾದ್ಯತಃ ।
ಯೋಗಂ ಮಹೋದಯಮೃಷಿರ್ಹೃದಯಗ್ರಂಥಿಭೇದಕಮ್
॥ ೪ ॥

ಕೋಸಲದೇಶನಿವಾಸಿ ಯಾಜ್ಞವಲ್ಕ್ಯಋಷಿಯು ಅವನ ಶಿಷ್ಯನಾಗಿ ಅವನಿಂದ ಅಧ್ಯಾತ್ಮಯೋಗದ ಶಿಕ್ಷಣವನ್ನು ಪಡೆದಿದ್ದನು. ಆ ಯೋಗವು ಹೃದಯಗ್ರಂಥಿಯನ್ನು ಕತ್ತರಿಸುವಂತಹುದು ಮತ್ತು ಪರಮ ಸಿದ್ಧಿಪ್ರದವಾಗಿದೆ. ॥ ೪ ॥

ಪುಷ್ಯೋ ಹಿರಣ್ಯನಾಭಸ್ಯ ಧ್ರುವಸಂಧಿಸ್ತತೋಽಭವತ್ ।
ಸುದರ್ಶನೋಽಥಾಗ್ನಿವರ್ಣಃ ಶೀಘ್ರಸ್ತಸ್ಯ ಮರುಃ ಸುತಃ
॥ ೫ ॥

ಹಿರಣ್ಯನಾಭನಿಗೆ ಪುಷ್ಯ, ಪುಷ್ಯನಿಗೆ ಧ್ರುವಸಂಧಿ, ಧ್ರುವಸಂಧಿಗೆ ಸುದರ್ಶನ, ಸುದರ್ಶನನಿಗೆ ಅಗ್ನಿವರ್ಣ, ಅಗ್ನಿವರ್ಣನಿಗೆ ಶೀಘ್ರ, ಶೀಘ್ರನಿಗೆ ಮರು ಎಂಬ ಪುತ್ರ ಹುಟ್ಟಿದನು. ॥ ೫ ॥

ಯೋಽಸಾವಾಸ್ತೇ ಯೋಗಸಿದ್ಧಃ ಕಲಾಪಗ್ರಾಮಮಾಶ್ರಿತಃ ।
ಕಲೇರಂತೇ ಸೂರ್ಯವಂಶಂ ನಷ್ಟಂ ಭಾವಯಿತಾ ಪುನಃ
॥ ೬ ॥

ಮರುವು ಯೋಗಸಾಧನೆಯಿಂದ ಸಿದ್ಧಿಯನ್ನು ಪಡೆದುಕೊಂಡು ಅವನು ಈಗಲೂ ಕಲಾಪಗ್ರಾಮದಲ್ಲಿ ಇರುತ್ತಿರುವನು. ಕಲಿಯುಗದ ಅಂತ್ಯದಲ್ಲಿ ಸೂರ್ಯವಂಶವು ನಾಶವಾದಾಗ ಅವನು ಅದನ್ನು ಪುನಃ ಮುಂದುವರೆಸುವನು. ॥ ೬ ॥

ತಸ್ಮಾತ್ಪ್ರಸುಶ್ರುತಸ್ತಸ್ಯ ಸಂಧಿಸ್ತಸ್ಯಾಪ್ಯಮರ್ಷಣಃ ।
ಮಹಸ್ವಾಂಸ್ತತ್ಸುತಸ್ತಸ್ಮಾದ್ವಿಶ್ವಸಾಹ್ವೋಽನ್ವಜಾಯತ ॥ ೭ ॥

ತತಃ ಪ್ರಸೇನಜಿತ್ತಸ್ಮಾತ್ತಕ್ಷಕೋ ಭವಿತಾ ಪುನಃ ।
ತತೋ ಬೃಹದ್ಬಲೋ ಯಸ್ತು ಪಿತ್ರಾ ತೇ ಸಮರೇ ಹತಃ ॥ ೮ ॥

ಏತೇ ಹೀಕ್ಷ್ವಾಕುಭೂಪಾಲಾ ಅತೀತಾಃ ಶೃಣ್ವನಾಗತಾನ್ ।
ಬೃಹದ್ಬಲಸ್ಯ ಭವಿತಾ ಪುತ್ರೋ ನಾಮ ಬೃಹದ್ರಣಃ ॥ ೯ ॥

ಉರುಕ್ರಿಯಸ್ತತಸ್ತಸ್ಯ ವತ್ಸವೃದ್ಧೋ ಭವಿಷ್ಯತಿ ।
ಪ್ರತಿವ್ಯೋಮಸ್ತತೋ ಭಾನುರ್ದಿವಾಕೋ ವಾಹಿನೀಪತಿಃ ॥ ೧೦ ॥

ಸಹದೇವಸ್ತತೋ ವೀರೋ ಬೃಹದಶ್ವೋಽಥ ಭಾನುಮಾನ್ ।
ಪ್ರತೀಕಾಶ್ವೋ ಭಾನುಮತಃ ಸುಪ್ರತೀಕೋಽಥ ತತ್ಸುತಃ ॥ ೧೧ ॥

ಭವಿತಾ ಮರುದೇವೋಽಥ ಸುನಕ್ಷತ್ರೋಽಥ ಪುಷ್ಕರಃ ।
ತಸ್ಯಾಂತರಿಕ್ಷಸ್ತತ್ಪುತ್ರಃ ಸುತಪಾಸ್ತದಮಿತ್ರಜಿತ್ ॥ ೧೨ ॥

ಬೃಹದ್ರಾಜಸ್ತು ತಸ್ಯಾಪಿ ಬರ್ಹಿಸ್ತಸ್ಮಾತ್ಕೃತಂಜಯಃ ।
ರಣಂಜಯಸ್ತಸ್ಯ ಸುತಃ ಸಂಜಯೋ ಭವಿತಾ ತತಃ ॥ ೧೩ ॥

ತಸ್ಮಾಚ್ಛಾಕ್ಯೋಽಥ ಶುದ್ಧೋದೋ ಲಾಂಗಲಸ್ತತ್ಸುತಃ ಸ್ಮೃತಃ ।
ತತಃ ಪ್ರಸೇನಜಿತ್ತಸ್ಮಾತ್ ಕ್ಷುದ್ರಕೋ ಭವಿತಾ ತತಃ ॥ ೧೪ ॥

ರಣಕೋ ಭವಿತಾ ತಸ್ಮಾತ್ಸುರಥಸ್ತನಯಸ್ತತಃ ।
ಸುಮಿತ್ರೋ ನಾಮ ನಿಷ್ಠಾಂತ ಏತೇ ಬಾರ್ಹದ್ಬಲಾನ್ವಯಾಃ ॥ ೧೫ ॥

ಇಕ್ಷ್ವಾಕೂಣಾಮಯಂ ವಂಶಃ ಸುಮಿತ್ರಾಂತೋ ಭವಿಷ್ಯತಿ ।
ಯತಸ್ತಂ ಪ್ರಾಪ್ಯ ರಾಜಾನಂ ಸಂಸ್ಥಾಂ ಪ್ರಾಪ್ಸ್ಯತಿ ವೈ ಕಲೌ ॥ ೧೬ ॥

ಮರುವಿನಿಂದ ಪ್ರಸುಶ್ರುತ, ಅವನಿಂದ ಸಂಧಿ, ಸಂಧಿಯಿಂದ ಅಮರ್ಷಣನು ಹುಟ್ಟಿದನು. ಅಮರ್ಷಣನಿಂದ ಮಹಸ್ವಂತ, ಮಹಸ್ವಂತನಿಂದ ವಿಶ್ವಸಾಹ್ವ ನಾದನು. ॥ ೭ ॥ ವಿಶ್ವಸಾಹ್ವನ ಪುತ್ರ ಪ್ರಸೇನಜಿತ್, ಪ್ರಸೇನಜಿತ್ತುವಿನಿಂದ ತಕ್ಷಕ, ತಕ್ಷಕಪುತ್ರ ಬೃಹದ್ಬಲ ನಾದನು. ಪರೀಕ್ಷಿತನೇ! ಇದೇ ಬೃಹದ್ಬಲನನ್ನು ನಿನ್ನ ತಂದೆ ಅಭಿಮನ್ಯುವು ಯುದ್ಧದಲ್ಲಿ ಕೊಂದಿದ್ದನು. ॥ ೮ ॥

ಪರೀಕ್ಷಿದ್ರಾಜೇಂದ್ರನೇ! ಇಕ್ಷ್ವಾಕುವಂಶದಲ್ಲಿ ಇಂದಿನವರೆಗೆ ಇಷ್ಟು ಭೂಪಾಲರು ಆಗಿಹೋಗಿದ್ದಾರೆ. ಈಗ ಮುಂದೆ ಆಗುವವರ ವಿಷಯವನ್ನು ಕೇಳು. ಬೃಹದ್ಬಲನಿಗೆ ಬೃಹದ್ರಣ ಪುತ್ರನಾಗುವನು. ॥ ೯ ॥ ಬೃಹದ್ರಣನಿಗೆ ಉರುಕ್ರಿಯ, ಅವನಿಗೆ ವತ್ಸವೃದ್ಧ ವತ್ಸವೃದ್ಧನಿಗೆ ಪ್ರತಿವ್ಯೋಮ, ಪ್ರತಿವ್ಯೋಮನಿಗೆ ಭಾನು, ಭಾನುವಿಗೆ ಸೇನಾಪತಿ ದಿವಾಕನೆಂಬ ಪುತ್ರನಾಗುವನು. ॥ ೧೦ ॥ ದಿವಾಕನಿಗೆ ವೀರಸಹದೇವ, ಸಹದೇವನಿಗೆ ಬೃಹದಶ್ವ, ಬೃಹದಶ್ವನಿಗೆ ಭಾನುಮಾನ್, ಭಾನುಮಂತನಿಗೆ ಪ್ರತೀಕಾಶ್ವ, ಪ್ರತೀಕಾಶ್ವನಿಗೆ ಸುಪ್ರತೀಕ ಪುತ್ರನಾಗುವನು. ॥ ೧೧ ॥ ಸುಪ್ರತೀಕನಿಗೆ ಮರುದೇವ, ಮರುದೇವನಿಗೆ ಸುನಕ್ಷತ್ರ, ಸುನಕ್ಷತ್ರನಿಗೆ ಪುಷ್ಕರ, ಪುಷ್ಕರನಿಗೆ ಅಂತರಿಕ್ಷ, ಅಂತರಿಕ್ಷನಿಗೆ ಸುತಪಾ, ಅವನಿಗೆ ಅಮಿತ್ರಜಿತ್ ಎಂಬ ಪುತ್ರನಾಗುವನು. ॥ ೧೨ ॥ ಅಮಿತ್ರಜಿತ್ತುವಿಗೆ ಬೃಹದ್ರಾಜ, ಬೃಹದ್ರಾಜನಿಗೆ ಬರ್ಹಿ, ಬರ್ಹಿಗೆ ಕೃತಂಜಯ, ಕೃತಂಜಯನಿಗೆ ರಣಂಜಯ, ಅವನಿಗೆ ಸಂಜಯನೆಂಬ ಪುತ್ರನಾಗುವನು. ॥ ೧೩ ॥ ಸಂಜಯನಿಗೆ ಶಾಕ್ಯ, ಅವನಿಗೆ ಶುದ್ಧೋದ, ಶುದ್ಧೋದನಿಗೆ ಲಾಂಗಲ, ಲಾಂಗಲನಿಗೆ ಪ್ರಸೇನಜಿತ್, ಪ್ರಸೇನಜಿತ್ತುವಿಗೆ ಕ್ಷುದ್ರಕನೆಂಬ ಪುತ್ರನಾಗುವನು. ॥ ೧೪ ॥ ಕ್ಷುದ್ರಕನಿಗೆ ರಣಕ, ರಣಕನಿಗೆ ಸುರಥ, ಸುರಥನಿಗೆ ಈ ವಂಶದ ಕೊನೆಯ ರಾಜನಾದ ಸುಮಿತ್ರನು ಹುಟ್ಟುವನು. ಇವರೆಲ್ಲರೂ ಬೃಹದ್ಬಲನ ವಂಶಧರರಾಗುವರು. ॥ ೧೫ ॥ ಇಕ್ಷ್ವಾಕುವಿನ ಈ ವಂಶವು ಸುಮಿತ್ರನವರೆಗೆ ಉಳಿದೀತು. ಏಕೆಂದರೆ ಸುಮಿತ್ರನು ರಾಜನಾದಾಗ ಕಲಿಯುಗದಲ್ಲಿ ಈ ವಂಶವು ಮುಗಿದುಹೋದೀತು. ॥ ೧೬ ॥

ಹನ್ನೆರಡನೆಯ ಅಧ್ಯಾಯವು ಮುಗಿಯಿತು. ॥ ೧೨ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ ಇಕ್ಷ್ವಾಕುವಂಶವರ್ಣನಂ ನಾಮ ದ್ವಾದಶೋಽಧ್ಯಾಯಃ ॥ ೧೨ ॥

# ಹದಿಮೂರನೆಯ ಅಧ್ಯಾಯ

## ನಿಮಿರಾಜನ ವಂಶದ ವರ್ಣನೆ

*ಶ್ರೀಶುಕ ಉವಾಚ*

ನಿಮಿರಿಕ್ಷ್ವಾಕುತನಯೋ ವಸಿಷ್ಠಮವೃತರ್ತ್ವಿಜಮ್ ।
ಆರಭ್ಯ ಸತ್ರಂ ಸೋಽಪ್ಯಾಹ ಶಕ್ರೇಣ ಪ್ರಾಗ್ವೃತೋಽಸ್ಮಿ ಭೋಃ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಇಕ್ಷ್ವಾಕುವಿಗೆ ನಿಮಿ ಎಂಬ ಪುತ್ರನಿದ್ದನು. ಅವನು ಯಜ್ಞವನ್ನು ಪ್ರಾರಂಭಿಸಿ ಮಹರ್ಷಿ ವಸಿಷ್ಠರನ್ನು ಋತ್ವಿಜರನ್ನಾಗಿ ವರಣ ಮಾಡಿದನು. ವಸಿಷ್ಠರು ಹೇಳಿದರು – ರಾಜನೇ! ಇಂದ್ರನು ತನ್ನ ಯಜ್ಞಕ್ಕಾಗಿ ನನ್ನನ್ನು ಮೊದಲೇ ವರಣಮಾಡಿರುವನು. ॥ ೧ ॥




राजा भगीरथकी प्रार्थनापर भगवान् शिवका गङ्गाको अपने सिरपर धारण करना

**Entreated by Bhagīratha Lord Śiva holds Gaṅgā on his head**




भगवान् श्रीकृष्णके बालचरित्र ( क )

**Childly pranks of Lord Śrī Kṛṣṇa (A)**




भगवान् श्रीकृष्णके बालचरित्र ( ख )

**Childly pranks of Lord Śrī Kṛṣṇa (B)**



जरासन्धके कारागारसे राजाओंकी मुक्ति

The release of kings from the prison of Jarāsandha



शाल्व-संग्राम

Battle with Śālva



दन्तवक्त्र और विदूरथका उद्धार

Liberation of Dantavaktra and Vidūratha



माता देवकीके मृत पुत्रोंको वापस लाना Restoration of dead sons of Devakī



यदुकुलके विनाशका शाप
Curse for the annihilation of Yadu dynasty

ತಂ ನಿರ್ವರ್ತ್ಯಾಗಮಿಷ್ಯಾಮಿ ತಾವನ್ಮಾಂ ಪ್ರತಿಪಾಲಯ ।
ತೂಷ್ಣೀಮಾಸೀದ್ಗೃಹಪತಿಃ ಸೋಽಪೀಂದ್ರಸ್ಯಾಕರೋನ್ಮಖಮ್ ॥ ೨ ॥

ನಿಮಿಶ್ಚಲಮಿದಂ ವಿದ್ವಾನ್ಸತ್ರಮಾರಭತಾತ್ಮವಾನ್ ।
ಋತ್ವಿಗ್ಭಿರಪರೈಸ್ತಾವನ್ನಾಗಮದ್ಯಾವತಾ ಗುರುಃ ॥ ೩ ॥

ಶಿಷ್ಯವ್ಯತಿಕ್ರಮಂ ವೀಕ್ಷ್ಯ ನಿರ್ವರ್ತ್ಯ ಗುರುರಾಗತಃ ।
ಅಶಪತ್ಪತತಾದ್ದೇಹೋ ನಿಮೇಃ ಪಂಡಿತಮಾನಿನಃ ॥ ೪ ॥

ನಿಮಿಃ ಪ್ರತಿದದೌ ಶಾಪಂ ಗುರವೇಽಧರ್ಮವರ್ತಿನೇ ।
ತವಾಪಿ ಪತತಾದ್ದೇಹೋ ಲೋಭಾದ್ಧರ್ಮಮಜಾನತಃ ॥ ೫ ॥

ಇತ್ಯುತ್ಸಸರ್ಜ ಸ್ವಂ ದೇಹಂ ನಿಮಿರಧ್ಯಾತ್ಮಕೋವಿದಃ ।
ಮಿತ್ರಾವರುಣಯೋರ್ಜಜ್ಞೇ ಉರ್ವಶ್ಯಾಂ ಪ್ರಪಿತಾಮಹಃ ॥ ೬ ॥

ಗಂಧವಸ್ತುಷು ತದ್ದೇಹಂ ನಿಧಾಯ ಮುನಿಸತ್ತಮಾಃ ।
ಸಮಾಪ್ತೇ ಸತ್ರಯಾಗೇಽಥ ದೇವಾನೂಚುಃ ಸಮಾಗತಾನ್ ॥ ೭ ॥

ರಾಜ್ಞೋ ಜೀವತು ದೇಹೋಽಯಂ ಪ್ರಸನ್ನಾಃ ಪ್ರಭವೋ ಯದಿ ।
ತಥೇತ್ಯುಕ್ತೇ ನಿಮಿಃ ಪ್ರಾಹ ಮಾ ಭೂನ್ಮೇ ದೇಹಬಂಧನಮ್ ॥ ೮ ॥

ಯಸ್ಯ ಯೋಗಂ ನ ವಾಂಛಂತಿ ವಿಯೋಗಭಯಕಾತರಾಃ ।
ಭಜಂತಿ ಚರಣಾಂಭೋಜಂ ಮುನಯೋ ಹರಿಮೇಧಸಃ ॥ ೯ ॥

ದೇಹಂ ನಾವರುರುತ್ಸೇಽಹಂ ದುಃಖಶೋಕಭಯಾವಹಮ್ ।
ಸರ್ವತ್ರಾಸ್ಯ ಯತೋ ಮೃತ್ಯುರ್ಮತ್ಸ್ಯಾನಾಮುದಕೇ ಯಥಾ ॥ ೧೦ ॥

*ದೇವಾ ಊಚುಃ*

ವಿದೇಹ ಉಷ್ಯತಾಂ ಕಾಮಂ ಲೋಚನೇಷು ಶರೀರಿಣಾಮ್ ।
ಉನ್ಮೇಷಣನಿಮೇಷಾಭ್ಯಾಂ ಲಕ್ಷಿತೋಽಧ್ಯಾತ್ಮಸಂಸ್ಥಿತಃ ॥ ೧೧ ॥

ಅವನ ಯಜ್ಞವನ್ನು ಪೂರೈಸಿ ನಾನು ನಿನ್ನ ಬಳಿಗೆ ಬರುವೆನು. ಅಲ್ಲಿಯವರೆಗೆ ನನ್ನ ಪ್ರತೀಕ್ಷೆ ಮಾಡು. ಈ ಮಾತನ್ನು ಕೇಳಿ ನಿಮಿ ರಾಜನು ಮೌನವಾಗಿದ್ದನು. ವಸಿಷ್ಠರು ಇಂದ್ರನಿಂದ ಯಜ್ಞವನ್ನು ಮಾಡಿಸಲು ಹೊರಟುಹೋದರು. ॥ ೨ ॥ ಜೀವನವು ಕ್ಷಣ ಭಂಗುರವಾದುದರಿಂದ ವಸಿಷ್ಠರಿಗಾಗಿ ಕಾಯುವುದು ಉಚಿತ ವಲ್ಲವೆಂದು ಭಾವಿಸಿದ ನಿಮಿಯು ವಸಿಷ್ಠರು ಬರುವ ಮೊದಲೇ ಬೇರೆ ಋತ್ವಿಜರನ್ನು ಆಹ್ವಾನಿಸಿ ಯಜ್ಞವನ್ನು ಪ್ರಾರಂಭಿಸಿದನು. ॥ ೩ ॥ ಗುರು ವಸಿಷ್ಠರು ಇಂದ್ರನ ಯಜ್ಞವನ್ನು ಮುಗಿಸಿ ಮರಳಿ ದಾಗ ತನ್ನ ಶಿಷ್ಯನಾದ ನಿಮಿಯು ನನ್ನ ಮಾತನ್ನು ಮನ್ನಿಸದೆ ಯಜ್ಞವನ್ನು ಪ್ರಾರಂಭಿಸಿರುವುದನ್ನು ನೋಡಿದರು. ಆದರಿಂದ ಅವರು ಕೋಪಗೊಂಡು – 'ತನ್ನನ್ನೇ ಮಹಾಪಂಡಿತನೆಂದು ಭಾವಿಸಿಕೊಂಡಿರುವ ನಿನ್ನ ಶರೀರವು ಬಿದ್ದುಹೋಗಲಿ' ಎಂದು ಶಾಪವನ್ನಿತ್ತರು. ॥ ೪ ॥ ನಿಮಿಯ ದೃಷ್ಟಿಯಿಂದ ವಸಿಷ್ಠರಿತ್ತ ಶಾಪವು ಧರ್ಮಕ್ಕೆ ವಿರೋಧವಾಗಿತ್ತು. ಈ ಕಾರಣದಿಂದ ಅವನೂ ವಸಿಷ್ಠರಿಗೆ ಶಾಪವನ್ನಿತ್ತನು – 'ಲೋಭಪರವಶನಾಗಿ ಧರ್ಮವನ್ನು ಆದರಿಸದೇ ಇರುವುದರಿಂದ ನಿನ್ನ ಶರೀರವೂ ಬಿದ್ದುಹೋಗಲಿ.' ॥ ೫ ॥ ಹೀಗೆ ಶಾಪವನ್ನಿತ್ತು ಆತ್ಮವಿದ್ಯಾನಿಪುಣನಾದ ನಿಮಿಯು ದೇಹತ್ಯಾಗಮಾಡಿದನು. ಪರೀಕ್ಷಿತನೇ! ಇತ್ತ ನನ್ನ ವೃದ್ಧ ಪ್ರಪಿತಾಮಹರಾದ ವಸಿಷ್ಠರೂ ಕೂಡ ತನ್ನ ಶರೀರವನ್ನು ತ್ಯಜಿಸಿ, ಮಿತ್ರಾವರುಣರ ಪುತ್ರರಾಗಿ ಊರ್ವಶಿಯ ಗರ್ಭದಲ್ಲಿ ಜನ್ಮ ತಾಳಿದರು. ॥ ೬ ॥ ನಿಮಿರಾಜನ ಯಜ್ಞಕ್ಕೆ ಬಂದಿರುವ ಶ್ರೇಷ್ಠ ಮುನಿಗಳು ರಾಜನ ಶರೀರವನ್ನು ಸುಗಂಧಿತ ವಸ್ತುಗಳಲ್ಲಿ ಇರಿಸಿದರು. ಸತ್ರಯಾಗವು ಮುಗಿದು ದೇವತೆಗಳು ಆಗಮಿಸಿದಾಗ ಋತ್ವಿಜರೆಲ್ಲರೂ ಸೇರಿ ದೇವತೆಗಳನ್ನು ಪ್ರಾರ್ಥಿಸಿದರು. ॥ ೭ ॥ ಮಹಾನುಭಾವರೇ! ನೀವೆಲ್ಲ ಸಮರ್ಥರಾಗಿದ್ದೀರಿ. ನೀವು ಈ ಯಾಗದಿಂದ ಪ್ರಸನ್ನರಾಗಿರುವಿರಾದರೆ ನಿಮಿರಾಜನ ಶರೀರವು ಪುನಃ ಜೀವಿತವಾಗಲಿ. 'ಹಾಗೆಯೇ ಆಗಲಿ' ಎಂದು ದೇವತೆಗಳು ಹೇಳಿದಾಗ ನಿಮಿಯು ಹೇಳಿದನು – 'ನನಗೆ ಪುನಃ ದೇಹದ ಬಂಧನಬೇಕಾಗಿಲ್ಲ. ॥ ೮॥ ವಿಚಾರಶೀಲರಾದ ಮುನಿಗಳು ತಮ್ಮ ಬುದ್ಧಿಯನ್ನು ಪೂರ್ಣವಾಗಿ ಭಗವಂತನಲ್ಲೇ ತೊಡಗಿಸುವರು. ಅವನ ಚರಣಕಮಲಗಳನ್ನೇ ಭಜಿಸುತ್ತಾರೆ. ಒಂದಲ್ಲ ಒಂದುದಿನ ಈ ಶರೀರವು ಖಂಡಿತವಾಗಿ ಬಿದ್ದುಹೋಗುವುದು. ಈ ಭಯ ದಿಂದಾಗಿ ಅವರು ಈ ಶರೀರದ ಸಂಯೋಗವನ್ನು ಎಂದಿಗೂ ಬಯಸುವುದಿಲ್ಲ, ಅವರಾದರೋ ಮುಕ್ತರಾಗಲು ಬಯಸುತ್ತಿರು ವರು. ॥ ೯ ॥ ಆದ್ದರಿಂದ ನಾನು ಈಗ ದುಃಖ, ಶೋಕ, ಭಯಕ್ಕೆ ಮೂಲಕಾರಣವಾದ ಈ ಶರೀರವನ್ನು ಧರಿಸಲು ಬಯಸುವುದಿಲ್ಲ, ನೀರಿನಲ್ಲಿರುವ ಮೀನಿಗೆ ಎಲ್ಲೆಡೆ ಮೃತ್ಯುಭಯವೇ ಇರುವಂತೆ ಈ ಶರೀರಕ್ಕೂ ಎಲ್ಲೆಡೆ ಮೃತ್ಯುವೇ ಮೃತ್ಯುವಿದೆ.' ॥ ೧೦ ॥

**ದೇವತೆಗಳು ಹೇಳಿದರು** – ಮುನಿಗಳೇ! ನಿಮಿರಾಜನು ತನ್ನ ಇಚ್ಛೆಯಂತೆ ಶರೀರರಹಿತನಾಗಿ ಪ್ರಾಣಿಗಳ ಕಣ್ಣುಗಳಲ್ಲಿ ನೆಲಸಲಿ. ಅವನು ಅಲ್ಲಿದ್ದುಕೊಂಡು ಸೂಕ್ಷ್ಮಶರೀರದಿಂದ ಭಗವಂತನನ್ನು ಧ್ಯಾನಮಾಡಲಿ. ರೆಪ್ಪೆಗಳು ಮುಚ್ಚಿ ತೆರೆಯುವುದರಿಂದ ಅವನ ಅಸ್ತಿತ್ವದ ಅರಿವು ಉಂಟಾಗುವುದು. ॥ ೧೧ ॥

ಅರಾಜಕಭಯಂ ನೃಣಾಂ ಮನ್ಯಮಾನಾ ಮಹರ್ಷಯಃ ।
ದೇಹಂ ಮಮಂಥುಃ ಸ್ಮ ನಿಮೇಃ ಕುಮಾರಃ ಸಮಜಾಯತ ॥ ೧೨ ॥

ಜನ್ಮನಾ ಜನಕಃ ಸೋಽಭೂದ್ವೈದೇಹಸ್ತು ವಿದೇಹಜಃ ।
ಮಿಥಿಲೋ ಮಥನಾಜ್ಜಾತೋ ಮಿಥಿಲಾ ಯೇನ ನಿರ್ಮಿತಾ ॥ ೧೩ ॥

ತಸ್ಮಾದುದಾವಸುಸ್ತಸ್ಯ ಪುತ್ರೋಽಭೂನ್ನಂದಿವರ್ಧನಃ ।
ತತಃ ಸುಕೇತುಸ್ತಸ್ಯಾಪಿ ದೇವರಾತೋ ಮಹೀಪತೇ ॥ ೧೪ ॥

ತಸ್ಮಾದ್ಬೃಹದ್ರಥಸ್ತಸ್ಯ ಮಹಾವೀರ್ಯಃ ಸುಧೃತ್ಪಿತಾ ।
ಸುಧೃತೇರ್ಧೃಷ್ಟಕೇತುರ್ವೈ ಹರ್ಯಶ್ವೋಽಥ ಮರುಸ್ತತಃ ॥ ೧೫ ॥

ಮರೋಃ ಪ್ರತೀಪಕಸ್ತಸ್ಮಾಜ್ಜಾತಃ ಕೃತಿರಥೋ ಯತಃ ।
ದೇವಮೀಢಸ್ತಸ್ಯ ಸುತೋ ವಿಶ್ರುತೋಽಥ ಮಹಾಧೃತಿಃ ॥ ೧೬ ॥

ಕೃತಿರಾತಸ್ತತಸ್ತಸ್ಮಾನ್ಮಹಾರೋಮಾಥ ತತ್ಸುತಃ ।
ಸ್ವರ್ಣರೋಮಾ ಸುತಸ್ತಸ್ಯ ಹ್ರಸ್ವರೋಮಾ ವ್ಯಜಾಯತ ॥ ೧೭ ॥

ತತಃ ಸೀರಧ್ವಜೋ ಜಜ್ಞೇ ಯಜ್ಞಾರ್ಥಂ ಕರ್ಷತೋ ಮಹೀಮ್ ।
ಸೀತಾ ಸೀರಾಗ್ರತೋ ಜಾತಾ ತಸ್ಮಾತ್ಸೀರಧ್ವಜಃ ಸ್ಮೃತಃ ॥ ೧೮ ॥

ಕುಶಧ್ವಜಸ್ತಸ್ಯ ಪುತ್ರಸ್ತತೋ ಧರ್ಮಧ್ವಜೋ ನೃಪಃ ।
ಧರ್ಮಧ್ವಜಸ್ಯ ದ್ವೌ ಪುತ್ರೌ ಕೃತಧ್ವಜಮಿತಧ್ವಜೌ ॥ ೧೯ ॥

ಕೃತಧ್ವಜಾತ್ಕೇಶಿಧ್ವಜಃ ಖಾಂಡಿಕ್ಯಸ್ತು ಮಿತಧ್ವಜಾತ್ ।
ಕೃತಧ್ವಜಸುತೋ ರಾಜನ್ನಾತ್ಮವಿದ್ಯಾವಿಶಾರದಃ ॥ ೨೦ ॥

ಖಾಂಡಿಕ್ಯಃ ಕರ್ಮತತ್ತ್ವಜ್ಞೋ ಭೀತಃ ಕೇಶಿಧ್ವಜಾದ್ದ್ರುತಃ ।
ಭಾನುಮಾಂಸ್ತಸ್ಯ ಪುತ್ರೋಽಭೂಚ್ಛತದ್ಯುಮ್ನಸ್ತು ತತ್ಸುತಃ ॥ ೨೧ ॥

ಶುಚಿಸ್ತತ್ತನಯಸ್ತಸ್ಮಾತ್ಸನದ್ವಾಜಸ್ತತೋಽಭವತ್ ।
ಊರ್ಧ್ವಕೇತುಃ ಸನದ್ವಾಜಾದಜೋಽಥ ಪುರುಜಿತ್ಸುತಃ ॥ ೨೨ ॥

ಅರಿಷ್ಟನೇಮಿಸ್ತಸ್ಯಾಪಿ ಶ್ರುತಾಯುಸ್ತತ್ಸುಪಾರ್ಶ್ವಕಃ ।
ತತಶ್ಚಿತ್ರರಥೋ ಯಸ್ಯ ಕ್ಷೇಮಧಿರ್ಮಿಥಿಲಾಧಿಪಃ ॥ ೨೩ ॥

ತಸ್ಮಾತ್ಸಮರಥಸ್ತಸ್ಯ ಸುತಃ ಸತ್ಯರಥಸ್ತತಃ ।
ಆಸೀದುಪಗುರುಸ್ತಸ್ಮಾದುಪಗುಪ್ತೋಽಗ್ನಿಸಂಭವಃ ॥ ೨೪ ॥

ವಸ್ವನಂತೋಽಥ ತತ್ಪುತ್ರೋ ಯುಯುಧೋ ಯತ್ಸುಭಾಷಣಃ ।
ಶ್ರುತಸ್ತತೋ ಜಯಸ್ತಸ್ಮಾದ್ವಿಜಯೋಽಸ್ಮಾದೃತಃ ಸುತಃ ॥ ೨೫ ॥

ಇದಾದ ಬಳಿಕ ರಾಜನು ಇಲ್ಲದಿದ್ದಾಗ ಜನರಲ್ಲಿ ಅರಾಜಕತೆ ಹರಡಿಕೊಂಡೀತು ಎಂದು ಯೋಚಿಸಿದ ಮಹರ್ಷಿಗಳು ನಿಮಿ ರಾಜನ ಶರೀರವನ್ನು ಕಡೆದರು. ಅದರಿಂದ ಓರ್ವ ಕುಮಾರನು ಹುಟ್ಟಿದನು. ॥ ೧೨ ॥ ಅಸಾಧಾರಣವಾದ ರೀತಿಯಲ್ಲಿ ಹುಟ್ಟಿದ ಕಾರಣ ಜನಕನೆಂದೂ, ಪ್ರಾಣವಿಲ್ಲದ ದೇಹದಿಂದ ಹುಟ್ಟಿದ್ದರಿಂದ ವಿದೇಹನೆಂದೂ, ಶರೀರ ಮಂಥನದಿಂದ ಹುಟ್ಟಿದನಾದ್ದರಿಂದ ಮಿಥಿಲನೆಂದೂ ಆ ಕುಮಾರನನ್ನು ಜನರು ಕರೆದರು. ಇವನೇ ಮಿಥಿಲಾಪುರಿಯನ್ನು ನಿರ್ಮಿಸಿದನು. ॥ ೧೩ ॥

ಪರೀಕ್ಷಿತನೇ! ಜನಕನಿಗೆ ಉದಾವಸುವೆಂಬ ಪುತ್ರನು ಹುಟ್ಟಿದನು. ಅವನಿಗೆ ನಂದಿವರ್ಧನನು ಹುಟ್ಟಿದನು. ನಂದಿವರ್ಧನನಿಂದ ಸುಕೇತು, ಅವನಿಗೆ ದೇವರಾತ, ದೇವರಾತನಿಗೆ ಬೃಹದ್ರಥ, ಬೃಹದ್ರಥನಿಗೆ ಮಹಾವೀರ್ಯ, ಮಹಾವೀರ್ಯನಿಗೆ ಸುಧೃತಿ, ಸುಧೃತಿಯಿಂದ ಧೃಷ್ಟಕೇತು, ಧೃಷ್ಟಕೇತುವಿನಿಂದ ಹರ್ಯಶ್ವ, ಅವನಿಗೆ ಮರು ಎಂಬ ಪುತ್ರನು ಹುಟ್ಟಿದನು. ॥ ೧೪–೧೫ ॥ ಮರುವಿನಿಂದ ಪ್ರತೀಪಕ, ಪ್ರತೀಪಕನಿಂದ ಕೃತಿರಥ, ಕೃತಿರಥನಿಂದ ದೇವಮೀಢ, ದೇವಮೀಢನಿಂದ ವಿಶ್ರುತ, ವಿಶ್ರುತನಿಂದ ಮಹಾಧೃತಿಯ ಜನ್ಮವಾಯಿತು. ॥ ೧೬ ॥ ಮಹಾಧೃತಿಗೆ ಕೃತಿರಾತ, ಕೃತಿರಾತನಿಗೆ ಮಹಾರೋಮಾ, ಮಹಾರೋಮನಿಗೆ ಸ್ವರ್ಣರೋಮಾ, ಸ್ವರ್ಣರೋಮನಿಗೆ ಹ್ರಸ್ವರೋಮನು ಮಗನಾದನು. ॥ ೧೭ ॥ ಇದೇ ಹ್ರಸ್ವರೋಮನ ಪುತ್ರ ಸೀರಧ್ವಜ ಮಹಾರಾಜನಾಗಿದ್ದನು. ಅವನು ಯಜ್ಞಕ್ಕಾಗಿ ನೆಲವನ್ನು ಊಳುತ್ತಿರುವಾಗ ನೇಗಿಲಿನ ತುದಿಯಿಂದಾಗಿ ಭೂಮಿಯಿಂದ ಸೀತೆಯು ಜನ್ಮತಾಳಿದಳು. ಇದರಿಂದ ಇವನ ಹೆಸರು ಸೀರಧ್ವಜನೆಂದಾಯಿತು. ॥ ೧೮ ॥ ಸೀರಧ್ವಜನಿಗೆ ಕುಶಧ್ವಜ, ಕುಶಧ್ವಜನಿಗೆ ಧರ್ಮಧ್ವಜ, ಧರ್ಮಧ್ವಜನಿಗೆ ಕೃತಧ್ವಜ ಮತ್ತು ಮಿತಧ್ವಜರೆಂಬ ಇಬ್ಬರು ಪುತ್ರರಾದರು. ॥ ೧೯ ॥ ಕೃತಧ್ವಜನಿಗೆ ಕೇಶಿಧ್ವಜ ಮತ್ತು ಮಿತಧ್ವಜನಿಗೆ ಖಾಂಡಿಕ್ಯ ಹುಟ್ಟಿದ್ದನು. ಕೇಶಿಧ್ವಜನು ಆತ್ಮವಿದ್ಯೆಯಲ್ಲಿ ಮಹಾಪ್ರವೀಣನಾಗಿದ್ದನು. ॥ ೨೦ ॥ ಖಾಂಡಿಕ್ಯನು ಕರ್ಮಕಾಂಡದ ಮರ್ಮಜ್ಞನಾಗಿದ್ದನು. ಅವನು ಕೇಶಿಧ್ವಜನಿಂದ ಭಯಗೊಂಡು ಓಡಿಹೋದನು. ಕೇಶಿಧ್ವಜನ ಪುತ್ರ ಭಾನುಮಾನ್, ಭಾನುಮಂತನಿಗೆ ಶತದ್ಯುಮ್ನ ಮಗ ಹುಟ್ಟಿದನು. ॥ ೨೧ ॥ ಶತದ್ಯುಮ್ನನಿಂದ ಶುಚಿ, ಶುಚಿಯಿಂದ ಸನದ್ವಾಜ, ಸನದ್ವಾಜನಿಂದ ಊರ್ಧ್ವಕೇತು, ಊರ್ಧ್ವಕೇತುವಿನಿಂದ ಅಜ, ಅಜನಿಂದ ಪುರುಜಿತ್, ಪುರುಜಿತ್ತುವಿನಿಂದ ಅರಿಷ್ಟನೇಮಿ, ಅರಿಷ್ಟನೇಮಿಯಿಂದ ಶ್ರುತಾಯು, ಶ್ರುತಾಯುವಿನಿಂದ ಸುಪಾರ್ಶ್ವಕ, ಸುಪಾರ್ಶ್ವಕನಿಂದ ಚಿತ್ರರಥ, ಚಿತ್ರರಥನಿಂದ ಮಿಥಿಲಾಪತಿ ಕ್ಷೇಮಧಿಯ ಜನ್ಮವಾಯಿತು. ॥ ೨೨–೨೩ ॥ ಕ್ಷೇಮಧಿಯಿಂದ ಸಮರಥ, ಸಮರಥನಿಂದ ಸತ್ಯರಥ, ಸತ್ಯರಥನಿಂದ ಉಪಗುರು, ಉಪಗುರುವಿನಿಂದ ಉಪಗುಪ್ತನೆಂಬ ಪುತ್ರನಾದನು. ಇವನು ಅಗ್ನಿಯ ಅಂಶನಾಗಿದ್ದನು. ॥ ೨೪ ॥ ಉಪಗುಪ್ತನಿಂದ ವಸ್ವನಂತ, ವಸ್ವನಂತನಿಂದ ಯುಯುಧ, ಯುಯುಧನಿಂದ ಸುಭಾಷಣ, ಸುಭಾಷಣನಿಂದ ಶ್ರುತ, ಶ್ರುತನಿಂದ ಜಯ, ಜಯನಿಂದ ವಿಜಯ, ವಿಜಯನಿಂದ ಋತನೆಂಬ ಪುತ್ರನು ಹುಟ್ಟಿದನು. ॥ ೨೫ ॥

ಶುನಕಸ್ತತ್ಸುತೋ ಜಜ್ಞೇ ವೀತಹವ್ಯೋ ಧೃತಿಸ್ತತಃ ।
ಬಹುಲಾಶ್ವೋ ಧೃತೇಸ್ತಸ್ಯ ಕೃತಿರಸ್ಯ ಮಹಾವಶೀ ॥ ೨೬ ॥

ಏತೇ ವೈ ಮೈಥಿಲಾ ರಾಜನ್ನಾತ್ಮವಿದ್ಯಾವಿಶಾರದಾಃ ।
ಯೋಗೇಶ್ವರಪ್ರಸಾದೇನ ದ್ವಂದ್ವೈರ್ಮುಕ್ತಾ ಗೃಹೇಷ್ವಪಿ ॥ ೨೭ ॥

ಋತನಿಗೆ ಶುನಕ, ಶುನಕನಿಗೆ ವೀತಹವ್ಯ, ವೀತಹವ್ಯನಿಂದ ಧೃತಿ, ಧೃತಿಯಿಂದ ಬಹುಲಾಶ್ವ, ಬಹುಲಾಶ್ವನಿಂದ ಕೃತಿ, ಕೃತಿಗೆ ಮಹಾವಶೀ ಎಂಬ ಪುತ್ರನು ಜನಿಸಿದನು. ॥ ೨೬ ॥ ಪರೀಕ್ಷಿತನೇ ! ಇವರೆಲ್ಲರೂ ಮಿಥಿಲನ ವಂಶದಲ್ಲಿ ಹುಟ್ಟಿದ್ದರಿಂದ ಮೈಥಿಲರೆಂದು ಕರೆಸಿಕೊಂಡರು. ಇವರೆಲ್ಲರೂ ಆತ್ಮಜ್ಞಾನದಿಂದ ಸಂಪನ್ನರಾಗಿದ್ದು ಗೃಹಸ್ಥಾಶ್ರಮದಲ್ಲೇ ಇದ್ದು ಸುಖ-ದುಃಖಾದಿ ದ್ವಂದ್ವಗಳಿಂದ ಮುಕ್ತರಾಗಿದ್ದರು. ಯಾಜ್ಞವಲ್ಕ್ಯಾದಿ ಮಹಾ-ಮಹಾ ಯೋಗೇಶ್ವರರ ಮಹಾನ್ ಕೃಪೆಯು ಇವರ ಮೇಲೆ ಇತ್ತು. ॥ ೨೭ ॥

*ಹದಿಮೂರನೆಯ ಅಧ್ಯಾಯವು ಮುಗಿಯಿತು. ॥ ೧೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ
ನಿಮಿವಂಶಾನುವರ್ಣನಂ ನಾಮ ತ್ರಯೋದಶೋಽಧ್ಯಾಯಃ ॥ ೧೩ ॥

# ಹದಿನಾಲ್ಕನೆಯ ಅಧ್ಯಾಯ

## ಚಂದ್ರವಂಶದ ವರ್ಣನೆ

ಶ್ರೀಶುಕ ಉವಾಚ

ಅಥಾತಃ ಶ್ರೂಯತಾಂ ರಾಜನ್ವಂಶಃ ಸೋಮಸ್ಯ ಪಾವನಃ ।
ಯಸ್ಮಿನ್ನೈಲಾದಯೋ ಭೂಪಾಃ ಕೀರ್ತ್ಯಂತೇ ಪುಣ್ಯಕೀರ್ತಯಃ ॥ ೧ ॥

ಸಹಸ್ರಶಿರಸಃ ಪುಂಸೋ ನಾಭಿಹ್ರದಸರೋರುಹಾತ್ ।
ಜಾತಸ್ಯಾಸೀತ್ಸುತೋ ಧಾತುರತ್ರಿಃ ಪಿತೃಸಮೋ ಗುಣೈಃ ॥ ೨ ॥

ತಸ್ಯ ದೃಗ್ಭ್ಯೋಽಭವತ್ಪುತ್ರಃ ಸೋಮೋಽಮೃತಮಯಃ ಕಿಲ ।
ವಿಪ್ರೌಷಧ್ಯುಡುಗಣಾನಾಂ ಬ್ರಹ್ಮಣಾ ಕಲ್ಪಿತಃ ಪತಿಃ ॥ ೩ ॥

ಸೋಽಯಜದ್ರಾಜಸೂಯೇನ ವಿಜಿತ್ಯ ಭುವನತ್ರಯಮ್ ।
ಪತ್ನೀಂ ಬೃಹಸ್ಪತೇರ್ದರ್ಪಾತ್ತಾರಾಂ ನಾಮಾಹರದ್ಬಲಾತ್ ॥ ೪ ॥

ಯದಾ ಸ ದೇವಗುರುಣಾ ಯಾಚಿತೋಽಭೀಕ್ಷ್ಣಶೋ ಮದಾತ್ ।
ನಾತ್ಯಜತ್ತತ್ಕೃತೇ ಜಜ್ಞೇ ಸುರದಾನವವಿಗ್ರಹಃ ॥ ೫ ॥

ಶುಕ್ರೋ ಬೃಹಸ್ಪತೇರ್ದ್ವೇಷಾದಗ್ರಹೀತ್ಸಾಸುರೋಡುಪಮ್ ।
ಹರೋ ಗುರುಸುತಂ ಸ್ನೇಹಾತ್ಸರ್ವಭೂತಗಣಾವೃತಃ ॥ ೬ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ಪರೀಕ್ಷಿತನೇ ! ಈಗ ನಾನು ನಿನಗೆ ಪರಮ ಪವಿತ್ರವಾದ ಚಂದ್ರವಂಶದ ಚರಿತ್ರೆಯನ್ನು ಹೇಳುತ್ತೇನೆ. ಈ ವಂಶದಲ್ಲಿ ಪುರೂರವನೇ ಮೊದಲಾದ ದೊಡ್ಡ-ದೊಡ್ಡ ರಾಜರ ಪವಿತ್ರವಾದ ಕೀರ್ತಿಯ ಸಂಕೀರ್ತನವಿದೆ. ॥ ೧ ॥ ಸಹಸ್ರಶೀರ್ಷನಾದ ವಿರಾಟ್ಪುರುಷನಾದ ಶ್ರೀಮನ್ನಾರಾಯಣನ ನಾಭಿಕಮಲದಿಂದ ಚತುರ್ಮುಖಬ್ರಹ್ಮನು ಆವಿರ್ಭವಿಸಿದನು. ಬ್ರಹ್ಮನಿಗೆ ಅತ್ರಿಯು ಮಗನಾದನು. ಅವನು ತನ್ನ ಸದ್ಗುಣಗಳಿಂದ ಬ್ರಹ್ಮನಿಗೆ ಸಮಾನನೇ ಆಗಿದ್ದನು. ॥ ೨ ॥ ಆ ಅತ್ರಿಮಹರ್ಷಿಯ ಕಣ್ಣುಗಳಿಂದ ಅಮೃತಮಯ ಚಂದ್ರನ ಜನ್ಮವಾಯಿತು. ಬ್ರಹ್ಮದೇವರು ಚಂದ್ರನನ್ನು ಬ್ರಾಹ್ಮಣರಿಗೂ, ಓಷಧಿಗಳಿಗೂ, ನಕ್ಷತ್ರಗಳಿಗೂ ಅಧಿಪತಿಯನ್ನಾಗಿಸಿದನು. ॥ ೩ ॥ ಚಂದ್ರನು ಮೂರು ಲೋಕಗಳನ್ನೂ ಜಯಿಸಿ ರಾಜಸೂಯ ಯಜ್ಞವನ್ನು ಮಾಡಿದನು. ಇದರಿಂದ ಕೊಬ್ಬಿದ ಚಂದ್ರನು ಬೃಹಸ್ಪತಿಯ ಪತ್ನಿಯಾದ ತಾರಾದೇವಿಯನ್ನು ಬಲಾತ್ಕಾರಪೂರ್ವಕವಾಗಿ ಅಪಹರಿಸಿದನು. ॥ ೪ ॥ ದೇವಗುರು ಬೃಹಸ್ಪತಿಯು ತನ್ನ ಪತ್ನಿಯನ್ನು ಕಳುಹಿಸಿಕೊಡಲು ಹಲವುಬಾರಿ ಚಂದ್ರನಿಗೆ ಹೇಳಿದನು. ಆದರೆ ಮದದಿಂದ ಕೊಬ್ಬಿಹೋಗಿದ್ದ ಚಂದ್ರನು ಆಕೆಯನ್ನು ಹಿಂದಕ್ಕೆ ಕಳಿಸಲೇ ಇಲ್ಲ. ಇಂತಹ ಸನ್ನಿವೇಶದಲ್ಲಿ ಇದೇ ಕಾರಣದಿಂದ ದೇವತೆಗಳಿಗೂ, ದಾನವರಿಗೂ ಘೋರಸಂಗ್ರಾಮ ಏರ್ಪಟ್ಟಿತು. ॥ ೫ ॥ ಶುಕ್ರಾಚಾರ್ಯರು ಬೃಹಸ್ಪತ್ಯಾಚಾರ್ಯರ ಮೇಲಿನ ದ್ವೇಷದಿಂದ ಅಸುರರೊಡನೆ ಚಂದ್ರನ ಪಕ್ಷವನ್ನು ವಹಿಸಿದರು. ಮಹಾದೇವನು ಸ್ನೇಹವಶನಾಗಿ ಸಮಸ್ತ ಭೂತಗಣಗಳೊಂದಿಗೆ ತನ್ನ ವಿದ್ಯಾಗುರು ಅಂಗಿರಸ್ಸುವಿನ ಪುತ್ರ ಬೃಹಸ್ಪತಿಯ ಪಕ್ಷವನ್ನು ಸೇರಿದನು. ॥ ೬ ॥

ಸರ್ವದೇವಗಣೋಪೇತೋ ಮಹೇಂದ್ರೋ ಗುರುಮನ್ವಯಾತ್ ।
ಸುರಾಸುರವಿನಾಶೋಽಭೂತ್ ಸಮರಸ್ತಾರಕಾಮಯಃ
॥ ೭ ॥

ನಿವೇದಿತೋಽಥಾಂಗಿರಸಾ ಸೋಮಂ ನಿರ್ಭರ್ತ್ಸ್ಯ ವಿಶ್ವಸೃತ್ ।
ತಾರಾಂ ಸ್ವಭರ್ತ್ರೇ ಪ್ರಾಯಚ್ಛದಂತರ್ವತ್ನೀಮವೈತ್ಪತಿಃ
॥ ೮ ॥

ತ್ಯಜ ತ್ಯಜಾಶು ದುಷ್ಪ್ರಜ್ಞೇ ಮತ್ಕ್ಷೇತ್ರಾದಾಹಿತಂ ಪರೈಃ ।
ನಾಹಂ ತ್ವಾಂ ಭಸ್ಮಸಾತ್ಕುರ್ಯಾಂ ಸ್ತ್ರಿಯಂ ಸಾಂತಾನಿಕಃ ಸತಿ
॥ ೯ ॥

ತತ್ಯಾಜ ವ್ರೀಡಿತಾ ತಾರಾ ಕುಮಾರಂ ಕನಕಪ್ರಭಮ್ ।
ಸ್ಪೃಹಾಮಾಂಗಿರಸಶ್ಚಕ್ರೇ ಕುಮಾರೇ ಸೋಮ ಏವ ಚ
॥ ೧೦ ॥

ಮಮಾಯಂ ನ ತವೇತ್ಯುಚ್ಚೈಸ್ತಸ್ಮಿನ್ವಿವದಮಾನಯೋಃ ।
ಪಪ್ರಚ್ಛುರೃಷಯೋ ದೇವಾ ನೈವೋಚೇ ವ್ರೀಡಿತಾ ತು ಸಾ
॥ ೧೧ ॥

ಕುಮಾರೋ ಮಾತರಂ ಪ್ರಾಹ ಕುಪಿತೋಽಲೀಕಲಜ್ಜಯಾ ।
ಕಿಂ ನ ವೋಚಸ್ಯಸದ್ವೃತ್ತೇ ಆತ್ಮಾವದ್ಯಂ ವದಾಶು ಮೇ
॥ ೧೨ ॥

ಬ್ರಹ್ಮಾ ತಾಂ ರಹ ಆಹೂಯ ಸಮಪ್ರಾಕ್ಷೀಚ್ಚ ಸಾಂತ್ವಯನ್ ।
ಸೋಮಸ್ಯೇತ್ಯಾಹ ಶನಕೈಃ ಸೋಮಸ್ತಂ ತಾವದಗ್ರಹೀತ್
॥ ೧೩ ॥

ತಸ್ಯಾತ್ಮಯೋನಿರಕೃತ ಬುಧ ಇತ್ಯಭಿಧಾಂ ನೃಪ ।
ಬುದ್ಧ್ಯಾ ಗಂಭೀರಯಾ ಯೇನ ಪುತ್ರೇಣಾಪೋಡುರಾಣ್ಮುದಮ್
॥ ೧೪ ॥

ತತಃ ಪುರೂರವಾ ಜಜ್ಞೇ ಇಲಾಯಾಂ ಯ ಉದಾಹೃತಃ ।
ತಸ್ಯ ರೂಪಗುಣೌದಾರ್ಯಶೀಲದ್ರವಿಣವಿಕ್ರಮಾನ್
॥ ೧೫ ॥

ದೇವೇಂದ್ರನೂ ಕೂಡ ಸಮಸ್ತ ದೇವತೆಗಳೊಂದಿಗೆ ತನ್ನ ಗುರುವಾದ ಬೃಹಸ್ಪತಿಯ ಪಕ್ಷವನ್ನೇ ವಹಿಸಿದನು. ಈ ಪ್ರಕಾರ ತಾರೆಯ ನಿಮಿತ್ತದಿಂದ ದೇವಾಸುರರಲ್ಲಿ ಸಂಹಾರಕ್ಕೆ ಕಾರಣವಾದ ಘೋರ ಸಂಗ್ರಾಮವು ಪ್ರಾರಂಭವಾಯಿತು. ॥ ೭ ॥

ಬಳಿಕ ಅಂಗೀರಸ ಮಹರ್ಷಿಯು ಬ್ರಹ್ಮದೇವರ ಬಳಿಗೆ ಬಂದು ಸರ್ವವಿನಾಶಕರವಾದ ಈ ಯುದ್ಧವನ್ನು ನಿಲ್ಲಿಸುವಂತೆ ಪ್ರಾರ್ಥಿಸಿಕೊಂಡನು. ವಿಶ್ವಕರ್ತೃವಾದ ಬ್ರಹ್ಮನು ಚಂದ್ರನನ್ನು ಗದರಿಸಿ ತಾರಾದೇವಿಯನ್ನು ಆಕೆಯ ಪತಿಯಾದ ಬೃಹಸ್ಪತಿಗೆ ಒಪ್ಪಿಸುವಂತೆ ಮಾಡಿದನು. ತಾರೆಯು ಗರ್ಭವತಿಯಾಗಿರುವಳೆಂಬುದನ್ನು ಅರಿತಾಗ ಬೃಹಸ್ಪತಿಯು ತನ್ನ ಪತ್ನಿಗೆ ಹೇಳಿದನು – ॥ ೮ ॥ 'ಎಲೈ ದುಷ್ಟಳೇ! ನನ್ನ ಕ್ಷೇತ್ರದಲ್ಲಿ ಬೇರೆಯವರ ಗರ್ಭವಿದೆ. ಅದನ್ನು ನೀನೀಗಲೇ ಪರಿತ್ಯಜಿಸು. ನಿನ್ನಲ್ಲಿ ಕ್ಷಣಮಾತ್ರವೂ ಅದು ಇರಬಾರದು. ಭಯಪಡಬೇಡ, ನಾನು ನಿನ್ನನ್ನು ದಹಿಸಹೋಗುವುದಿಲ್ಲ, ಏಕೆಂದರೆ, ನೀನು ಸ್ತ್ರೀಯಾಗಿರುವೆ. ಮೇಲಾಗಿ ನಿನ್ನಲ್ಲಿ ಸಂತಾನ ಪಡೆಯುವ ಆಶಯವೂ ನನಗಿದೆ. ದೇವಿಯಾದ್ದರಿಂದ ನೀನು ನಿರ್ದೋಷಳೂ ಆಗಿರುವೆ. ॥ ೯ ॥ ಪತಿಯ ಮಾತನ್ನು ಕೇಳಿ ತಾರೆಯು ಅತ್ಯಂತ ನಾಚಿಕೊಂಡಳು. ಆಕೆಯು ಚಿನ್ನದ ಕಾಂತಿಯಿಂದ ಕೂಡಿದ ಶಿಶುವನ್ನು ಒಡನೆಯೇ ವಿಸರ್ಜಿಸಿದಳು. ಶಿಶುವಿನ ದಿವ್ಯಕಾಂತಿಯನ್ನು ನೋಡಿ ಬೃಹಸ್ಪತಿ ಮತ್ತು ಚಂದ್ರ ಇಬ್ಬರೂ ಮೋಹಿತರಾಗಿ ಈ ಶಿಶುವು ತನಗೆ ಸೇರಬೇಕೆಂದು ಆಶಿಸಿದರು. ॥ ೧೦ ॥ ಆಶಿಸಿದ್ದು ಮಾತ್ರವಲ್ಲ 'ಇದು ನನ್ನ ಮಗು, ನಿನ್ನದಲ್ಲ' ಎಂದು ಗಟ್ಟಿಯಾಗಿ ಜಗಳಾಡಿದರು. ಈ ವಿವಾದವನ್ನು ಬಗೆಹರಿಸಲು ದೇವತೆಗಳು, ಋಷಿಗಳು ತಾರೆಯ ಬಳಿಯಲ್ಲಿ ಕೇಳಿದರು – 'ಈ ಮಗು ಯಾರಿಗೆ ಸೇರಿದುದು' ಆದರೆ ತಾರೆಯು ನಾಚಿಕೆಯಿಂದಾಗಿ ಏನೂ ಹೇಳಲಿಲ್ಲ. ॥ ೧೧ ॥ ತನ್ನ ತಾಯಿಯ ತೋರಿಕೆಯ ಲಜ್ಜೆಯಿಂದ ಕುಪಿತನಾದ ಆ ಬಾಲಕನು ತಾಯಿಗೆ ಹೇಳಿದನು – 'ಎಲೈ ದುಷ್ಟಳೇ! ನೀನೇಕೆ ಮಾತಾಡುತ್ತಿಲ್ಲ? ಕುತ್ಸಿತವಾದ ನಿನ್ನ ನಡವಳಿಕೆಯನ್ನು ಬೇಗನೇ ನನಗೆ ಹೇಳು. ಯಾರ ಮಗನೆಂದು ನಾನಾದರೂ ತಿಳಿಯಬೇಡವೇ? ॥ ೧೨ ॥ ಅದೇ ಸಮಯದಲ್ಲಿ ಬ್ರಹ್ಮದೇವರು ತಾರೆಯನ್ನು ಏಕಾಂತಸ್ಥಳಕ್ಕೆ ಕೊಂಡೊಯ್ದು ಆಕೆಯನ್ನು ಸಾಂತ್ವನಗೊಳಿಸಿ ಕೇಳಿದರು. ಆಗ ತಾರೆಯು ಮೆಲ್ಲನೆ 'ಇದು ಚಂದ್ರನಿಗೆ ಸೇರಿದುದು' ಎಂದು ಹೇಳಿದಳು. ಇದರಿಂದಾಗಿ ಚಂದ್ರನು ಆ ಬಾಲಕನನ್ನು ಕರೆದುಕೊಂಡು ಹೊರಟನು. ॥ ೧೩ ॥ ಪರೀಕ್ಷಿತನೇ! ಬ್ರಹ್ಮದೇವರು ಆ ಬಾಲಕನಿಗೆ ಬುಧನೆಂದು ಹೆಸರಿಟ್ಟರು. ಏಕೆಂದರೆ, ಅವನ ಬುದ್ಧಿಯು ಬಹಳ ಗಂಭೀರವಾಗಿದ್ದಿತು. ಇಂತಹ ಪುತ್ರನನ್ನು ಪಡೆದು ಚಂದ್ರನಿಗೆ ಬಹಳ ಆನಂದವಾಯಿತು. ॥ ೧೪ ॥

ಪರೀಕ್ಷಿದ್ರಾಜನೇ! ಬುಧನಿಗೆ ಇಲೆಯ ಗರ್ಭದಿಂದ ಪುರೂರವನು ಹುಟ್ಟಿದನು ಎಂಬುದನ್ನೂ ನಾನು ಹಿಂದೆಯೇ ಹೇಳಿಬಿಟ್ಟಿರುವೆನು. ಒಂದು ದಿನ ದೇವೇಂದ್ರನ ಸಭೆಯಲ್ಲಿ ದೇವಋಷಿಗಳಾದ ನಾರದರು ಬುಧನ ಪುತ್ರನಾದ ಪುರೂರವನ ರೂಪ, ಗುಣ, ಉದಾರತೆ, ಶೀಲ–ಸ್ವಭಾವ, ಧನ–ಸಂಪತ್ತು, ಪರಾಕ್ರಮ ಇವುಗಳನ್ನು

ಶ್ರುತ್ವೋರ್ವಶೀಂದ್ರಭವನೇ ಗೀಯಮಾನಾನ್ಸುರರ್ಷಿಣಾ ।
ತದಂತಿಕಮುಪೇಯಾಯ ದೇವೀ ಸ್ಮರಶರಾರ್ದಿತಾ ॥ ೧೬ ॥

ಮಿತ್ರಾವರುಣಯೋಃ ಶಾಪಾದಾಪನ್ನಾನರಲೋಕತಾಮ್ ।
ನಿಶಮ್ಯಪುರುಷಶ್ರೇಷ್ಠಂ ಕಂದರ್ಪಮಿವ ರೂಪಿಣಮ್ ।
ಧೃತಿಂ ವಿಷ್ಟಭ್ಯ ಲಲನಾ ಉಪತಸ್ಥೇ ತದಂತಿಕೇ ॥ ೧೭ ॥

ಸ ತಾಂ ವಿಲೋಕ್ಯ ನೃಪತಿರ್ಹರ್ಷೇಣೋತ್ಫುಲ್ಲಲೋಚನಃ ।
ಉವಾಚ ಶ್ಲಕ್ಷ್ಣಯಾ ವಾಚಾ ದೇವೀಂ ಹೃಷ್ಟತನೂರುಹಃ ॥ ೧೮ ॥

*ರಾಜೋವಾಚ*

ಸ್ವಾಗತಂ ತೇ ವರಾರೋಹೇ ಆಸ್ಯತಾಂ ಕರವಾಮ ಕಿಮ್ ।
ಸಂರಮಸ್ವ ಮಯಾ ಸಾಕಂ ರತಿರ್ನೌ ಶಾಶ್ವತೀಃ ಸಮಾಃ ॥ ೧೯ ॥

*ಉರ್ವಶ್ಯುವಾಚ*

ಕಸ್ಯಾಸ್ತ್ವಯಿ ನ ಸಜ್ಜೇತ ಮನೋ ದೃಷ್ಟಿಶ್ಚ ಸುಂದರ ।
ಯದಂಗಾಂತರಮಾಸಾದ್ಯ ಚ್ಯವತೇ ಹ ರಿರಂಸಯಾ ॥ ೨೦ ॥

ಏತಾವುರಣಕೌ ರಾಜನ್ ನ್ಯಾಸೌ ರಕ್ಷಸ್ವ ಮಾನದ ।
ಸಂರಂಸ್ಯೇ ಭವತಾ ಸಾಕಂ ಶ್ಲಾಘ್ಯಃ ಸ್ತ್ರೀಣಾಂ ವರಃ ಸ್ಮೃತಃ ॥ ೨೧ ॥

ಘೃತಂ ಮೇ ವೀರ ಭಕ್ಷ್ಯಂ ಸ್ಯಾನ್ನೇಕ್ಷೇ ತ್ವಾನ್ಯತ್ರ ಮೈಥುನಾತ್ ।
ವಿವಾಸಸಂ ತತ್ತಥೇತಿ ಪ್ರತಿಪೇದೇ ಮಹಾಮನಾಃ ॥ ೨೨ ॥

ಅಹೋ ರೂಪಮಹೋ ಭಾವೋ ನರಲೋಕವಿಮೋಹನಮ್ ।
ಕೋ ನ ಸೇವೇತ ಮನುಜೋ ದೇವೀಂ ತ್ವಾಂ ಸ್ವಯಮಾಗತಾಮ್ ॥ ೨೩ ॥

ತಯಾ ಸ ಪುರುಷಶ್ರೇಷ್ಠೋ ರಮಯಂತ್ಯಾ ಯಥಾರ್ಹತಃ ।
ರೇಮೇ ಸುರವಿಹಾರೇಷು ಕಾಮಂ ಚೈತ್ರರಥಾದಿಷು ॥ ೨೪ ॥

ಕೊಂಡಾಡಿದರು. ಇದನ್ನು ಕೇಳಿದ ಊರ್ವಶಿಯ ಮನಸ್ಸಿನಲ್ಲಿ ಕಾಮಭಾವವು ಉದಯಿಸಿತು. ಆದರಿಂದ ಪೀಡಿತಳಾಗಿ ಆ ದೇವಾಂಗನೆಯು ಪುರೂರವನ ಬಳಿಗೆ ಬಂದುಬಿಟ್ಟಳು. ॥ ೧೫–೧೬ ॥ ಮಿತ್ರಾವರುಣರು ಊರ್ವಶಿಗೆ ಕೊಟ್ಟಿದ್ದ ಶಾಪವೂ ಕೂಡ ಅವಳು ಭೂಲೋಕಕ್ಕೆ ಬರಲು ಒಂದು ಕಾರಣವಾಗಿದ್ದರೂ, ಪುರುಷಶಿರೋಮಣಿ ಪುರೂರವನು ಮೂರ್ತಿಮಂತ ಮನ್ಮಥನೇ ಆಗಿರುವನೆಂದು ಕೇಳಿ ಸುರಸುಂದರಿಯಾದ ಊರ್ವಶಿಯು ಧೈರ್ಯ ವಹಿಸಿ ತಾನಾಗಿಯೇ ಪುರೂರವನ ಬಳಿಗೆ ಆಗಮಿಸಿದಳು. ॥ ೧೭ ॥ ದೇವಾಂಗನೆಯಾದ ಊರ್ವಶಿಯನ್ನು ಕಂಡು ಪುರೂರವರಾಜನ ಕಣ್ಣುಗಳು ಅರಳಿದವು. ಶರೀರವು ರೋಮಾಂಚನವಾಯಿತು. ಅವನು ಸವಿಮಾತುಗಳಿಂದ ಇಂತೆಂದನು – ॥ ೧೮ ॥

**ರಾಜಾ ಪುರೂರವನು ಕೇಳಿದನು** – ಎಲೈ ಸುಂದರಿಯೇ! ನಿನ್ನನ್ನು ನಾನು ಸ್ವಾಗತಿಸುತ್ತೇನೆ. ಇಲ್ಲಿಯೇ ನನ್ನ ಬಳಿಯಲ್ಲಿ ಕುಳಿತುಕೋ. ನಾನು ನಿನಗೇನು ಸೇವೆ ಮಾಡಲಿ? ಒಲಿದು ಬಂದಿರುವ ಅರಗಿಣಿಯೇ! ನನ್ನೊಡನೆ ವಿಹರಿಸು. ನಮ್ಮಿಬ್ಬರ ಈ ವಿಹಾರವು ಅನಂತಕಾಲದವರೆಗೂ ನಡೆಯುತ್ತಲೇ ಇರಲಿ. ॥ ೧೯ ॥

**ಊರ್ವಶಿಯು ಹೇಳಿದಳು** – ಸುಂದರಾಂಗನೇ! ನೀನು ಸೌಂದರ್ಯದ ಮೂರ್ತಸ್ವರೂಪನಾಗಿರುವೆ. ದೃಷ್ಟಿ ಮತ್ತು ಮನಸ್ಸುಗಳನ್ನು ನಿನ್ನಂತಹ ಕಡುಚೆಲುವನಲ್ಲಿ ಲೀನಗೊಳಿಸದೆ ಇರುವ ಕಾಮಿನಿಯರು ಯಾರಿದ್ದಾರೆ? ನಿನ್ನ ಸಮೀಪಕ್ಕೆ ಬಂದಿರುವ ನನ್ನ ಮನಸ್ಸು ನಿನ್ನೊಡನೆ ಕ್ರೀಡಿಸಲು ತವಕಪಡುತ್ತಿದೆ. ॥ ೨೦ ॥ ರಾಜನೇ! ಯಾವ ಪುರುಷನು ರೂಪದಿಂದಲೂ, ಗುಣದಿಂದಲೂ, ಪ್ರಶಂಸನೀಯನಾಗಿರುವನೋ ಅಂತಹವನೇ ಸ್ತ್ರೀಯರಿಗೆ ಅಭೀಷ್ಟನಾಗಿರುತ್ತಾನೆ. ಆದುದರಿಂದ ನಾನು ಅವಶ್ಯವಾಗಿ ನಿನ್ನ ಅಭೀಷ್ಟವನ್ನು ಈಡೇರಿಸಿಕೊಡುತ್ತೇನೆ. ಆದರೆ ಪ್ರಿಯತಮನೇ! ನನ್ನದೊಂದು ಸಣ್ಣ ನಿಬಂಧನೆಯಿದೆ. ನಾನು ನಿನ್ನಲ್ಲಿ ಅಡವಾಗಿ ಎರಡು ಮೇಕೆಗಳನ್ನು ಒಪ್ಪಿಸುತ್ತೇನೆ. ನೀನು ಅವನ್ನು ರಕ್ಷಿಸಬೇಕು. ॥ ೨೧ ॥ ವೀರಶಿರೋಮಣಿಯೇ! ನಾನು ಕೇವಲ ತುಪ್ಪವನ್ನು ಮಾತ್ರ ತಿನ್ನುವೆನು. ಮೈಥುನದ ಸಮಯವಲ್ಲದೆ ಬೇರೆ ಯಾವ ಸಮಯದಲ್ಲೂ ನಿನ್ನನ್ನು ವಿವಸ್ತ್ರನಾಗಿ ನೋಡಲು ಅವಕಾಶವಿರಬಾರದು. ಪುರೂರವನು 'ಹಾಗೆಯೇ ಆಗಲಿ' ಎಂದು ಹೇಳಿ ಅವಳ ನಿಬಂಧನೆಯನ್ನು ಸ್ವೀಕರಿಸಿದನು. ॥ ೨೨ ॥ ಮತ್ತೆ ಊರ್ವಶಿಯ ಬಳಿ ಹೇಳಿದನು – ಆಹಾ! ಎಂತಹ ರೂಪ! ಎಂತಹ ಭಾವ! ಎಂತಹ ಪ್ರೀತಿ! ಎಂತಹ ವಿಶ್ವಾಸ! ಇವೆಲ್ಲವು ಮನುಷ್ಯಲೋಕವನ್ನೇ ಮೋಹಿತಗೊಳಿಸುವಂತಹುದು. ದೇವೀ! ಕೃಪೆಮಾಡಿ ನೀನಾಗಿ ಇಲ್ಲಿಗೆ ಬಂದಿರುವೆ. ಹಾಗಿರುವಾಗ ನಿನ್ನನ್ನು ಸೇವಿಸದ ಮನುಷ್ಯನು ಯಾರು ತಾನೇ ಇರಬಲ್ಲನು? ॥ ೨೩ ॥

ಪರೀಕ್ಷಿತನೇ! ಆಗ ಊರ್ವಶಿಯು ಕಾಮಶಾಸ್ತ್ರಾನುಸಾರವಾಗಿ ಪುರುಷಶ್ರೇಷ್ಠ ಪುರೂರವನೊಂದಿಗೆ ವಿಹರಿಸತೊಡಗಿದಳು. ಅವನೂ ಕೂಡ ದೇವತೆಗಳ ವಿಹಾರಸ್ಥಳವಾದ ಚೈತ್ರರಥ, ನಂದನವನ ಮೊದಲಾದ ಉಪವನಗಳಲ್ಲಿ ಅವಳೊಂದಿಗೆ ಸ್ವಚ್ಛಂದವಾಗಿ ವಿಹರಿಸಿದನು. ॥ ೨೪ ॥

ರಮಮಾಣಸ್ತಯಾ ದೇವ್ಯಾ ಪದ್ಮಕಿಂಜಲ್ಕಗಂಧಯಾ ।
ತನ್ಮುಖಾಮೋದಮುಷಿತೋ ಮುಮುದೇಽಹರ್ಗಣಾನ್ಬಹೂನ್
॥ ೨೫ ॥

ಅಪಶ್ಯನ್ನುರ್ವಶೀಮಿಂದ್ರೋ ಗಂಧರ್ವಾನ್ಸಮಚೋದಯತ್ ।
ಉರ್ವಶೀರಹಿತಂ ಮಹ್ಯಮಾಸ್ಥಾನಂ ನಾತಿಶೋಭತೇ
॥ ೨೬ ॥

ತೇ ಉಪೇತ್ಯ ಮಹಾರಾತ್ರೇ ತಮಸಿ ಪ್ರತ್ಯುಪಸ್ಥಿತೇ ।
ಉರ್ವಶ್ಯಾ ಉರಣೌ ಜಹ್ರುರ್ನ್ಯಸ್ತೌ ರಾಜನಿ ಜಾಯಯಾ
॥ ೨೭ ॥

ನಿಶಮ್ಯಾಕ್ರಂದಿತಂ ದೇವೀ ಪುತ್ರಯೋರ್ನೀಯಮಾನಯೋಃ ।
ಹತಾಸ್ಮ್ಯಹಂ ಕುನಾಥೇನ ನಪುಂಸಾ ವೀರಮಾನಿನಾ
॥ ೨೮ ॥

ಯದ್ವಿಶ್ರಂಭಾದಹಂ ನಷ್ಟಾ ಹೃತಾಪತ್ಯಾ ಚ ದಸ್ಯುಭಿಃ ।
ಯಃ ಶೇತೇ ನಿಶಿ ಸಂತ್ರಸ್ತೋ ಯಥಾ ನಾರೀ ದಿವಾ ಪುಮಾನ್
॥ ೨೯ ॥

ಇತಿ ವಾಕ್ಸಾಯಕೈರ್ಬಿದ್ಧಃ ಪ್ರತೋತ್ತ್ರೈರಿವ ಕುಂಜರಃ ।
ನಿಶಿ ನಿಸ್ತ್ರಿಂಶಮಾದಾಯ ವಿವಸ್ತ್ರೋಽಭ್ಯದ್ರವದ್ರುಷಾ
॥ ೩೦ ॥

ತೇ ವಿಸೃಜ್ಯೋರಣೌ ತತ್ರ ವ್ಯದ್ಯೋತಂತ ಸ್ಮ ವಿದ್ಯುತಃ ।
ಆದಾಯ ಮೇಷಾವಾಯಾಂತಂ ನಗ್ನಮೈಕ್ಷತ ಸಾ ಪತಿಮ್
॥ ೩೧ ॥

ಐಲೋಽಪಿ ಶಯನೇ ಜಾಯಾಮಪಶ್ಯನ್ವಿಮನಾ ಇವ ।
ತಚ್ಚಿತ್ತೋ ವಿಹ್ವಲಃ ಶೋಚನ್ಬಭ್ರಾಮೋನ್ಮತ್ತವನ್ಮಹೀಮ್
॥ ೩೨ ॥

ಸ ತಾಂ ವೀಕ್ಷ್ಯ ಕುರುಕ್ಷೇತ್ರೇ ಸರಸ್ವತ್ಯಾಂ ಚ ತತ್ಸಖೀಃ ।
ಪಂಚ ಪ್ರಹೃಷ್ಟವದನಾಃ ಪ್ರಾಹ ಸೂಕ್ತಂ ಪುರೂರವಾಃ
॥ ೩೩ ॥

ಅಹೋ ಜಾಯೇ ತಿಷ್ಠ ತಿಷ್ಠ ಘೋರೇ ನ ತ್ಯಕ್ತುಮರ್ಹಸಿ ।
ಮಾಂ ತ್ವಮದ್ಯಾಪ್ಯನಿರ್ವೃತ್ಯ ವಚಾಂಸಿ ಕೃಣವಾವಹೈ
॥ ೩೪ ॥

ದೇವಿ ಊರ್ವಶಿಯ ಶರೀರದಿಂದ ಕಮಲಕೇಸರದಂತಹ ಸುಗಂಧವು ಸೂಸುತ್ತಿತ್ತು. ಅವಳೊಡನೆ ಪುರೂರವನು ಅನೇಕ ವರ್ಷಗಳ ಕಾಲ ಆನಂದವಾಗಿ ವಿಹರಿಸಿದನು. ಅವನು ಆಕೆಯ ಮುಖಸುರಭಿಯಿಂದ ಮರುಳಾಗಿ ಬಿಟ್ಟಿದ್ದನು. ॥ ೨೫ ॥ ಇತ್ತ ಸ್ವರ್ಗದಲ್ಲಿ ಊರ್ವಶಿಯು ಇಲ್ಲದಿರುವುದನ್ನು ನೋಡಿದ ಇಂದ್ರನು ಗಂಧರ್ವರಿಗೆ – 'ಊರ್ವಶಿಯು ಎಲ್ಲಿಯೇ ಇರಲಿ ಅವಳನ್ನು ಕರೆತನ್ನಿರಿ, ಅವಳಿಲ್ಲದೆ ಈ ಸ್ವರ್ಗವು ಶೋಭಿಸುವುದಿಲ್ಲ' ಎಂದು ಹೇಳಿ ಅವರನ್ನೂ ಕಳಿಸಿದನು. ॥ ೨೬ ॥ ಆ ಗಂಧರ್ವರು ಅರ್ಧ ರಾತ್ರಿಯ ಅಂಧಕಾರದಲ್ಲಿ – ಊರ್ವಶಿಯು ರಾಜನಲ್ಲಿ ಅಡವಾಗಿ ಇಟ್ಟಿದ್ದ ಎರಡೂ ಮೇಕೆಗಳನ್ನು ಕದ್ದುಕೊಂಡುಹೋದರು. ॥ ೨೭ ॥ ತನ್ನ ಪುತ್ರರಂತೆ ಇದ್ದ ಪ್ರಿಯ ಮೇಕೆಗಳ ಬೇ-ಬೇ ಧ್ವನಿಯನ್ನು ಕೇಳಿ, ಗಂಧರ್ವರು ಅವನ್ನು ಕದ್ದುಕೊಂಡು ಹೋಗುವುದನ್ನು ನೋಡಿ, ಎದ್ದು ಅಯ್ಯೋ ! ಈ ಹೇಡಿಯನ್ನು ನಾನು ಪತಿಯನ್ನಾಗಿಸಿಕೊಂಡು ಸತ್ತೆ ! ನಾನು ಕೆಟ್ಟೆ! ಇವನಿಂದ ನನ್ನ ಮೇಕೆಗಳನ್ನೂ ರಕ್ಷಿಸಲಾಗಲಿಲ್ಲವಲ್ಲ! ಎಂದು ಮರುಗಿದಳು.॥ ೨೮ ॥ ಇವನ ಮೇಲೆ ವಿಶ್ವಾಸವಿಟ್ಟಿದ್ದರಿಂದ ಕಳ್ಳರು ನನ್ನ ಮರಿಗಳನ್ನು ಕದ್ದುಕೊಂಡು ಹೋಗುತ್ತಿದ್ದಾರೆ. ನಾನಾದರೋ ಹಾಳಾದೆ. ನೋಡಿರಲ್ಲ! ಇವನು ಹಗಲಲ್ಲಿ ಗಂಡಸಾಗಿದ್ದು ರಾತ್ರಿಯಲ್ಲಿ ಸ್ತ್ರೀಯರಂತೆ ಹೆದರಿ ಮಲಗಿರುತ್ತಾನೆ. ॥ ೨೯ ॥ ಪರೀಕ್ಷಿತನೇ ! ಆನೆಯನ್ನು ಅಂಕುಶದಿಂದ ತಿವಿಯುವಂತೆ ಊರ್ವಶಿಯು ತನ್ನ ವಾಗ್ಬಾಣಗಳಿಂದ ರಾಜನನ್ನು ಘಾಸಿಗೊಳಿಸಿದಳು. ರಾಜಾ ಪುರೂರವನಿಗೆ ಭಾರೀ ಕೋಪ ಬಂತು ಹಾಗೂ ಕೈಯಲ್ಲಿ ಖಡ್ಗವನ್ನೆತ್ತಿಕೊಂಡು ವಿವಸ್ತ್ರನಾಗಿಯೇ ಗಂಧರ್ವರತ್ತ ಓಡಿದನು. ॥ ೩೦ ॥ ಪುರೂರವನು ಅಟ್ಟಿಸಿಕೊಂಡು ಬರುವುದನ್ನು ನೋಡಿ ಮೇಕೆಗಳನ್ನು ಅಲ್ಲೇ ಬಿಟ್ಟು ಗಂಧರ್ವರು ಮಿಂಚಿನಂತೆ ಪ್ರಕಾಶಿಸಿದರು. ರಾಜನು ಮೇಕೆಗಳನ್ನು ತಂದು ಮರಳಿಸಿದಾಗ, ಊರ್ವಶಿಯು ಆ ಪ್ರಕಾಶದಲ್ಲಿ ಅವನನ್ನು ವಿವಸ್ತ್ರನಾಗಿರುವುದನ್ನು ನೋಡಿದಳು. ಸರಿ ! ಆ ಕ್ಷಣದಲ್ಲೇ ಆಕೆಯು ಪುರೂರವನನ್ನು ಬಿಟ್ಟು ಹೊರಟುಹೋದಳು. ॥ ೩೧ ॥

ಪರೀಕ್ಷಿತನೇ ! ಪುರೂರವನು ಶಯನಾಗಾರದಲ್ಲಿ ತನ್ನ ಪ್ರಿಯತಮೆಯಾದ ಊರ್ವಶಿಯನ್ನು ಕಾಣದಿದ್ದಾಗ ಅವನಿಗೆ ದುಃಖವುಂಟಾಯಿತು. ಅವನ ಮನಸ್ಸು ಊರ್ವಶಿಯಲ್ಲೇ ನೆಟ್ಟಿತ್ತು. ಅವನು ಅವಳಿಗಾಗಿ ಶೋಕದಿಂದ ವಿಹ್ವಲನಾಗಿ ಹುಚ್ಚನಂತೆ ಭೂಮಂಡಲದಲ್ಲೆಲ್ಲ ಅಲೆದಾಡತೊಡಗಿದನು. ॥ ೩೨ ॥

ಹೀಗೆ ಅಲೆಯುತ್ತಿರುವಾಗ ಒಂದು ದಿನ ಕುರುಕ್ಷೇತ್ರದಲ್ಲಿ ಸರಸ್ವತೀ ನದೀತೀರದಲ್ಲಿ ಅವನು ಊರ್ವಶಿಯನ್ನೂ ಮತ್ತು ಪ್ರಸನ್ನಮುಖಿಯರಾದ ಆಕೆಯ ಐವರು ಸಖಿಯರನ್ನೂ ನೋಡಿದನು. ಆಗ ಆನಂದತುಂದಿಲನಾಗಿ ಅವನು ಸವಿಮಾತುಗಳಿಂದ ನುಡಿದನು. ॥ ೩೩ ॥ ಪ್ರಿಯೇ! ಸ್ವಲ್ಪಹೊತ್ತು ನಿಲ್ಲು! ಒಮ್ಮೆ ನನ್ನ ಮಾತನ್ನೂ ಆಲಿಸು. ಕಠೋರವಾದ ಮನಸ್ಸನ್ನು ಹೊಂದಿರುವವಳೇ ! ಇಂದು ನೀನು ನನ್ನನ್ನು ಸುಖಿಯನ್ನಾಗಿ ಮಾಡದೆ ಖಂಡಿತವಾಗಿ ಹೋಗಬಾರದು. ಕ್ಷಣಕಾಲವಾದರೂ ನಿಲ್ಲು, ನಾವಿಬ್ಬರು ಕಲೆತು ಸ್ವಲ್ಪ ಹೊತ್ತಾದರೂ ಮಾತಾಡೋಣ ॥ ೩೪ ॥

ಸುದೇಹೋಽಯಂ ಪತತ್ಯತ್ರ ದೇವಿ ದೂರಂ ಹೃತಸ್ತ್ವಯಾ ।
ಖಾದಂತ್ಯೇನಂ ವೃಕಾ ಗೃಧ್ರಾಸ್ತ್ವತ್ಪ್ರಸಾದಸ್ಯ ನಾಸ್ಪದಮ್
॥ ೩೫ ॥

ದೇವೀ! ಈಗ ಈ ಶರೀರದ ಮೇಲೆ ನಿನ್ನ ಕೃಪಾಪ್ರಸಾದವು ಉಳಿಯಲಿಲ್ಲ. ಇದರಿಂದ ನೀನು ಇದನ್ನು ದೂರಕ್ಕೆಸೆದು ಬಿಟ್ಟೆ ಆದ್ದರಿಂದ ನನ್ನ ಈ ಸುಂದರ ಶರೀರವು ಈಗಲೇ ಬಿದ್ದು ಹೋಗುವುದು. ನೀನು ನೋಡು– ನೋಡುತ್ತಿರುವಾಗಲೇ ಇದನ್ನು ತೋಳಗಳು, ಹದ್ದುಗಳು ತಿಂದುಬಿಡುವುವು. ॥ ೩೫ ॥

ಉರ್ವಶ್ಯುವಾಚ

ಮಾ ಮೃಥಾಃ ಪುರುಷೋಽಸಿ ತ್ವಂ ಮಾ ಸ್ಮ ತ್ವಾದ್ಯುರ್ವೃಕಾ ಇಮೇ ।
ಕ್ವಾಪಿ ಸಖ್ಯಂ ನ ವೈ ಸ್ತ್ರೀಣಾಂ ವೃಕಾಣಾಂ ಹೃದಯಂ ಯಥಾ
॥ ೩೬ ॥

**ಊರ್ವಶಿಯು ಹೇಳಿದಳು** – ರಾಜನೇ! ನೀನು ಪುರುಷನಾಗಿರುವೆ. ಈ ಪ್ರಕಾರವಾಗಿ ಸಾಯಬೇಡ. ಸತ್ತನಂತರ ತೋಳಗಳು ನಿನ್ನನ್ನು ತಿನ್ನುವುದು ಬೇಡ. ಸ್ತ್ರೀಯರಲ್ಲಿ ಯಾರೊಂದಿಗೂ ನಿಜವಾದ ಮೈತ್ರಿ ಇರುವುದಿಲ್ಲ. ಸ್ತ್ರೀಯರ ಹೃದಯ ಮತ್ತು ತೋಳಗಳ ಹೃದಯ ಒಂದೇ ರೀತಿಯದಾಗಿರುತ್ತದೆ. ॥ ೩೬ ॥

ಸ್ತ್ರಿಯೋ ಹ್ಯಕರುಣಾಃ ಕ್ರೂರಾ ದುರ್ಮರ್ಷಾಃ ಪ್ರಿಯಸಾಹಸಾಃ ।
ಘ್ನಂತ್ಯಲ್ಪಾರ್ಥೇಽಪಿ ವಿಶ್ರಬ್ಧಂ ಪತಿಂ ಭ್ರಾತರಮಪ್ಯುತ
॥ ೩೭ ॥

ಸ್ತ್ರೀಯರು ದಯಾಹೀನರಾಗಿರುತ್ತಾರೆ. ಕ್ರೌರ್ಯವು ಅವರ ಸ್ವಾಭಾವಿಕ ಗುಣವೇ ಆಗಿದೆ. ತಾಳ್ಮೆಯಿಲ್ಲದವರು ಪ್ರಿಯವಾದುದನ್ನು ಪಡೆಯಲಿಕ್ಕಾಗಿ ಅಸಾಧ್ಯವಾದ ಕಾರ್ಯವನ್ನು ಮಾಡಿಬಿಡುತ್ತಾರೆ. ವಿಶ್ವಾಸವನ್ನಿಟ್ಟಿರುವ ಪತಿಯನ್ನಾಗಲೀ, ಸಹೋದರನನ್ನಾಗಲೀ ಅತ್ಯಲ್ಪ ಪ್ರಯೋಜನಕ್ಕಾಗಿ ಕೊಂದೇ ಹಾಕುತ್ತಾರೆ. ॥ ೩೭॥

ವಿಧಾಯಾಲೀಕವಿಶ್ರಂಭಮಜ್ಞೇಷು ತ್ಯಕ್ತಸೌಹೃದಾಃ ।
ನವಂ ನವಮಭೀಪ್ಸಂತ್ಯಃ ಪುಂಶ್ಚಲ್ಯಃ ಸ್ವೈರವೃತ್ತಯಃ
॥ ೩೮ ॥

ಇವರ ಹೃದಯದಲ್ಲಿ ಸೌಹಾರ್ದ್ರವೆಂಬುದು ಎಳ್ಳಷ್ಟಾದರೂ ಇರುವುದಿಲ್ಲ. ಕುಲಟೆಯರಾದ ಈ ಸ್ತ್ರೀಯರು ಅರಿಯದವರಿಗೆ ತೋರಿಕೆಯ ವಿಶ್ವಾಸವನ್ನು ತೋರಿಸುತ್ತಾ ಸ್ವಲ್ಪವಾದರೂ ಮರುಕವಿಲ್ಲದೆ ಹೊಸ-ಹೊಸ ಗಂಡಸರನ್ನು ಹುಡುಕುತ್ತಾ ಸ್ವೇಚ್ಛಾಚಾರಿಣಿಯರಾಗಿರುತ್ತಾರೆ. ॥ ೩೮ ॥ ಮಹರಾಜಾ ! ಧೈರ್ಯತಾಳು. ನೀನು ರಾಜರಾಜೇಶ್ವರನಾಗಿರುವೆ. ವರ್ಷಕ್ಕೊಮ್ಮೆ ಒಂದು ರಾತ್ರಿ ನೀನು ನನ್ನೊಡನೆ ಇರಬಹುದಾಗಿದೆ. ಆಗ ನಿನಗೆ ಇನ್ನೂ ಸಂತಾನಗಳು ಆಗಬಹುದು. ॥ ೩೯ ॥

ಸಂವತ್ಸರಾಂತೇ ಹಿ ಭವಾನೇಕರಾತ್ರಂ ಮಯೇಶ್ವರ ।
ವತ್ಸ್ಯತ್ಯಪತ್ಯಾನಿ ಚ ತೇ ಭವಿಷ್ಯಂತ್ಯಪರಾಣಿ ಭೋಃ
॥ ೩೯ ॥

ಅಂತರ್ವತ್ನೀಮುಪಾಲಕ್ಷ್ಯ ದೇವೀಂ ಸ ಪ್ರಯಯೌ ಪುರಮ್ ।
ಪುನಸ್ತತ್ರ ಗತೋಽಬ್ದಾಂತೇ ಉರ್ವಶೀಂ ವೀರಮಾತರಮ್
॥ ೪೦ ॥

ಊರ್ವಶಿಯು ಗರ್ಭವತಿಯಾಗಿರುವುದನ್ನು ಅರಿತು ಪುರೂರವನು ಸಂತುಷ್ಟನಾಗಿ ತನ್ನ ರಾಜಧಾನಿಗೆ ಮರಳಿದನು. ಒಂದು ವರ್ಷ ಕಳೆದಾಗ ಪುನಃ ಅವಳು ಹೇಳಿದ್ದ ಸ್ಥಳಕ್ಕೆ ಹೋದನು. ಆಗ ಊರ್ವಶಿಯು ಓರ್ವ ವೀರಪುತ್ರನ ತಾಯಿಯಾಗಿದ್ದಳು. ॥೪೦॥

ಉಪಲಭ್ಯ ಮುದಾ ಯುಕ್ತಃ ಸಮುವಾಸ ತಯಾ ನಿಶಾಮ್ ।
ಅಥೈನಮುರ್ವಶೀ ಪ್ರಾಹ ಕೃಪಣಂ ವಿರಹಾತುರಮ್
॥ ೪೧ ॥

ಊರ್ವಶಿಯ ಸಮಾಗಮದಿಂದ ರಾಜನಿಗೆ ಮಹದಾನಂದವಾಯಿತು. ಒಂದು ರಾತ್ರಿಯನ್ನು ಅವನು ಅವಳೊಂದಿಗೆ ಕಳೆದನು. ಬೆಳಗ್ಗೆ ಆಗುತ್ತಲೇ ಅಗಲಬೇಕಾದ ಸಮಯಬಂದಾಗ ವಿರಹ ದುಃಖದಿಂದ ಅವನು ದೀನನಾದನು. ಆಗ ಊರ್ವಶಿಯು ಹೇಳಿದಳು.॥೪೧॥

ಗಂಧರ್ವಾನುಪಧಾವೇಮಾಂಸ್ತುಭ್ಯಂ ದಾಸ್ಯಂತಿ ಮಾಮಿತಿ ।
ತಸ್ಯ ಸಂಸ್ತುವತಸ್ತುಷ್ಟಾ ಅಗ್ನಿಸ್ಥಾಲೀಂ ದದುರ್ನೃಪ ।
ಉರ್ವಶೀಂ ಮನ್ಯಮಾನಸ್ತಾಂ ಸೋಽಬುಧ್ಯತ ಚರನ್ವನೇ
॥ ೪೨ ॥

'ಮಹರಾಜ ! ನೀನು ಈ ಗಂಧರ್ವರನ್ನು ಸ್ತೋತ್ರ ಮಾಡು. ಅವರು ಬಯಸಿದರೆ ನಿನಗೆ ನನ್ನನ್ನು ಕೊಡಬಹುದು.' ಆಗ ಪುರೂರವನು ಗಂಧರ್ವರನ್ನು ಸ್ತುತಿಸಿದನು. ಪರೀಕ್ಷಿತನೇ! ಪುರೂರವನ ಸ್ತೋತ್ರದಿಂದ ಸಂತುಷ್ಟರಾದ ಗಂಧರ್ವರು ಅವನಿಗೆ ಒಂದು ಅಗ್ನಿಸ್ಥಾಲಿಯನ್ನು ಕೊಟ್ಟರು. ರಾಜನು ಆ ಅಗ್ನಿಸ್ಥಾಲಿಯನ್ನೇ ಊರ್ವಶಿಯೆಂದು ಭಾವಿಸಿ ಅದನ್ನು ತಬ್ಬಿಕೊಂಡು ವನಗಳಲ್ಲಿ ಅಲೆಯುತ್ತಿದ್ದನು. ॥ ೪೨ ॥ ಅವನಿಗೆ ಅರಿವು ಮೂಡಿದಾಗ ಅವನು ಆ ಅಗ್ನಿಸ್ಥಾಲಿಯನ್ನು ಅಲ್ಲೇ ಕಾಡಿನಲ್ಲಿ ಬಿಟ್ಟು ತನ್ನ ಅರಮನೆಗೆ ಮರಳಿದನು. ರಾತ್ರಿಯಲ್ಲಿ ರಾಜನು ಸದಾ ಊರ್ವಶಿಯನ್ನೇ ಧ್ಯಾನಿಸುತ್ತಿದ್ದನು. ಹೀಗಿರಲು ಕೃತಯುಗವು ಕಳೆದು ತ್ರೇತಾಯುಗವು ಪ್ರಾರಂಭವಾಯಿತು. ಆಗ ಅವನ ಹೃದಯದಲ್ಲಿ ಋಗ್ಯಜುಸ್ಸಾಮ ವೇದಗಳು ಪ್ರಕಟಗೊಂಡವು. ॥ ೪೩ ॥

ಸ್ಥಾಲೀಂ ನ್ಯಸ್ಯ ವನೇ ಗತ್ವಾ ಗೃಹಾನಾಧ್ಯಾಯತೋ ನಿಶಿ ।
ತ್ರೇತಾಯಾಂ ಸಂಪ್ರವೃತ್ತಾಯಾಂ ಮನಸಿ ತ್ರಯ್ಯವರ್ತತ
॥ ೪೩ ॥

ಸ್ಥಾಲೀಸ್ಥಾನಂ ಗತೋಽಶ್ವತ್ಥಂ ಶಮೀಗರ್ಭಂ ವಿಲಕ್ಷ್ಯ ಸಃ ।
ತೇನ ದ್ವೇ ಅರಣೀ ಕೃತ್ವಾ ಉರ್ವಶೀಲೋಕಕಾಮ್ಯಯಾ ॥ ೪೪ ॥

ಉರ್ವಶೀಂ ಮಂತ್ರತೋ ಧ್ಯಾಯನ್ನಧರಾರಣಿಮುತ್ತರಾಮ್ ।
ಆತ್ಮಾನಮುಭಯೋರ್ಮಧ್ಯೇ ಯತ್ತತ್ಪ್ರಜನನಂ ಪ್ರಭುಃ ॥ ೪೫ ॥

ತಸ್ಯ ನಿರ್ಮಂಥನಾಜ್ಜಾತೋ ಜಾತವೇದಾ ವಿಭಾವಸುಃ ।
ತ್ರಯ್ಯಾ ಸ ವಿದ್ಯಯಾ ರಾಜ್ಞಾ ಪುತ್ರತ್ವೇ ಕಲ್ಪಿತಸ್ತ್ರಿವೃತ್ ॥ ೪೬ ॥

ತೇನಾಯಜತ ಯಜ್ಞೇಶಂ ಭಗವಂತಮಧೋಕ್ಷಜಮ್ ।
ಉರ್ವಶೀಲೋಕಮನ್ವಿಚ್ಛನ್ಸರ್ವದೇವಮಯಂ ಹರಿಮ್ ॥ ೪೭ ॥

ಏಕ ಏವ ಪುರಾ ವೇದಃ ಪ್ರಣವಃ ಸರ್ವವಾಙ್ಮಯಃ ।
ದೇವೋ ನಾರಾಯಣೋ ನಾನ್ಯ ಏಕೋಽಗ್ನಿರ್ವರ್ಣ ಏವ ಚ ॥ ೪೮ ॥

ಪುರೂರವಸ ಏವಾಸೀತ್ತ್ರಯೀ ತ್ರೇತಾಮುಖೇ ನೃಪ ।
ಅಗ್ನಿನಾ ಪ್ರಜಯಾ ರಾಜಾ ಲೋಕಂ ಗಾಂಧರ್ವಮೇಯಿವಾನ್ ॥ ೪೯ ॥

ಮೂರು ವೇದಗಳನ್ನು ಹೃದಯದಲ್ಲಿ ಕಂಡುಕೊಂಡ ರಾಜನು ಅಗ್ನಿಸ್ಥಾಲಿಯನ್ನು ಬಿಟ್ಟು ಅರಣ್ಯಕ್ಕೆ ಧಾವಿಸಿದನು. ಅಲ್ಲಿ ಬನ್ನಿಮರದ ಗರ್ಭದಲ್ಲಿ ಒಂದು ಅರಳೀಮರವು ಹುಟ್ಟಿಕೊಂಡಿತ್ತು. ಅದನ್ನು ಕಂಡು ರಾಜನು ಅವುಗಳಿಂದ ಅಗ್ನಿಯನ್ನು ಕಡೆಯುವ ಎರಡು ಅರಣಿ (ಅಗ್ನಿಮಂಥನದ ಮರ)ಗಳನ್ನು ಸಿದ್ಧಪಡಿಸಿದನು. ಮತ್ತೆ ಊರ್ವಶಿಯ ಲೋಕದ ಕಾಮನೆಯಿಂದ ಪುರೂರವನು ಕೆಳಗಿನ ಅರಣಿಯನ್ನು ಊರ್ವಶಿಯನ್ನಾಗಿಯೂ, ಮೇಲಿನ ಅರಣಿಯನ್ನು ಪುರೂರವನನ್ನಾಗಿ, ಮಧ್ಯದ ಮರವನ್ನು ಪುತ್ರರೂಪದಿಂದ ಭಾವಿಸಿಕೊಂಡು ಅಗ್ನಿಯನ್ನು ಪ್ರಜ್ವಲಿಸುವ ಮಂತ್ರಗಳಿಂದ ಅವುಗಳನ್ನು ಕಡೆದನು. ॥ ೪೪-೪೫ ॥ ಹೀಗೆ ಮಂಥನ ಮಾಡುವಾಗ ಜಾತವೇದಸನೆಂಬ ಅಗ್ನಿಯು ಪ್ರಾದುರ್ಭವಿಸಿದನು. ರಾಜಾ ಪುರೂರವನು ಆ ಅಗ್ನಿಯನ್ನು ತ್ರಯೀವಿದ್ಯೆಯ ಮೂಲಕ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿಗಳೆಂಬ ಮೂರು ವಿಭಾಗಗಳನ್ನು ಮಾಡಿ ಅವನ್ನು ರಾಜನು ಪುತ್ರರೂಪದಿಂದ ಸ್ವೀಕರಿಸಿದನು. ॥ ೪೬ ॥ ಮತ್ತೆ ಊರ್ವಶಿಯ ಲೋಕದ ಬಯಕೆಯಿಂದ ಪುರೂರವನು ಆ ಮೂರು ಅಗ್ನಿಗಳ ಮೂಲಕ ಸರ್ವದೇವಸ್ವರೂಪನೂ, ಇಂದ್ರಿಯಾತೀತನೂ ಆದ ಯಜ್ಞಪತಿ ಭಗವಾನ್ ಶ್ರೀಹರಿಯನ್ನು ಆರಾಧಿಸಿದನು. ॥ ೪೭ ॥

ಪರೀಕ್ಷಿತನೇ! ತ್ರೇತಾಯುಗಕ್ಕೆ ಮೊದಲು ಕೃತಯುಗದಲ್ಲಿ ಏಕಮಾತ್ರ ಪ್ರಣವ (ಓಂಕಾರ) ಮಾತ್ರ ವೇದವಾಗಿತ್ತು. ಎಲ್ಲ ವೇದ-ಶಾಸ್ತ್ರಗಳು ಅದರ ಅಂತರ್ಭೂತವಾಗಿದ್ದವು. ನಾರಾಯಣನೊಬ್ಬನಲ್ಲದೆ ಇತರ ಯಾವ ದೇವತೆಗಳೂ ಇರಲಿಲ್ಲ, ಅಗ್ನಿಗಳೂ ಮೂರಾಗಿರದೆ ಒಂದೇ ಆಗಿದ್ದಿತು. ಹಂಸವೆಂಬ ಒಂದೇ ವರ್ಣವಿದ್ದಿತು. ॥ ೪೮ ॥ ರಾಜೇಂದ್ರಾ! ತ್ರೇತಾಯುಗದ ಪ್ರಾರಂಭದಲ್ಲಿ ಪುರೂರವನಿಂದಲೇ ವೇದತ್ರಯೀ ಮತ್ತು ಅಗ್ನಿತ್ರಯೀ ಇವುಗಳ ಆವಿರ್ಭಾವವಾಯಿತು. ಪುರೂರವರಾಜನು ಅಗ್ನಿಯನ್ನು ಸಂತಾನರೂಪದಿಂದ ಸ್ವೀಕರಿಸಿ ಗಂಧರ್ವಲೋಕವನ್ನು ಹೊಂದಿದನು. ॥ ೪೯ ॥

*ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೧೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ
ಐಲೋಪಾಖ್ಯಾನೇ ಚತುರ್ದಶೋಽಧ್ಯಾಯಃ ॥ ೧೪ ॥

# ಹದಿನೈದನೆಯ ಅಧ್ಯಾಯ

## ಋಚೀಕ - ಜಮದಗ್ನಿ ಮತ್ತು ಪರಶುರಾಮರ ಚರಿತ್ರೆ

*ಶ್ರೀಶುಕ ಉವಾಚ*

ಐಲಸ್ಯ ಚೋರ್ವಶೀಗರ್ಭಾತ್ ಷಡಾಸನ್ನಾತ್ಮಜಾ ನೃಪ ।
ಆಯುಃ ಶ್ರುತಾಯುಃ ಸತ್ಯಾಯುೂ ರಯೋಽಥ ವಿಜಯೋ ಜಯಃ ॥ ೧ ॥

ಶ್ರುತಾಯೋರ್ವಸುಮಾನ್ಪುತ್ರಃ ಸತ್ಯಾಯೋಶ್ಚ ಶ್ರುತಂಜಯಃ ।
ರಯಸ್ಯ ಸುತ ಏಕಶ್ಚ ಜಯಸ್ಯ ತನಯೋಽಮಿತಃ ॥ ೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಊರ್ವಶಿಯ ಗರ್ಭದಿಂದ ಪುರೂರವನಿಗೆ ಆಯು, ಶ್ರುತಾಯು, ಸತ್ಯಾಯು, ರಯ, ವಿಜಯ ಮತ್ತು ಜಯ ಎಂಬ ಆರು ಪುತ್ರರು ಹುಟ್ಟಿದರು. ॥ ೧ ॥ ಶ್ರುತಾಯುವಿಗೆ ವಸುಮಂತನೆಂಬ ಪುತ್ರನು ಹುಟ್ಟಿದನು. ಸತ್ಯಾಯುವಿಗೆ ಶ್ರುತಂಜಯನು, ರಯನಿಗೆ ಏಕನೂ, ಜಯನಿಗೆ ಅಮಿತರೆಂಬ ಪುತ್ರರಾದರು. ॥ ೨ ॥

ಭೀಮಸ್ತು ವಿಜಯಸ್ಯಾಥ ಕಾಂಚನೋ ಹೋತ್ರಕಸ್ತತಃ ।
ತಸ್ಯ ಜಹ್ನುಃ ಸುತೋ ಗಂಗಾಂ ಗಂಡೂಷೀಕೃತ್ಯ ಯೋಽಪಿಬತ್ ।
ಜಹ್ನೋಸ್ತು ಪೂರುಸ್ತತ್ಪುತ್ರೋ ಬಲಾಕಶ್ಚಾತ್ಮಜೋಽಜಕಃ
॥ ೩ ॥

ತತಃ ಕುಶಃ ಕುಶಸ್ಯಾಪಿ ಕುಶಾಂಬುಸ್ತನಯೋ ವಸುಃ ।
ಕುಶನಾಭಶ್ಚ ಚತ್ವಾರೋ ಗಾಧಿರಾಸೀತ್ಕುಶಾಂಬುಜಃ
॥ ೪ ॥

ತಸ್ಯ ಸತ್ಯವತೀಂ ಕನ್ಯಾಮೃಚೀಕೋಽಯಾಚತ ದ್ವಿಜಃ ।
ವರಂ ವಿಸದೃಶಂ ಮತ್ವಾ ಗಾಧಿರ್ಭಾರ್ಗವಮಬ್ರವೀತ್
॥ ೫ ॥

ಏಕತಃ ಶ್ಯಾಮಕರ್ಣಾನಾಂ ಹಯಾನಾಂ ಚಂದ್ರವರ್ಚಸಾಮ್ ।
ಸಹಸ್ರಂ ದೀಯತಾಂ ಶುಲ್ಕಂ ಕನ್ಯಾಯಾಃ ಕುಶಿಕಾ ವಯಮ್
॥ ೬ ॥

ಇತ್ಯುಕ್ತಸ್ತನ್ಮತಂ ಜ್ಞಾತ್ವಾ ಗತಃ ಸ ವರುಣಾಂತಿಕಮ್ ।
ಆನೀಯ ದತ್ತ್ವಾ ತಾನಶ್ವಾನುಪಯೇಮೇ ವರಾನನಾಮ್
॥ ೭ ॥

ಸ ಋಷಿಃ ಪ್ರಾರ್ಥಿತಃ ಪತ್ನ್ಯಾ ಶ್ವಶ್ರ್ವಾ ಚಾಪತ್ಯಕಾಮ್ಯಯಾ ।
ಶ್ರಪಯಿತ್ವೋಭಯೈರ್ಮಂತ್ರೈಶ್ಚರುಂ ಸ್ನಾತುಂ ಗತೋ ಮುನಿಃ
॥ ೮ ॥

ತಾವತ್ಸತ್ಯವತೀ ಮಾತ್ರಾ ಸ್ವಚರುಂ ಯಾಚಿತಾ ಸತೀ ।
ಶ್ರೇಷ್ಠಂ ಮತ್ವಾ ತಯಾಯಚ್ಛನ್ಮಾತ್ರೇ ಮಾತುರದತ್ಸ್ವಯಮ್
॥ ೯ ॥

ತದ್ವಿಜ್ಞಾಯ ಮುನಿಃ ಪ್ರಾಹ ಪತ್ನೀಂ ಕಷ್ಟಮಕಾರಷೀಃ ।
ಘೋರೋ ದಂಡಧರಃ ಪುತ್ರೋ ಭ್ರಾತಾ ತೇ ಬ್ರಹ್ಮವಿತ್ತಮಃ
॥ ೧೦ ॥

ಪ್ರಸಾದಿತಃ ಸತ್ಯವತ್ಯಾ ಮೈವಂ ಭೂದಿತಿ ಭಾರ್ಗವಃ ।
ಅಥ ತರ್ಹಿ ಭವೇತ್ಪೌತ್ರೋ ಜಮದಗ್ನಿಸ್ತತೋಽಭವತ್
॥ ೧೧ ॥

ಸಾ ಚಾಭೂತ್ಸುಮಹಾಪುಣ್ಯಾ ಕೌಶಿಕೀ ಲೋಕಪಾವನೀ ।
ರೇಣೋಃ ಸುತಾಂ ರೇಣುಕಾಂ ವೈ ಜಮದಗ್ನಿರುವಾಹ ಯಾಮ್
॥ ೧೨ ॥

ವಿಜಯನಿಗೆ ಭೀಮ, ಭೀಮನಿಗೆ ಕಾಂಚನ, ಕಾಂಚನನಿಗೆ ಹೋತ್ರ, ಹೋತ್ರನಿಗೆ ಜಹ್ನು ಹುಟ್ಟಿದನು. ಗಂಗೆಯನ್ನು ಬೊಗಸೆಯಿಂದ ಕುಡಿದ ಮಹಾ ಮಹಿಮನಾದ ಜಹ್ನುವು ಇವನೇ ಆಗಿದ್ದನು. ಜಹ್ನುವಿಗೆ ಪುರೂ, ಪುರೂವಿಗೆ ಬಲಾಕ, ಬಲಾಕನಿಗೆ ಅಜಕನೆಂಬುವನು ಹುಟ್ಟಿದನು. ॥ ೩ ॥ ಅಜನ ಪುತ್ರ ಕುಶನಾಗಿ ಇದ್ದನು. ಕುಶನಿಗೆ – ಕುಶಾಂಬು, ತನಯ, ವಸು, ಕುಶನಾಭ ಎಂಬ ನಾಲ್ಕು ಪುತ್ರರಾದರು. ಇವರಲ್ಲಿ ಕುಶಾಂಬುವಿನ ಪುತ್ರ ಗಾಧಿಯಾದನು. ॥ ೪ ॥

ಪರೀಕ್ಷಿತನೇ ! ಗಾಧಿಗೆ ಸತ್ಯವತಿಯೆಂಬ ಕನ್ಯೆಯಿದ್ದಳು. ಋಚೀಕ ಋಷಿಯು ಗಾಧಿಯ ಬಳಿ ಸತ್ಯವತಿಯನ್ನು ಯಾಚಿಸಿದನು. ಇವನು ತನ್ನ ಕನ್ಯೆಗೆ ಯೋಗ್ಯವರನಲ್ಲವೆಂದು ಯೋಚಿಸಿ ಋಚೀಕನಲ್ಲಿ ಹೇಳಿದನು – ॥ ೫ ॥ ಮುನಿವರ್ಯರೇ ! ಕುಶಿಕ ವಂಶದವರು ನಾವು. ನಮ್ಮ ಕನ್ಯೆ ಸಿಗುವುದು ಕಷ್ಟವೇ. ಅದಕ್ಕಾಗಿ ನೀವು – ಶರೀರವು ಬೆಳ್ಳಗಿದ್ದು ಒಂದು ಕಿವಿಯು ಕಪ್ಪಾಗಿರುವ ಒಂದುಸಾವಿರ ಕುದುರೆಗಳನ್ನು ಕನ್ಯಾಶುಲ್ಕವಾಗಿ ತಂದು ನನಗೆ ಕೊಡಬೇಕು. ಆಗ ಮದುವೆಯಾಗಬಹುದು. ॥ ೬ ॥ ಗಾಧಿಯು ಈ ಮಾತನ್ನು ಹೇಳಿದಾಗ ಅವನ ಮನದಾಶಯವನ್ನು ತಿಳಿದ ಋಚೀಕ ಮುನಿಯು ವರುಣನಲ್ಲಿಗೆ ಹೋಗಿ ಅಂತಹ ಕುದುರೆಗಳನ್ನು ತಂದನು ಹಾಗೂ ಅವನ್ನು ನೋಡಿದ ಗಾಧಿಯು ಸತ್ಯವತಿಯನ್ನು ಮದುವೆ ಮಾಡಿಕೊಟ್ಟನು. ॥ ೭ ॥

ಒಮ್ಮೆ ಸತ್ಯವತಿ ಮತ್ತು ಅವಳ ತಾಯಿ ಇಬ್ಬರೂ ಸಂತಾನಾರ್ಥವಾಗಿ ಋಚೀಕನಲ್ಲಿ ಪ್ರಾರ್ಥಿಸಿದರು. ಋಚೀಕ ಮಹರ್ಷಿಗಳು ಪತ್ನಿಯ ಹಾಗೂ ಅತ್ತೆಯ ಪ್ರಾರ್ಥನೆಯನ್ನು ಅಂಗೀಕರಿಸಿ ಇಬ್ಬರಿಗೂ ಬೇರೆ-ಬೇರೆಯಾಗಿ ಎರಡು ಮಂತ್ರಗಳಿಂದ ಚರುವನ್ನು ಬೇಯಿಸಿಟ್ಟು ಸ್ನಾನಕ್ಕಾಗಿ ಹೊರಟುಹೋದರು. ॥ ೮ ॥ ಋಷಿಯು ತನ್ನ ಪತ್ನಿಗಾಗಿ ಶ್ರೇಷ್ಠಚರುವನ್ನು ಸಿದ್ಧಗೊಳಿಸಿರಬಹುದು ಎಂದು ಸತ್ಯವತಿಯ ತಾಯಿಯು ತಿಳಿದು, ಸತ್ಯವತಿಗಾಗಿ ಅಭಿಮಂತ್ರಿಸಿದ ಚರುವನ್ನು ಮಗಳಲ್ಲಿ ಬೇಡಿಕೊಂಡು ತಾನು ತಿಂದಳು. ಸತ್ಯವತಿಯು ತಾಯಿಗಾಗಿ ಸಿದ್ಧಗೊಳಿಸಿದ ಚರುವನ್ನು ತಿಂದುಬಿಟ್ಟಳು. ॥ ೯ ॥ ಋಚೀಕ ಮುನಿಗಳಿಗೆ ಈ ವಿಷಯ ತಿಳಿದಾಗ ಅವರು ತನ್ನ ಪತ್ನಿಯಾದ ಸತ್ಯವತಿಯಲ್ಲಿ ಹೇಳಿದರು – 'ನೀನು ದೊಡ್ಡ ಅನರ್ಥವನ್ನೆಸಗಿದೆ. ಚರುವಿನ ವಿನಿಮಯದಿಂದಾಗಿ ನಿನ್ನ ಗರ್ಭದಲ್ಲಿ ಘೋರ ಪ್ರಕೃತಿಯುಳ್ಳ ದಂಡಧರನಾದ ಕ್ಷಾತ್ರಸ್ವಭಾವವುಳ್ಳ ಮಗನು ಹುಟ್ಟುವನು. ನಿನ್ನ ತಮ್ಮನು ಶ್ರೇಷ್ಠ ಬ್ರಹ್ಮವಿತ್ತಮನಾಗುವನು. ॥ ೧೦ ॥ ಸತ್ಯವತಿಯು ಋಚೀಕನನ್ನು ಬಹಳವಾಗಿ ಪ್ರಸನ್ನಗೊಳಿಸಿ – 'ಸ್ವಾಮಿ ! ಹೀಗಾಗಬಾರದು' ಎಂದು ಪ್ರಾರ್ಥಿಸಿದಳು. ಆಗ ಋಚೀಕನೆಂದ– ಸರಿ. ಒಳ್ಳೆಯದು. ಮಗನ ಬದಲಿಗೆ ಮೊಮ್ಮಗನು ಅಂತಹ ಘೋರ ಪ್ರಕೃತಿಯವನಾಗುವನು. ಸಕಾಲದಲ್ಲಿ ಸತ್ಯವತಿಯ ಗರ್ಭದಿಂದ ಜಮದಗ್ನಿಯ ಜನ್ಮವಾಯಿತು. ॥ ೧೧ ॥ ಸತ್ಯವತಿಯು ಸಮಸ್ತ ಲೋಕಗಳನ್ನು ಪವಿತ್ರಗೊಳಿಸುವಂತಹ ಪುಣ್ಯವತಿಯಾದ 'ಕೌಶಿಕೀ' ನದಿಯಾದಳು. ರೇಣು ಎಂಬ ಋಷಿಯ ಕನ್ಯೆಯಾದ ರೇಣುಕೆಯನ್ನು ಜಮದಗ್ನಿಯು ವಿವಾಹವಾದನು. ॥ ೧೨ ॥

ತಸ್ಯಾಂ ವೈ ಭಾರ್ಗವಋಷೇಃ ಸುತಾ ವಸುಮದಾದಯಃ ।
ಯವೀಯಾಂಜಜ್ಞ ಏತೇಷಾಂ ರಾಮ ಇತ್ಯಭಿವಿಶ್ರುತಃ
॥ ೧೩ ॥

ಯಮಾಹುರ್ವಾಸುದೇವಾಂಶಂ ಹೈಹಯಾನಾಂ ಕುಲಾಂತಕಮ್ ।
ತ್ರಿಃ ಸಪ್ತಕೃತ್ವೋ ಯ ಇಮಾಂ ಚಕ್ರೇ ನಿಃಕ್ಷತ್ರಿಯಾಂ ಮಹೀಮ್
॥ ೧೪ ॥

ದುಷ್ಟಂ ಕ್ಷತ್ರಂ ಭುವೋ ಭಾರಮಬ್ರಹ್ಮಣ್ಯಮನೀನಶತ್ ।
ರಜಸ್ತಮೋವೃತಮಹನ್ಫಲ್ಗುನ್ಯಪಿ ಕೃತೇಽಂಹಸಿ
॥ ೧೫ ॥

*ರಾಜೋವಾಚ*

ಕಿಂ ತದಂಹೋ ಭಗವತೋ ರಾಜನ್ಯೈರಜಿತಾತ್ಮಭಿಃ ।
ಕೃತಂ ಯೇನ ಕುಲಂ ನಷ್ಟಂ ಕ್ಷತ್ರಿಯಾಣಾಮಭೀಕ್ಷ್ಣಶಃ
॥ ೧೬ ॥

*ಶ್ರೀಶುಕ ಉವಾಚ*

ಹೈಹಯಾನಾಮಧಿಪತಿರರ್ಜುನಃ ಕ್ಷತ್ರಿಯರ್ಷಭಃ ।
ದತ್ತಂ ನಾರಾಯಣಸ್ಯಾಂಶಮಾರಾಧ್ಯ ಪರಿಕರ್ಮಭಿಃ
॥ ೧೭ ॥

ಬಾಹೂನ್ ದಶಶತಂ ಲೇಭೇ ದುರ್ಧರ್ಷತ್ವಮರಾತಿಷು ।
ಅವ್ಯಾಹತೇಂದ್ರಿಯೌಜಃಶ್ರೀತೇಜೋವೀರ್ಯಯಶೋಬಲಮ್
॥ ೧೮ ॥

ಯೋಗೇಶ್ವರತ್ವಮೈಶ್ವರ್ಯಂ ಗುಣಾ ಯತ್ರಾಣಿಮಾದಯಃ ।
ಚಚಾರಾವ್ಯಾಹತಗತಿರ್ಲೋಕೇಷು ಪವನೋ ಯಥಾ
॥ ೧೯ ॥

ಸ್ತ್ರೀರತ್ನೈರಾವೃತಃ ಕ್ರೀಡನ್ ರೇವಾಂಭಸಿ ಮದೋತ್ಕಟಃ ।
ವೈಜಯಂತೀಂ ಸ್ರಜಂ ಬಿಭ್ರದ್ರುರೋಧ ಸರಿತಂ ಭುಜೈಃ
॥ ೨೦ ॥

ವಿಪ್ಲಾವಿತಂ ಸ್ವಶಿಬಿರಂ ಪ್ರತಿಸ್ರೋತಃಸರಿಜ್ಜಲೈಃ ।
ನಾಮೃಷ್ಯತ್ತಸ್ಯ ತದ್ವೀರ್ಯಂ ವೀರಮಾನೀ ದಶಾನನಃ
॥ ೨೧ ॥

ರೇಣುಕೆಯ ಗರ್ಭದಿಂದ ಜಮದಗ್ನಿಗಳು ವಸುಮಂತ ಮೊದಲಾದ ಅನೇಕ ಪುತ್ರರನ್ನು ಪಡೆದರು. ಅವರಲ್ಲಿ ಕಿರಿಯವನು ಸುಪ್ರಸಿದ್ಧನಾದ ಪರಶುರಾಮನಾಗಿದ್ದನು. ॥ ೧೩ ॥

ಹೈಹಯವಂಶವನ್ನು ಅಂತ್ಯಗೊಳಿಸಲೆಂದೇ ಸ್ವಯಂ ಭಗವಂತನೇ ಪರಶುರಾಮ ರೂಪದಲ್ಲಿ ಅಂಶಾವತಾರ ಮಾಡಿದ್ದನು ಎಂದು ಹೇಳುತ್ತಾರೆ. ಪರಶುರಾಮನು ಈ ಭೂಮಂಡಲವನ್ನು ಇಪ್ಪತ್ತೊಂದು ಬಾರಿ ನಿಃಕ್ಷತ್ರಿಯವಾಗಿ ಮಾಡಿಬಿಟ್ಟನು. ॥ ೧೪ ॥ ಕ್ಷತ್ರಿಯರು ಪರಶುರಾಮನ ಕುರಿತು ಮಾಡಿದ ಅಪರಾಧವು ಅಲ್ಪವಾಗಿದ್ದರೂ ಅವರು ಭಾರೀ ದುಷ್ಟರೂ, ಬ್ರಾಹ್ಮಣ ದ್ವೇಷಿಗಳೂ, ರಜೋ ಗುಣಿಗಳೂ ಆಗಿದ್ದು ವಿಶೇಷವಾಗಿ ತಮೋ ಗುಣಿಗಳೇ ಆಗಿದ್ದರು. ಇದೇ ಕಾರಣದಿಂದ ಅವರು ಭೂಭಾರಕರಾಗಿದ್ದರು. ಇದರ ಫಲವಾಗಿ ಭಗವಾನ್ ಪರಶುರಾಮನು ದುಷ್ಟ ಕ್ಷತ್ರಿಯರನ್ನು ಇಪ್ಪತ್ತೊಂದು ಬಾರಿ ತರಿದು ಭೂಭಾರವನ್ನಿಳಿಸಿದನು. ॥ ೧೫ ॥

**ಪರೀಕ್ಷಿದ್ರಾಜನು ಕೇಳಿದನು** – ಪೂಜ್ಯರೇ ! ನೀವು ಹೇಳಿದಂತೆ ಆ ಸಮಯದಲ್ಲಿ ಕ್ಷತ್ರಿಯರು ವಿಷಯಲೋಲುಪರೂ ದುಷ್ಟರೂ ಅವಶ್ಯರಾಗಿದ್ದರು. ಆದರೆ ಅವರು ಪರಶುರಾಮನಿಗೆ ಅಂತಹ ಯಾವ ಅಪರಾಧವನ್ನು ಮಾಡಿದ್ದಕ್ಕಾಗಿ ಅವನು ಪದೇ-ಪದೇ ಕ್ಷತ್ರಿಯರ ವಂಶವನ್ನೇ ಸಂಹಾರಮಾಡಿದನು ? ॥ ೧೬ ॥

**ಶ್ರೀಶುಕಮಹಾಮುನಿಗಳು ಹೇಳಿದರು** – ಪರೀಕ್ಷಿತನೇ ! ಆ ಸಮಯದಲ್ಲಿ ಕ್ಷತ್ರಿಯಶ್ರೇಷ್ಠನಾದ ಅರ್ಜುನನು ಹೈಹಯರಿಗೆ ಅಧಿಪತಿಯಾಗಿದ್ದನು. ಅವನು ಅನೇಕ ವಿಧವಾದ ಸೇವಾ-ಶುಶ್ರೂಷೆಗಳಿಂದ ಭಗವನ್ನಾರಾಯಣನ ಅಂಶಾವತಾರನಾದ ದತ್ತಾತ್ರೇಯನನ್ನು ಒಲಿಸಿಕೊಂಡು – ಒಂದು ಸಾವಿರ ಬಾಹುಗಳನ್ನು ಹಾಗೂ ಯಾವನೇ ಶತ್ರುವು ಯುದ್ಧದಲ್ಲಿ ಪರಾಜಿತಗೊಳಿಸದಂತಹ ವರವನ್ನು ಪಡೆದಿದ್ದನು. ಜೊತೆಗೆ ಅಬಾಧಿತವಾದ ಇಂದ್ರಿಯಗಳ ಬಲವನ್ನೂ, ಅತುಲಸಂಪತ್ತನ್ನೂ, ತೇಜಸ್ಸನ್ನೂ, ಪರಾಕ್ರಮವನ್ನೂ, ಕೀರ್ತಿಯನ್ನೂ, ಶಾರೀರಿಕ ಬಲವನ್ನೂ ಅವನು ದತ್ತಾತ್ರೇಯನ ಕೃಪೆಯಿಂದ ಪಡೆದುಕೊಂಡಿದ್ದನು. ॥ ೧೭-೧೮ ॥ ಅವನು ಯೋಗೇಶ್ವರನಾಗಿದ್ದನು. ಅವನಿಗೆ ಅತಿಸೂಕ್ಷ್ಮ ಮತ್ತು ಅತಿಸ್ಥೂಲ ರೂಪವನ್ನು ಧರಿಸುವಂತಹ ಎಲ್ಲ ಐಶ್ವರ್ಯಸಿದ್ಧಿಗಳು ಪ್ರಾಪ್ತವಾಗಿದ್ದವು. ಅವನು ಪ್ರಪಂಚದಲ್ಲೆಲ್ಲ ವಾಯುವಿನಂತೆ ಯಾವುದೇ ಅಡೆ-ತಡೆಗಳಿಲ್ಲದೆ ಸಂಚರಿಸುತ್ತಿದ್ದನು. ॥ ೧೯ ॥ ಒಮ್ಮೆ ಕತ್ತಿನಲ್ಲಿ ವೈಜಯಂತಿಯನ್ನು ಧರಿಸಿಕೊಂಡ ಸಹಸ್ರಾರ್ಜುನನು ಅನೇಕ ಸುಂದರಿಯರೊಂದಿಗೆ ನರ್ಮದಾ ನದಿಯಲ್ಲಿ ಜಲವಿಹಾರ ಮಾಡುತ್ತಿದ್ದನು. ಆಗ ಮದೋನ್ಮತ್ತನಾದ ಸಹಸ್ರಬಾಹುವು ತನ್ನ ಕೈಗಳಿಂದ ನದಿಯ ಪ್ರವಾಹವನ್ನೂ ತಡೆದುಬಿಟ್ಟನು. ॥ ೨೦ ॥ ದಶಕಂಠ ರಾವಣನು ಅಲ್ಲೇ ಸಮೀಪದಲ್ಲೇ ಬೀಡುಬಿಟ್ಟಿದ್ದನು. ನದಿಯ ನೀರು ಉಕ್ಕಿ ಅವನ ಶಿಬಿರವು ಮುಳಗತೊಡಗಿತು. ರಾವಣನಾದರೋ ತನ್ನನ್ನು ಮಹಾಪರಾಕ್ರಮಿ ವೀರನೆಂದು ತಿಳಿದಿದ್ದನು. ಅದಕ್ಕಾಗಿ ಸಹಸ್ರಾರ್ಜುನನ ಈ ಪರಾಕ್ರಮವು ಅವನಿಂದ ಸಹಿಸಲಾಗಲಿಲ್ಲ. ॥ ೨೧ ॥

ಗೃಹೀತೋ ಲೀಲಯಾ ಸ್ತ್ರೀಣಾಂ ಸಮಕ್ಷಂ ಕೃತಕಿಲ್ಬಿಷಃ ।
ಮಾಹಿಷ್ಮತ್ಯಾಂ ಸಂನಿರುದ್ಧೋ ಮುಕ್ತೋ ಯೇನ ಕಪಿರ್ಯಥಾ ॥ ೨೨ ॥

ಸ ಏಕದಾ ತು ಮೃಗಯಾಂ ವಿಚರನ್ವಿಪಿನೇ ವನೇ ।
ಯದೃಚ್ಛಯಾಽಽಶ್ರಮಪದಂ ಜಮದಗ್ನೇರುಪಾವಿಶತ್ ॥ ೨೩ ॥

ತಸ್ಮೈ ಸ ನರದೇವಾಯ ಮುನಿರರ್ಹಣಮಾಹರತ್ ।
ಸಸೈನ್ಯಾಮಾತ್ಯವಾಹಾಯ ಹವಿಷ್ಮತ್ಯಾ ತಪೋಧನಃ ॥ ೨೪ ॥

ಸ ವೀರಸ್ತತ್ರ ತದ್ದೃಷ್ಟ್ವಾ ಆತ್ಮೈಶ್ವರ್ಯಾತಿಶಾಯನಮ್ ।
ತನ್ನಾದ್ರಿಯತಾಗ್ನಿಹೋತ್ರ್ಯಾಂ ಸಾಭಿಲಾಷಃ ಸ ಹೈಹಯಃ ॥ ೨೫ ॥

ಹವಿರ್ಧಾನೀಮೃಷೇರ್ದರ್ಪಾನ್ನರಾನ್ಹರ್ತುಮಚೋದಯತ್ ।
ತೇ ಚ ಮಾಹಿಷ್ಮತೀಂ ನಿನ್ಯುಃ ಸವತ್ಸಾಂ ಕ್ರಂದತೀಂ ಬಲಾತ್ ॥ ೨೬ ॥

ಅಥ ರಾಜನಿ ನಿರ್ಯಾತೇ ರಾಮ ಆಶ್ರಮ ಆಗತಃ ।
ಶ್ರುತ್ವಾ ತತ್ತಸ್ಯ ದೌರಾತ್ಮ್ಯಂ ಚುಕ್ರೋಧಾಹಿರಿವಾಹತಃ ॥ ೨೭ ॥

ಘೋರಮಾದಾಯ ಪರಶುಂ ಸತೂಣಂ ಚರ್ಮ ಕಾರ್ಮುಕಮ್ ।
ಅನ್ವಧಾವತ ದುರ್ಧರ್ಷೋ ಮೃಗೇಂದ್ರ ಇವ ಯೂಥಪಮ್ ॥ ೨೮ ॥

ತಮಾಪತಂತಂ ಭೃಗುವರ್ಯಮೋಜಸಾ
ಧನುರ್ಧರಂ ಬಾಣಪರಶ್ವಧಾಯುಧಮ್ ।
ಐಣೇಯಚರ್ಮಾಂಬರಮರ್ಕಧಾಮಭಿ-
ರ್ಯುತಂ ಜಟಾಭಿರ್ದದೃಶೇ ಪುರೀಂ ವಿಶನ್ ॥ ೨೯ ॥

ಅಚೋದಯದ್ಧಸ್ತಿರಥಾಶ್ವಪತ್ತಿಭಿ-
ರ್ಗದಾಸಿಬಾಣರ್ಷ್ಟಿಶತಘ್ನಿಶಕ್ತಿಭಿಃ ।
ಅಕ್ಷೌಹಿಣೀಃ ಸಪ್ತದಶಾತಿಭೀಷಣಾ
ಸ್ತಾ ರಾಮ ಏಕೋ ಭಗವಾನಸೂದಯತ್ ॥ ೩೦ ॥

ರಾವಣನು ಸಹಸ್ರಾರ್ಜುನನ ಬಳಿಗೆ ಹೋಗಿ ಅವನನ್ನು ನಿಂದಿಸತೊಡಗಿದಾಗ ಅವನು ನಾರಿಯರ ಇದುರಿನಲ್ಲೇ ಲೀಲಾಜಾಲವಾಗಿ ಸೆರೆಹಿಡಿದುಕೊಂಡು ತನ್ನ ರಾಜಧಾನಿ ಮಾಹಿಷ್ಮತಿಗೆ ತಂದು ಕಪಿಯನ್ನು ಬೋನಿನಲ್ಲಿಡುವಂತೆ ರಾವಣನನ್ನು ಸೆರೆಯಲ್ಲಿಟ್ಟನು. ಬಳಿಕ ಪುಲಸ್ತ್ಯ ಮಹರ್ಷಿಗಳು ಹೇಳಿದಾಗ ಸಹಸ್ರಾರ್ಜುನನು ಅವನನ್ನು ಬಿಡುಗಡೆ ಗೊಳಿಸಿದನು. ॥ ೨೨ ॥

ಇಂತಹ ಅತುಲ ಪರಾಕ್ರಮಿಯಾದ ಸಹಸ್ರಾರ್ಜುನನು ಒಮ್ಮೆ ಬೇಟೆಯಾಡಲು ಗೊಂಡಾರಣ್ಯವನ್ನು ಪ್ರವೇಶಿಸಿದನು. ದೈವವಶದಿಂದ ಅವನು ಜಮದಗ್ನಿ ಮುನಿಯ ಆಶ್ರಮವನ್ನು ತಲುಪಿದನು. ॥ ೨೩ ॥ ಪರಮ ತಪಸ್ವಿಗಳಾದ ಜಮದಗ್ನಿ ಮುನಿಯ ಆಶ್ರಮದಲ್ಲಿ ಕಾಮಧೇನುವಿದ್ದಿತು. ಅದರ ಪ್ರಭಾವದಿಂದ ಮುನಿಗಳು ಆಶ್ರಮಕ್ಕೆ ಬಂದ ಹೈಹಯಾಪತಿಯನ್ನು, ಮಂತ್ರಿ, ಸೈನ್ಯ, ವಾಹನಗಳೊಂದಿಗೆ ತುಂಬಾ ಸ್ವಾಗತ-ಸತ್ಕಾರ ಮಾಡಿದರು. ॥ ೨೪ ॥ ವೀರ ಸಹಸ್ರಾರ್ಜುನನು ನೋಡಿದನು – ಈ ಮುನಿಯ ಐಶ್ವರ್ಯವಾದರೋ ನನಗಿಂತಲೂ ಮಿಗಿಲಾಗಿದೆ. ಅದಕ್ಕಾಗಿ ಅವನು ಅವರ ಸ್ವಾಗತ-ಸತ್ಕಾರವನ್ನು ಏನನ್ನೂ ಆದರಿಸದೆ ಕಾಮಧೇನುವನ್ನೇ ಕೊಂಡುಹೋಗಲು ಬಯಸಿದನು. ॥ ೨೫ ॥ ದುರಭಿಮಾನಿಯಾದ ಅವನು ಜಮದಗ್ನಿಯಲ್ಲಿ ಕೇಳಿಕೊಳ್ಳದೆ 'ಕಾಮಧೇನುವನ್ನು ಎಳೆದುಕೊಂಡು ಹೋಗಿರಿ' ಎಂದು ತನ್ನ ಸೇವಕರಿಗೆ ಆಜ್ಞೆಯನ್ನು ಇತ್ತನು. ಅವನ ಅಪ್ಪಣೆಯಂತೆ ಸೇವಕರು ಕರುವಿನೊಂದಿಗೆ ಅಂಬಾ! ಅಂಬಾ! ಎಂದು ಅರಚಿಕೊಳ್ಳುತ್ತಿದ್ದ ಕಾಮಧೇನುವನ್ನು ಬಲವಂತವಾಗಿ ಮಾಹಿಷ್ಮತಿಗೆಕೊಂಡು ಹೋದರು. ॥ ೨೬ ॥ ಇವೆಲ್ಲವೂ ನಡೆದಾಗ ಪರಶುರಾಮನು ಆಶ್ರಮಕ್ಕೆ ಬಂದನು. ರಾಜನ ದುಷ್ಕೃತ್ಯದ ವೃತ್ತಾಂತವನ್ನು ಕೇಳಿ ಏಟುತಿಂದ ಸರ್ಪದಂತೆ ಕೋಪದಿಂದ ಕಿಡಿ-ಕಿಡಿಯಾದನು. ॥ ೨೭ ॥ ಅವನು ತನ್ನ ಭಯಂಕರವಾದ ಗಂಡುಕೊಡಲಿಯನ್ನೂ, ಧನುಸ್ಸನ್ನೂ, ಬತ್ತಳಿಕೆಯನ್ನೂ, ಗುರಾಣಿಯನ್ನೂ ಎತ್ತಿಕೊಂಡು ಯಾರಿಂದಲೂ ತಡೆಯಲಾರದ ಸಿಂಹವು ಆನೆಯ ಮೇಲೆ ಎರಗುವಂತೆ ಅತಿವೇಗವಾಗಿ ಅವನನ್ನು ಹಿಂಬಾಲಿಸಿದನು. ॥ ೨೮ ॥

ಸಹಸ್ರಾರ್ಜುನನು ಇನ್ನೇನು ತನ್ನ ನಗರವನ್ನು ಪ್ರವೇಶಿಸುವಾಗಲೇ ಭಗವಾನ್ ಪರಶುರಾಮನು ಅತಿವೇಗದಿಂದ ತನ್ನತ್ತ ಬರುತ್ತಿರುವುದನ್ನು ನೋಡಿದನು. ಅವನ ರೂಪವು ಅತ್ಯಂತ ವಿಲಕ್ಷಣವಾಗಿತ್ತು. ಅವನು ಕೈಯಲ್ಲಿ ಧನುರ್ಬಾಣಗಳನ್ನೂ, ಗಂಡುಕೊಡಲಿಯನ್ನೂ ಧರಿಸಿದ್ದನು. ಶರೀರದ ಮೇಲೆ ಕೃಷ್ಣಮೃಗ ಚರ್ಮವನ್ನು ಧರಿಸಿದ್ದು, ಅವನ ಜಟೆಗಳು ಸೂರ್ಯಕಿರಣಗಳಂತೆ ಹೊಳೆಯುತ್ತಿದ್ದವು. ॥ ೨೯ ॥ ಅವನನ್ನು ನೋಡುತ್ತಲೇ ಅರ್ಜುನನು ಗದೆ, ಖಡ್ಗ, ಬಾಣ, ಋಷ್ಟಿ ಶತಘ್ನಿ, ಶಕ್ತಿ ಮುಂತಾದ ಆಯುಧಗಳಿಂದ ಸುಸಜ್ಜಿತವಾದ ಅತ್ಯಂತ ಭಯಂಕರವಾದ ಹದಿನೇಳು ಅಕ್ಷೌಹಿಣಿ ಚತುರಂಗಿಣಿ ಸೇನೆಯನ್ನು ಪರಶುರಾಮನೊಂದಿಗೆ ಯುದ್ಧಕ್ಕೆ ಕಳಿಸಿದನು. ಅಷ್ಟೊಂದು ಅಪಾರವಾದ ಸೈನ್ಯವನ್ನು ಭಗವಾನ್ ಪರಶುರಾಮನೊಬ್ಬನೇ ಕ್ಷಣಮಾತ್ರದಲ್ಲಿ ಧ್ವಂಸಮಾಡಿಬಿಟ್ಟನು. ॥ ೩೦ ॥

ಯತೋ ಯತೋಽಸೌ ಪ್ರಹರತ್ಪರಶ್ವಧೋ
ಮನೋಽನಿಲೌಜಾಃ ಪರಚಕ್ರಸೂದನಃ ।
ತತಸ್ತತಶ್ಛಿನ್ನಭುಜೋರುಕಂಧರಾ
ನಿಪೇತುರುರ್ವ್ಯಾಂ ಹತಸೂತವಾಹನಾಃ ॥ ೩೧ ॥

ದೃಷ್ಟ್ವಾ ಸ್ವಸೈನ್ಯಂ ರುಧಿರೌಘಕರ್ದಮೇ
ರಣಾಜಿರೇ ರಾಮಕುಠಾರಸಾಯಕೈಃ ।
ವಿವೃಕ್ಣಚರ್ಮಧ್ವಜಚಾಪವಿಗ್ರಹಂ
ನಿಪಾತಿತಂ ಹೈಹಯ ಆಪತದ್ರುಷಾ ॥ ೩೨ ॥

ಅಥಾರ್ಜುನಃ ಪಂಚಶತೇಷು ಬಾಹುಭಿ-
ರ್ಧನುಃಷು ಬಾಣಾನ್ಯುಗಪತ್ಸ ಸಂದಧೇ ।
ರಾಮಾಯ ರಾಮೋಽಸ್ತ್ರಭೃತಾಂ ಸಮಗ್ರಣೀಃ
ತಾನ್ಯೇಕ ಧನ್ವೇಷುಭಿರಾಚ್ಛಿನತ್ಸಮಮ್ ॥ ೩೩ ॥

ಪುನಃ ಸ್ವಹಸ್ತೈರಚಲಾನ್ಮೃಧೇಽಂಘ್ರಿಪಾ-
ನುತ್ಕ್ಷಿಪ್ಯ ವೇಗಾದಭಿಧಾವತೋ ಯುಧಿ ।
ಭುಜಾನ್ಕುಠಾರೇಣ ಕಠೋರನೇಮಿನಾ
ಚಿಚ್ಛೇದ ರಾಮಃ ಪ್ರಸಭಂ ತ್ವಹೇರಿವ ॥ ೩೪ ॥

ಕೃತ್ತಬಾಹೋಃ ಶಿರಸ್ತಸ್ಯ ಗಿರೇಃ ಶೃಂಗಮಿವಾಹರತ್ ।
ಹತೇ ಪಿತರಿ ತತ್ಪುತ್ರಾ ಅಯುತಂ ದುದ್ರುವುರ್ಭಯಾತ್ ॥ ೩೫ ॥

ಅಗ್ನಿಹೋತ್ರೀಮುಪಾವರ್ತ್ಯ ಸವತ್ಸಾಂ ಪರವೀರಹಾ ।
ಸಮುಪೇತ್ಯಾಶ್ರಮಂ ಪಿತ್ರೇ ಪರಿಕ್ಲಿಷ್ಟಾಂ ಸಮರ್ಪಯತ್ ॥ ೩೬ ॥

ಸ್ವಕರ್ಮ ತತ್ಕೃತಂ ರಾಮಃ ಪಿತ್ರೇ ಭ್ರಾತೃಭ್ಯ ಏವ ಚ ।
ವರ್ಣಯಾಮಾಸ ತಚ್ಛ್ರುತ್ವಾ ಜಮದಗ್ನಿರಭಾಷತ ॥ ೩೭ ॥

ರಾಮ ರಾಮ ಮಹಾಬಾಹೋ ಭವಾನ್ಪಾಪಮಕಾರಷೀತ್ ।
ಅವಧೀನ್ನರದೇವಂ ಯತ್ಸರ್ವದೇವಮಯಂ ವೃಥಾ ॥ ೩೮ ॥

ವಯಂ ಹಿ ಬ್ರಾಹ್ಮಣಾಸ್ತಾತ ಕ್ಷಮಯಾರ್ಹಣತಾಂ ಗತಾಃ ।
ಯಯಾ ಲೋಕ ಗುರುರ್ದೇವಃ ಪಾರಮೇಷ್ಠ್ಯಮಗಾತ್ಪದಮ್ ॥ ೩೯ ॥

ಕ್ಷಮಯಾ ರೋಚತೇ ಲಕ್ಷ್ಮೀರ್ಬ್ರಾಹ್ಮೀ ಸೌರೀ ಯಥಾ ಪ್ರಭಾ ।
ಕ್ಷಮಿಣಾಮಾಶು ಭಗವಾಂಸ್ತುಷ್ಯತೇ ಹರಿರೀಶ್ವರಃ ॥ ೪೦ ॥

ಭಗವಾನ್ ಪರಶುರಾಮನ ಗತಿಯು ವಾಯು-ಮನೋವೇಗದಂತಿತ್ತು. ಅವನು ಶತ್ರುಗಳ ಸೈನ್ಯವನ್ನು ಕೊಚ್ಚುತ್ತಲೇ ನಡೆಯುತ್ತಿದ್ದನು. ಅವನು ಗಂಡುಕೊಡಲಿಯಿಂದ ಪ್ರಹರಿಸಿದಲ್ಲೆಲ್ಲ ಸಾರಥಿಗಳು ವಾಹನದೊಂದಿಗೆ ನುಚ್ಚುನೂರಾಗುತ್ತಿದ್ದವು. ಮಹಾ ಮಹಾ ವೀರರ ತೋಳು, ತೊಡೆ, ಹೆಗಲು ತುಂಡು-ತುಂಡಾಗಿ ನೆಲಕ್ಕೆ ಬೀಳುತ್ತಿದ್ದವು. ॥ ೩೧ ॥ ಹೈಹಯಾಪತಿಯ ಸೇನೆಯ ಸೈನಿಕರು, ಅವರ ಧನುಸ್ಸುಗಳು, ಧ್ವಜಗಳು, ಗುರಾಣಿಗಳು ಭಗವಾನ್ ಪರಶುರಾಮನ ಕೊಡಲಿಯಿಂದ ಮತ್ತು ಬಾಣಗಳಿಂದ ತುಂಡು ತುಂಡಾಗಿ ರಣರಂಗದ ರಕ್ತದ ಮಡುವಿನಲ್ಲಿ ಬಿದ್ದಿರುವರು. ದಾರುಣವಾದ ಈ ಸಂಹಾರ ಕಾರ್ಯವನ್ನು ನೋಡಿದ ಅರ್ಜುನನಿಗೆ ಕೋಪವನ್ನು ತಡೆಯಲು ಸಾಧ್ಯವಾಗದೆ, ಧನುಷ್ಪಾಣಿಯಾಗಿ ಸ್ವತಃ ಯುದ್ಧಕ್ಕಾಗಿ ಬಂದನು. ॥ ೩೨ ॥ ಅವನು ಒಮ್ಮೆಗೆ ತನ್ನ ಸಾವಿರ ಭುಜಗಳಿಂದ ಐದುನೂರು ಧನುಷ್ಯಗಳಲ್ಲಿ ಬಾಣಗಳನ್ನು ಹೂಡಿ ಪರಶುರಾಮನ ಮೇಲೆ ಪ್ರಯೋಗಿಸಿದನು. ಸಮಸ್ತ ಶಸ್ತ್ರಧಾರಿಗಳಲ್ಲಿ ಶಿರೋಮಣಿಯಾದ ಪರಶುರಾಮನು ಒಂದೇ ಧನುಸ್ಸಿನ ಮೂಲಕ ಪ್ರಯೋಗಿಸಿದ ಒಂದೇ ಬಾಣದಿಂದ ಆ ಐದುನೂರು ಬಾಣಗಳನ್ನೂ ತುಂಡರಿಸಿ ಬಿಟ್ಟನು. ॥ ೩೩ ॥ ಈಗ ಅರ್ಜುನನು ತನ್ನ ಕೈಗಳಲ್ಲಿ ಪರ್ವತಗಳನ್ನೂ, ವೃಕ್ಷಗಳನ್ನೂ ಎತ್ತಿಕೊಂಡು ಪರಶುರಾಮನ ಮೇಲೆ ಎರಗಿದನು. ಆದರೆ ಪರಶುರಾಮನು ತನ್ನ ತೀಕ್ಷ್ಣವಾದ ಗಂಡುಕೊಡಲಿಯಿಂದ ಕ್ಷಣಮಾತ್ರದಲ್ಲಿ ಅರ್ಜುನನ ಸರ್ಪಗಳ ಹೆಡೆಗಳಂತಿದ್ದ ಸಾವಿರ ತೋಳುಗಳನ್ನು ಕತ್ತರಿಸಿ ಹಾಕಿದನು. ॥ ೩೪ ॥ ಬಾಹುಗಳು ಕತ್ತರಿಸಿದ ಬಳಿಕ ಪರ್ವತದ ಶಿಖರವನ್ನು ಕತ್ತರಿಸುವಂತೆ ಪರಶುರಾಮನು ಅವನ ಶಿರಸ್ಸನ್ನು ತುಂಡರಿಸಿದನು. ತಂದೆಯು ಸತ್ತದ್ದನ್ನು ನೋಡಿದ ಅವನ ಹತ್ತುಸಾವಿರ ಮಕ್ಕಳು ಹೆದರಿ ಓಡಿಹೋದರು. ॥ ೩೫ ॥

ಪರೀಕ್ಷಿತನೇ! ಶತ್ರುವೀರಹಂತಕನಾದ ಪರಶುರಾಮನು ಅತೀವ ದುಃಖಿತೆಯಾಗಿದ್ದ ಕಾಮಧೇನುವನ್ನು ಕರುವಿನೊಂದಿಗೆ ಮರಳಿ ತಂದು ತನ್ನ ಆಶ್ರಮದಲ್ಲಿದ್ದ ತಂದೆಗೆ ಒಪ್ಪಿಸಿದನು. ॥ ೩೬ ॥ ಮಾಹಿಷ್ಮತಿ ಪಟ್ಟಣದಲ್ಲಿ ತಾನು ಮಾಡಿದ ವಿಧ್ವಂಸನಕಾರ್ಯವನ್ನು ತಂದೆಗೂ, ಸಹೋದರರಿಗೂ ವಿವರಿಸಿ ಹೇಳಿದನು. ಮಹಾ ಪರಾಕ್ರಮಿಯಾದ ಸಹಸ್ರಾರ್ಜುನನನ್ನು ಸಂಹರಿಸಿದ ವಿಷಯವನ್ನೂ ತಿಳಿಸಿದನು. ಇದೆಲ್ಲವನ್ನು ಕೇಳಿ ಜಮದಗ್ನಿ ಮುನಿಗಳು ಹೇಳಿದರು -॥ ೩೭ ॥ "ರಾಮಾ! ಪರಶುರಾಮಾ! ನೀನು ತುಂಬಾ ಪಾಪವನ್ನು ಮಾಡಿಬಿಟ್ಟೆ, ಮಹಾಬಾಹುವೇ! ನೀನು ಮಹಾವೀರನೇ ಹೌದು. ಆದರೂ ಸರ್ವದೇವಮಯನಾದ ರಾಜನನ್ನು ವೃಥಾ ಸಂಹರಿಸಿದೆ. ॥ ೩೮ ॥ ಮಗು! ನಾವು ಬ್ರಾಹ್ಮಣರಾಗಿದ್ದೇವೆ. ನಮ್ಮಲ್ಲಿ ಕ್ಷಮಾಗುಣವಿರುವುದರಿಂದಲೇ ನಾವು ಲೋಕದಲ್ಲಿ ಪೂಜ್ಯರಾಗಿದ್ದೇವೆ. ಹೆಚ್ಚೇನು, ಲೋಕಗುರುವಾದ ದೇವನಾದ ಚತುರ್ಮುಖನೂ ಕೂಡ ಕ್ಷಮೆಯಿಂದಲೇ ಪರಮಪದವನ್ನು ಅಲಂಕರಿಸಿರುವನು. ॥ ೩೯ ॥ ಕ್ಷಮೆಯಿಂದಲೇ ಬ್ರಾಹ್ಮಣರ ಶೋಭೆಯು ಸೂರ್ಯನಂತೆ ಬೆಳಗುತ್ತಿದೆ. ಸರ್ವಶಕ್ತನಾದ ಭಗವಾನ್ ಶ್ರೀಹರಿಯೂ ಕೂಡ ಕ್ಷಮೆಯುಳ್ಳವರ ಮೇಲೆ ಬೇಗನೇ ಪ್ರಸನ್ನನಾಗುತ್ತಾನೆ. ॥ ೪೦ ॥

ರಾಜ್ಞೋ ಮೂರ್ಧಾಭಿಷಿಕ್ತಸ್ಯ ವಧೋ ಬ್ರಹ್ಮವಧಾದ್ಗುರುಃ ।
ತೀರ್ಥಸಂಸೇವಯಾ ಚಾಂಹೋ ಜಹ್ಯಂಗಾಚ್ಯುತಚೇತನಃ ॥ ೪೧ ॥

ಮಗು ! ಸಾರ್ವಭೌಮ ನಾದ ರಾಜನ ವಧೆಯು ಬ್ರಾಹ್ಮಣನ ಹತ್ಯೆಗಿಂತಲೂ ಮಿಗಿಲಾದುದು. ಹೋಗು, ಭಗವಂತನನ್ನು ಸ್ಮರಿಸುತ್ತಾ ಪುಣ್ಯತೀರ್ಥಗಳ ಸೇವನೆಗೈದು ನಿನ್ನ ಪಾಪಗಳನ್ನು ತೊಳೆದುಕೋ.'' ॥ ೪೧ ॥

ಹದಿನೈದನೇ ಅಧ್ಯಾಯವು ಮುಗಿಯಿತು ॥ ೧೫ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ ಪಂಚದಶೋಽಧ್ಯಾಯಃ ॥ ೧೫ ॥

# ಹದಿನಾರನೆಯ ಅಧ್ಯಾಯ

## ಪರಶುರಾಮನಿಂದ ಸಮಸ್ತ ಕ್ಷತ್ರಿಯರ ಸಂಹಾರ – ವಿಶ್ವಾಮಿತ್ರನ ವಂಶದ ಕಥೆ

*ಶ್ರೀಶುಕ ಉವಾಚ*

ಪಿತ್ರೋಪಶಿಕ್ಷಿತೋ ರಾಮಸ್ತಥೇತಿ ಕುರುನಂದನ ।
ಸಂವತ್ಸರಂ ತೀರ್ಥಯಾತ್ರಾಂ ಚರಿತ್ವಾಽಽಶ್ರಮಮಾವ್ರಜತ್ ॥ ೧ ॥

ಕದಾಚಿದ್ರೇಣುಕಾ ಯಾತಾ ಗಂಗಾಯಾಂ ಪದ್ಮಮಾಲಿನಮ್ ।
ಗಂಧರ್ವರಾಜಂ ಕ್ರೀಡಂತಮಪ್ಸರೋಭಿರಪಶ್ಯತ ॥ ೨ ॥

ವಿಲೋಕಯಂತೀ ಕ್ರೀಡಂತಮುದಕಾರ್ಥಂ ನದೀಂ ಗತಾ ।
ಹೋಮವೇಲಾಂ ನ ಸಸ್ಮಾರ ಕಿಂಚಿಚ್ಚಿತ್ರರಥಸ್ಪೃಹಾ ॥ ೩ ॥

ಕಾಲಾತ್ಯಯಂ ತಂ ವಿಲೋಕ್ಯ ಮುನೇಃ ಶಾಪವಿಶಂಕಿತಾ ।
ಆಗತ್ಯ ಕಲಶಂ ತಸ್ಥೌ ಪುರೋಧಾಯ ಕೃತಾಂಜಲಿಃ ॥ ೪ ॥

ವ್ಯಭಿಚಾರಂ ಮುನಿರ್ಜ್ಞಾತ್ವಾ ಪತ್ನ್ಯಾಃ ಪ್ರಕುಪಿತೋಽಬ್ರವೀತ್ ।
ಘ್ನತೈನಾಂ ಪುತ್ರಕಾಃ ಪಾಪಾಮಿತ್ಯುಕ್ತಾಸ್ತೇ ನ ಚಕ್ರಿರೇ ॥ ೫ ॥

ರಾಮಃ ಸಂಚೋದಿತಃ ಪಿತ್ರಾ ಭ್ರಾತೄನ್ಮಾತ್ರಾ ಸಹಾವಧೀತ್ ।
ಪ್ರಭಾವಜ್ಞೋ ಮುನೇಃ ಸಮ್ಯಕ್ಸಮಾಧೇಸ್ತಪಸಶ್ಚ ಸಃ ॥ ೬ ॥

ವರೇಣಚ್ಛಂದಯಾಮಾಸ ಪ್ರೀತಃ ಸತ್ಯವತೀಸುತಃ ।
ವವ್ರೇ ಹತಾನಾಂ ರಾಮೋಽಪಿ ಜೀವಿತಂ ಚಾಸ್ಮೃತಿಂ ವಧೇ ॥ ೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ ! ಹೀಗೆ ತಂದೆಯಿಂದ ಆಜ್ಞಪ್ತನಾದ ಪರಶುರಾಮನು 'ಹಾಗೆಯೇ ಆಗಲಿ' ಎಂದು ಹೇಳಿ ಒಡನೆಯೇ ಹೊರಟು ಒಂದು ವರ್ಷಕಾಲ ತೀರ್ಥಯಾತ್ರೆಯನ್ನು ಮಾಡಿ ಆಶ್ರಮಕ್ಕೆ ಮರಳಿದನು. ॥ ೧ ॥ ಒಮ್ಮೆ ಪರಶುರಾಮನ ತಾಯಿಯಾದ ರೇಣುಕೆಯು ಗಂಗಾತೀರಕ್ಕೆ ಹೋಗಿದ್ದಳು. ಅಲ್ಲಿ ಗಂಧರ್ವರಾಜನಾದ ಚಿತ್ರರಥನು ಕಮಲಗಳ ಮಾಲೆಗಳನ್ನು ಧರಿಸಿದ ಅಪ್ಸರೆಯರೊಂದಿಗೆ ವಿಹರಿಸುತ್ತಿದ್ದನು. ॥ ೨ ॥ ರೇಣುಕೆಯು ನೀರು ತರಲು ನದಿಗೆ ಹೋಗಿದ್ದಳು. ಆದರೆ ಅಲ್ಲಿ ಜಲಕ್ರೀಡೆಯಾಡುತ್ತಿರುವ ಗಂಧರ್ವನನ್ನು ನೋಡತೊಡಗಿದಳು ಹಾಗೂ ಪತಿದೇವರ ಹವನದ ಸಮಯವಾಗಿದೆ ಎಂಬುದನ್ನೂ ಮರೆತುಬಿಟ್ಟಳು. ಆಕೆಯ ಮನಸ್ಸು ಸ್ವಲ್ಪಕಾಲ ಚಿತ್ರರಥನ ಕಡೆಗೆ ಸೆಳೆಯಲ್ಪಟ್ಟಿತ್ತು. ॥ ೩ ॥ ಹವನದ ಸಮಯವು ಮೀರಿ ಹೋಗಿದೆ ಎಂಬುದನ್ನರಿತ ಆಕೆಯು ಭಯಗೊಂಡು ಲಗುಬಗೆಯಿಂದ ಆಶ್ರಮಕ್ಕೆ ಬಂದು ನೀರಿನ ಗಡಿಗೆಯನ್ನು ಮಹರ್ಷಿಗಳ ಮುಂದಿರಿಸಿ ಕೈಜೋಡಿಸಿಕೊಂಡು ನಿಂತುಬಿಟ್ಟಳು. ॥ ೪ ॥ ಜಮದಗ್ನಿ ಮುನಿಯು ತನ್ನ ಪತ್ನಿಯ ಮಾನಸಿಕ ವ್ಯಭಿಚಾರವನ್ನು ತಿಳಿದುಕೊಂಡು ಕ್ರೋಧಗೊಂಡು ಹೇಳಿದರು – 'ನನ್ನ ಮಕ್ಕಳಿರಾ ! ಪಾಪಿನಿಯಾದ ಈಕೆಯನ್ನು ಕೊಂದುಬಿಡಿರಿ.' ಆದರೆ ಅವನ ಯಾವ ಪುತ್ರನೂ ಆ ಆಜ್ಞೆಯಂತೆ ತಾಯಿಯನ್ನು ಕೊಲ್ಲಲು ಮುಂದಾಗಲಿಲ್ಲ. ॥ ೫ ॥ ಬಳಿಕ ತಂದೆಯ ಆಜ್ಞೆಯಂತೆ ಕಿರಿಯವನಾದ ಪರಶುರಾಮನು ತಾಯಿಯೊಂದಿಗೆ ಎಲ್ಲ ಸಹೋದರರನ್ನೂ ಕೊಂದುಹಾಕಿದನು. ಅವನು ತನ್ನ ತಂದೆಯ ಯೋಗ ಮತ್ತು ತಪಸ್ಸಿನ ಮಹಿಮೆಯನ್ನು ಚೆನ್ನಾಗಿ ತಿಳಿದಿದ್ದುದೇ ಇದಕ್ಕೆ ಕಾರಣವಾಗಿದೆ. ॥ ೬ ॥ ಪರಶುರಾಮನ ಈ ಕಾರ್ಯದಿಂದ ಸತ್ಯವತೀ ನಂದನ ಮಹರ್ಷಿ ಜಮದಗ್ನಿಯು ತುಂಬಾ ಪ್ರಸನ್ನರಾಗಿ 'ಮಗು ! ನಿನಗೆ ಇಷ್ಟವುಳ್ಳ ವರವನ್ನು ಬೇಡು' ಎಂದು ಹೇಳಿದರು. ಪರಶುರಾಮನು ಅಪ್ಪಾ! ನನ್ನ ತಾಯಿ ಮತ್ತು ಎಲ್ಲ ಸಹೋದರರು ಜೀವಂತರಾಗಲಿ ಮತ್ತು ನಾನು ಸಂಹರಿಸಿದ ಸ್ಮರಣೆಯು ಅವರಿಗೆ ಇರಬಾರದು' ಎಂಬ ವರವನ್ನು ಬೇಡಿದನು. ॥ ೭ ॥

ಉತ್ತಸ್ಥುಸ್ತೇ ಕುಶಲಿನೋ ನಿದ್ರಾಪಾಯ ಇವಾಂಜಸಾ ।
ಪಿತುರ್ವಿದ್ವಾಂಸ್ತಪೋವೀರ್ಯಂ ರಾಮಶ್ಚಕ್ರೇ ಸುಹೃದ್ವಧಮ್
॥ ೮ ॥

ಯೇಽರ್ಜುನಸ್ಯ ಸುತಾ ರಾಜನ್ಸ್ಮರಂತಃ ಸ್ವಪಿತುರ್ವಧಮ್ ।
ರಾಮವೀರ್ಯಪರಾಭೂತಾ ಲೇಭಿರೇ ಶರ್ಮ ನ ಕ್ವಚಿತ್
॥ ೯ ॥

ಏಕದಾಽಽಶ್ರಮತೋ ರಾಮೇ ಸಭ್ರಾತರಿ ವನಂ ಗತೇ ।
ವೈರಂ ಸಿಸಾಧಯಿಷವೋ ಲಬ್ಧಚ್ಛಿದ್ರಾ ಉಪಾಗಮನ್
॥ ೧೦ ॥

ದೃಷ್ಟ್ವಾಗ್ನ್ಯಾಗಾರ ಆಸೀನಮಾವೇಶಿತಧಿಯಂ ಮುನಿಮ್ ।
ಭಗವತ್ಯುತ್ತಮಶ್ಲೋಕೇ ಜಘ್ನುಸ್ತೇ ಪಾಪನಿಶ್ಚಯಾಃ
॥ ೧೧ ॥

ಯಾಚ್ಯಮಾನಾಃ ಕೃಪಣಯಾ ರಾಮಮಾತ್ರಾತಿದಾರುಣಾಃ ।
ಪ್ರಸಹ್ಯ ಶಿರ ಉತ್ಕೃತ್ಯ ನಿನ್ಯುಸ್ತೇ ಕ್ಷತ್ರಬಂಧವಃ
॥ ೧೨ ॥

ರೇಣುಕಾ ದುಃಖಶೋಕಾರ್ತಾ ನಿಘ್ನಂತ್ಯಾತ್ಮಾನಮಾತ್ಮನಾ ।
ರಾಮ ರಾಮೇಹಿ ತಾತೇತಿ ವಿಚುಕ್ರೋಶೋಚ್ಚಕೈಃ ಸತೀ
॥ ೧೩ ॥

ತದುಪಶ್ರುತ್ಯ ದೂರಸ್ಥೋ ಹಾ ರಾಮೇತ್ಯಾರ್ತವತ್‌ಸ್ವನಮ್ ।
ತ್ವರಯಾಽಽಶ್ರಮಮಾಸಾದ್ಯ ದದೃಶೇ ಪಿತರಂ ಹತಮ್
॥ ೧೪ ॥

ತದ್ದುಃಖರೋಷಾಮರ್ಷಾರ್ತಿಶೋಕವೇಗವಿಮೋಹಿತಃ ।
ಹಾ ತಾತ ಸಾಧೋ ಧರ್ಮಿಷ್ಠ ತ್ಯಕ್ತ್ವಾಸ್ಮಾನ್ಸ್ವರ್ಗತೋ ಭವಾನ್
॥ ೧೫ ॥

ವಿಲಪ್ಯೈವಂ ಪಿತುರ್ದೇಹಂ ನಿಧಾಯ ಭ್ರಾತೃಷು ಸ್ವಯಮ್ ।
ಪ್ರಗೃಹ್ಯ ಪರಶುಂ ರಾಮಃ ಕ್ಷತ್ರಾಂತಾಯ ಮನೋ ದಧೇ
॥ ೧೬ ॥

ಗತ್ವಾ ಮಾಹಿಷ್ಮತೀಂ ರಾಮೋ ಬ್ರಹ್ಮಘ್ನವಿಹತಶ್ರಿಯಮ್ ।
ತೇಷಾಂ ಸ ಶೀರ್ಷಭಿ ರಾಜನ್ಮಧ್ಯೇ ಚಕ್ರೇ ಮಹಾಗಿರಿಮ್
॥ ೧೭ ॥

ಪರಶುರಾಮನು ಹೀಗೆ ಹೇಳುತ್ತಲೇ ನಿದ್ದೆಯಿಂದ ಎದ್ದವರಂತೆ ಎಲ್ಲರೂ ಅನಾಯಾಸವಾಗಿ ಕುಶಲರಾಗಿ ಎದ್ದು ಕುಳಿತರು. ಪರಶುರಾಮನು ತನ್ನ ತಂದೆಯ ತಪೋಬಲವನ್ನು ತಿಳಿದೇ ತನ್ನ ಸುಹೃದರನ್ನು ವಧಿಸಿದ್ದನು. ॥ ೮ ॥

ಪರೀಕ್ಷಿತನೇ! ಪರಶುರಾಮನೊಡನೆ ಮಾಡಿದ ಯುದ್ಧದಲ್ಲಿ ಪರಾಜಿತರಾಗಿ ಓಡಿಹೋಗಿದ್ದ ಸಹಸ್ರಾರ್ಜುನನ ಮಕ್ಕಳು ತಮ್ಮ ತಂದೆಯು ಪರಶುರಾಮನಿಂದ ಹತನಾದುದನ್ನು ಸ್ಮರಿಸುತ್ತಲೇ ಇದ್ದರು. ಹೀಗೆ ಸ್ಮರಿಸುತ್ತಿದ್ದುದರಿಂದ ಅವರ ಮನಸ್ಸು ಅಶಾಂತ ವಾಗಿತ್ತು. ॥ ೯ ॥ ಒಂದುದಿನ ಪರಶುರಾಮನು ತನ್ನ ಸಹೋದರ ರೊಂದಿಗೆ ದರ್ಭೆ-ಸಮಿತ್ತು ತರಲು ಆಶ್ರಮದಿಂದ ಹೊರಗೆ ಅರಣ್ಯಕ್ಕೆ ಹೋಗಿದ್ದನು. ವೈರವನ್ನು ಸಾಧಿಸಲು ಇದೇ ಸುಸಂದರ್ಭ ವೆಂದು ತಿಳಿದು ಸಹಸ್ರಾರ್ಜುನನ ಮಕ್ಕಳು ಅಲ್ಲಿಗೆ ಬಂದರು. ॥ ೧೦ ॥ ಆಗ ಜಮದಗ್ನಿ ಮಹರ್ಷಿಗಳು ಯಜ್ಞಶಾಲೆಯಲ್ಲಿ ಕುಳಿತಿದ್ದರು. ತನ್ನ ಸಮಸ್ತ ವೃತ್ತಿಗಳನ್ನು ಪುಣ್ಯಕೀರ್ತಿ ಭಗವಂತನ ಧ್ಯಾನದಲ್ಲೇ ತೊಡಗಿಸಿದ್ದರು. ಅವರಿಗೆ ಬಾಹ್ಯ ಪ್ರಪಂಚದ ಜ್ಞಾನವೇ ಇರಲಿಲ್ಲ. ಅದೇ ಸಮಯದಲ್ಲಿ ಆ ಪಾಪಿಗಳು ಜಮದಗ್ನಿಯನ್ನು ಕೊಂದು ಹಾಕಿದರು. ಅವರು ಮೊದಲಿನಿಂದಲೇ ಇಂತಹ ಪಾಪಪೂರ್ಣ ನಿಶ್ಚಯ ಮಾಡಿಕೊಂಡಿದ್ದರು. ॥ ೧೧ ॥ ಪರಶುರಾಮನ ತಾಯಿ ರೇಣುಕೆಯು ಅತಿದೀನಳಾಗಿ ಅವರಲ್ಲಿ ಪ್ರಾರ್ಥಿಸುತ್ತಿದ್ದಳು. ಆದರೆ ಅವರೆಲ್ಲರೂ ಆಕೆಯ ಒಂದು ಮಾತೂ ಕೇಳದೆ ಬಲವಂತವಾಗಿ ಮಹರ್ಷಿ ಜಮದಗ್ನಿಯ ಶಿರವನ್ನು ಕತ್ತರಿಸಿಕೊಂಡುಹೋದರು. ಪರೀಕ್ಷಿತನೇ! ನಿಜವಾಗಿ ಅವರು ನೀಚ ಕ್ಷತ್ರಿಯರಾಗಿದ್ದು ಅತ್ಯಂತ ಕ್ರೂರಿಯಾಗಿದ್ದರು. ॥ ೧೨ ॥ ದುಃಖ-ಶೋಕ ಪೀಡಿತಳಾಗಿದ್ದ ರೇಣುಕೆಯು ತನ್ನ ಕೈಗಳಿಂದ ತಲೆಯನ್ನೂ, ಎದೆಯನ್ನೂ ಬಡಿದು ಕೊಂಡು ಗಟ್ಟಿಯಾಗಿ ಗೋಳಾಡುತ್ತಾ 'ಮಗು! ಪರಶುರಾಮಾ! ಬೇಗನೇ ಓಡಿ ಬಾ!' ಎಂದು ಗಟ್ಟಿಯಾಗಿ ಕರೆಯುತ್ತಿದ್ದಳು. ॥ ೧೩ ॥ ಪರಶುರಾಮನು ಬಹಳ ದೂರದಿಂದಲೇ 'ಹಾ ರಾಮಾ!' ಎಂಬ ಕರುಣಕ್ರಂದನ ಕೇಳಿದನು. ಅವನು ಅತಿಶೀಘ್ರವಾಗಿ ಆಶ್ರಮಕ್ಕೆ ಬಂದು ನೋಡುತ್ತಾನೆ – ತನ್ನ ತಂದೆಯು ಕೊಲ್ಲಲ್ಪಟ್ಟಿದ್ದನು. ॥ ೧೪ ॥ ಪರೀಕ್ಷಿತನೇ! ಆಗ ಪರಶುರಾಮನಿಗೆ ಅತ್ಯಂತ ದುಃಖವಾಯಿತು. ಜೊತೆಗೆ ಕ್ರೋಧ, ಅಸಹಿಷ್ಣುತೆ, ಮಾನಸಿಕ ಪೀಡೆ ಮತ್ತು ಶೋಕದ ಆವೇಗದಿಂದ ಅತ್ಯಂತ ವಿಮೋಹವು ಉಂಟಾಯಿತು. ಅಯ್ಯೋ! ತಂದೆಯೇ! ನೀನಾದರೋ ಮಹಾತ್ಮನಾಗಿದ್ದೆ, ಧರ್ಮಾತ್ಮನಾಗಿದ್ದೆ, ನಮ್ಮೆಲ್ಲರನ್ನೂ ಬಿಟ್ಟು ನೀನು ಸ್ವರ್ಗಕ್ಕೆ ಹೊರಟು ಹೋದೆಯಲ್ಲ! ॥ ೧೫ ॥ ಹೀಗೆ ವಿಲಾಪಗೈದು ಅವನು ತಂದೆಯ ಶರೀರವನ್ನು ಸಹೋದರರಿಗೆ ಒಪ್ಪಿಸಿ, ಸ್ವಯಂ ಕೈಯಲ್ಲಿ ಗಂಡು ಕೊಡಲಿಯನ್ನು ಎತ್ತಿಕೊಂಡು ದುಷ್ಟ ಕ್ಷತ್ರಿಯರ ಸಂಹಾರ ಮಾಡಿಬಿಡುವ ನಿಶ್ಚಯವನ್ನು ಮಾಡಿದನು. ॥ ೧೬ ॥

ಪರೀಕ್ಷಿದ್ರಾಜೇಂದ್ರ! ಪರಶುರಾಮನು ಮಾಹಿಷ್ಮತಿ ನಗರಕ್ಕೆ ಹೋಗಿ ಸಹಸ್ರಬಾಹು ಅರ್ಜುನನ ಮಕ್ಕಳ ತಲೆಗಳನ್ನು ಚೆಂಡಾಡಿ ನಗರ ಮಧ್ಯಭಾಗದಲ್ಲಿ ಗುಡ್ಡೆಹಾಕಿದನು. ಆ ನಗರದ ಶೋಭೆ ಯಾದರೋ ಆ ಬ್ರಾಹ್ಮಣಘಾತಿಗಳಾದ ಕ್ಷತ್ರಿಯರ ಕಾರಣದಿಂದ ನಾಶವಾಗಿ ಹೋಗಿತ್ತು. ॥ ೧೭ ॥

ತದ್ರಕ್ತೇನ ನದೀಂ ಘೋರಾಮಬ್ರಹ್ಮಣ್ಯ ಭಯಾವಹಾಮ್ ।
ಹೇತುಂ ಕೃತ್ವಾ ಪಿತೃವಧಂ ಕ್ಷತ್ರೇಽಮಂಗಲಕಾರಿಣಿ
॥ ೧೮ ॥

ತ್ರಿಃಸಪ್ತಕೃತ್ವಃ ಪೃಥಿವೀಂ ಕೃತ್ವಾ ನಿಃಕ್ಷತ್ರಿಯಾಂ ಪ್ರಭುಃ ।
ಸಮಂತಪಂಚಕೇ ಚಕ್ರೇ ಶೋಣಿತೋದಾನ್ ಹ್ರದಾನ್ನವ
॥ ೧೯ ॥

ಪಿತುಃ ಕಾಯೇನ ಸಂಧಾಯ ಶಿರ ಆದಾಯ ಬರ್ಹಿಷಿ ।
ಸರ್ವದೇವಮಯಂ ದೇವಮಾತ್ಮಾನಮಯಜನ್ಮಖೈಃ
॥ ೨೦ ॥

ದದೌ ಪ್ರಾಚೀಂ ದಿಶಂ ಹೋತ್ರೇ ಬ್ರಹ್ಮಣೇ ದಕ್ಷಿಣಾಂ ದಿಶಮ್ ।
ಅಧ್ವರ್ಯವೇ ಪ್ರತೀಚೀಂ ವೈ ಉದ್ಗಾತ್ರೇ ಉತ್ತರಾಂ ದಿಶಮ್
॥ ೨೧ ॥

ಅನ್ಯೇಭ್ಯೋಽವಾಂತರದಿಶಃ ಕಶ್ಯಪಾಯ ಚ ಮಧ್ಯತಃ ।
ಆರ್ಯಾವರ್ತಮುಪದ್ರಷ್ಟ್ರೇ ಸದಸ್ಯೇಭ್ಯಸ್ತತಃ ಪರಮ್
॥ ೨೨ ॥

ತತಶ್ಚಾವಭೃಥಸ್ನಾನವಿಧೂತಾಶೇಷಕಿಲ್ಬಿಷಃ ।
ಸರಸ್ವತ್ಯಾಂ ಬ್ರಹ್ಮನದ್ಯಾಂ ರೇಜೇ ವ್ಯಭ್ರ ಇವಾಂಶುಮಾನ್
॥ ೨೩ ॥

ಸ್ವದೇಹಂ ಜಮದಗ್ನಿಸ್ತು ಲಬ್ಧ್ವಾ ಸಂಜ್ಞಾನಲಕ್ಷಣಮ್ ।
ಋಷೀಣಾಂ ಮಂಡಲೇ ಸೋಽಭೂತ್ಸಪ್ತಮೋ ರಾಮಪೂಜಿತಃ
॥ ೨೪ ॥

ಜಾಮದಗ್ನ್ಯೋಽಪಿ ಭಗವಾನ್ರಾಮಃ ಕಮಲಲೋಚನಃ ।
ಆಗಾಮಿನ್ಯಂತರೇ ರಾಜನ್ವರ್ತಯಿಷ್ಯತಿ ವೈ ಬೃಹತ್
॥ ೨೫ ॥

ಆಸ್ತೇಽದ್ಯಾಪಿ ಮಹೇಂದ್ರಾದ್ರೌ ನ್ಯಸ್ತದಂಡಃ ಪ್ರಶಾಂತಧೀಃ ।
ಉಪಗೀಯಮಾನಚರಿತಃ ಸಿದ್ಧಗಂಧರ್ವಚಾರಣೈಃ
॥ ೨೬ ॥

ಏವಂ ಭೃಗುಷು ವಿಶ್ವಾತ್ಮಾ ಭಗವಾನ್ ಹರಿರೀಶ್ವರಃ ।
ಅವತೀರ್ಯ ಪರಂ ಭಾರಂ ಭುವೋಽಹನ್ಬಹುಶೋ ನೃಪಾನ್
॥ ೨೭ ॥

ಗಾಧೇರಭೂನ್ಮಹಾತೇಜಾಃ ಸಮಿದ್ಧ ಇವ ಪಾವಕಃ ।
ತಪಸಾ ಕ್ಷಾತ್ರಮುತ್ಸೃಜ್ಯ ಯೋ ಲೇಭೇ ಬ್ರಹ್ಮವರ್ಚಸಮ್
॥ ೨೮ ॥

ವಿಶ್ವಾಮಿತ್ರಸ್ಯ ಚೈವಾಸನ್ಪುತ್ರಾ ಏಕಶತಂ ನೃಪ ।
ಮಧ್ಯಮಸ್ತು ಮಧುಚ್ಛಂದಾ ಮಧುಚ್ಛಂದ ಸ ಏವ ತೇ
॥ ೨೯ ॥

ಅವರ ರಕ್ತದ ಒಂದು ದೊಡ್ಡ ಭಯಂಕರ ನದಿಯೇ ಹರಿಯಿತು. ಇದನ್ನು ನೋಡಿ ಬ್ರಾಹ್ಮಣ ದ್ರೋಹಿಗಳ ಹೃದಯಗಳು ಭಯದಿಂದ ನಡುಗಿಹೋದುವು. ಎಲ್ಲ ಕ್ಷತ್ರಿಯರು ಅತ್ಯಾಚಾರಿಗಳಾಗಿದ್ದಾರೆ ಎಂದು ಭಗವಾನ್ ಪರಶುರಾಮನು ಭಾವಿಸಿದನು. ಅದಕ್ಕಾಗಿ ರಾಜನೇ ! ಅವನು ತನ್ನ ತಂದೆಯ ವಧೆಯ ನೆಪವನ್ನು ಮಾಡಿಕೊಂಡು ಪೃಥಿವಿಯನ್ನು ಇಪ್ಪತ್ತೊಂದು ಬಾರಿ ನಿಃಕ್ಷತ್ರಿಯವನ್ನಾಗಿಸಿದನು. ಕೊನೆಗೆ ಕುರುಕ್ಷೇತ್ರದ ಸ್ಯಮಂತ ಪಂಚಕದಲ್ಲಿ ರಕ್ತದಿಂದ ತುಂಬಿದ ಒಂಭತ್ತು ಮಡುಗಳನ್ನು ನಿರ್ಮಿಸಿದ್ದನು. ॥ ೧೮-೧೯ ॥ ಪರಶುರಾಮನು ತನ್ನ ತಂದೆಯ ಶಿರವನ್ನು ತಂದು ಮುಂಡದೊಡನೆ ಜೋಡಿಸಿ ಯಜ್ಞಗಳ ಮೂಲಕ ಸರ್ವದೇವಮಯನಾದ, ಆತ್ಮಸ್ವರೂಪನಾದ ಭಗವಂತನನ್ನು ಆರಾಧಿಸಿದನು. ॥ ೨೦ ॥ ಹಾಗೆ ಮಾಡಿದ ಯಜ್ಞದಲ್ಲವನು ಪೂರ್ವದಿಕ್ಕನ್ನು ಹೋತೃವಿಗೂ, ದಕ್ಷಿಣದಿಕ್ಕನ್ನು ಬ್ರಹ್ಮನಿಗೂ, ಪಶ್ಚಿಮದಿಕ್ಕನ್ನು ಅಧ್ವರ್ಯುವಿಗೂ, ಉತ್ತರದಿಕ್ಕನ್ನು ಸಾಮಗಾನ ಮಾಡುವ ಉದ್ಗಾತೃವಿಗೂ ದಕ್ಷಿಣೆಯಾಗಿ ನೀಡಿದನು. ॥ ೨೧ ॥ ಹೀಗೆಯೇ ಆಗ್ನೇಯಾದಿ ವಿದಿಶೆಗಳನ್ನು ಋತ್ವಿಜರಿಗೆ ಕೊಟ್ಟನು. ಮಧ್ಯದ ಭೂಮಿಯನ್ನು ಕಶ್ಯಪರಿಗೆ ಕೊಟ್ಟನು. ಉಪದ್ರಷ್ಟನಿಗೆ ಆರ್ಯಾವರ್ತವನ್ನು ಕೊಟ್ಟು, ಇತರ ಸದಸ್ಯರಿಗೆ ಬೇರೆ-ಬೇರೆ ದಿಕ್ಕುಗಳನ್ನು ದಾನಮಾಡಿದನು. ॥ ೨೨ ॥ ಅನಂತರ ಯಜ್ಞಾಂತ ಅವಭೃತಸ್ನಾನಮಾಡಿ ಅವನು ಸಮಸ್ತ ಪಾಪಗಳಿಂದ ಮುಕ್ತನಾದನು ಹಾಗೂ ಬ್ರಹ್ಮನದಿಯಾದ ಸರಸ್ವತಿಯ ತೀರದಲ್ಲಿ ಮೋಡಗಳಿಲ್ಲದ ಸೂರ್ಯನಂತೆ ಪ್ರಕಾಶಿಸಿದನು. ॥ ೨೩ ॥ ಮಹರ್ಷಿ ಜಮದಗ್ನಿಯವರಿಗೆ ಸ್ಮೃತಿರೂಪ ಸಂಕಲ್ಪಮಯ ಶರೀರವು ಪ್ರಾಪ್ತವಾಯಿತು. ಪರಶುರಾಮನಿಂದ ಸಮ್ಮಾನಿತರಾಗಿ ಅವರು ಸಪ್ತರ್ಷಿಗಳ ಮಂಡಲದಲ್ಲಿ ಏಳನೆಯ ಋಷಿಗಳಾದರು. ॥ ೨೪ ॥ ಪರೀಕ್ಷಿತನೇ! ಜಮದಗ್ನಿನಂದನ ಕಮಲಲೋಚನ ಭಗವಾನ್ ಪರಶುರಾಮನು ಮುಂದಿನ ಮನ್ವಂತರದಲ್ಲಿ ಸಪ್ತರ್ಷಿಗಳ ಮಂಡಲದಲ್ಲಿದ್ದು ವೇದಗಳನ್ನು ವಿಸ್ತಾರಮಾಡುವನು. ॥ ೨೫ ॥ ಅವನು ಇಂದೂ ಕೂಡ ಯಾರಿಗೂ ಯಾವರೀತಿಯಿಂದಲೂ ದಂಡಿಸದೆ ಶಾಂತಚಿತ್ತನಾಗಿ ಮಹೇಂದ್ರ ಪರ್ವತದಲ್ಲಿ ವಾಸವಾಗಿದ್ದಾನೆ. ಅಲ್ಲಿ ಸಿದ್ಧರೂ, ಗಂಧರ್ವರೂ, ಚಾರಣರೂ ಪರಶುರಾಮನ ಚರಿತ್ರೆಯನ್ನು ಮಧುರವಾಗಿ ಹಾಡುತ್ತಾ ಇರುವರು. ॥ ೨೬ ॥ ಸರ್ವಶಕ್ತನಾದ ವಿಶ್ವಾತ್ಮಾ ಭಗವಾನ್ ಶ್ರೀಹರಿಯು ಈ ಪ್ರಕಾರ ಭೃಗುವಂಶದಲ್ಲಿ ಅವತಾರವನ್ನೆತ್ತಿ ಭೂಭಾರಕರಾದ ರಾಜರನ್ನು ಅನೇಕಬಾರಿ ವಧಿಸಿದ್ದನು. ॥ ೨೭ ॥

ಗಾಧಿ ಮಹಾರಾಜನಿಗೆ ಪ್ರಜ್ವಲಿತ ಅಗ್ನಿಯಂತೆ ಪರಮ ತೇಜಸ್ವೀ ವಿಶ್ವಾಮಿತ್ರನು ಪುತ್ರನಾದನು. ಇವನು ತನ್ನ ತಪೋಬಲದಿಂದ ಕ್ಷತ್ರಿಯತ್ವವನ್ನು ತ್ಯಜಿಸಿ ಬ್ರಹ್ಮತೇಜವನ್ನು ಪಡೆದಿದ್ದನು. ॥ ೨೮ ॥ ಪರೀಕ್ಷಿತನೇ! ವಿಶ್ವಾಮಿತ್ರನಿಗೆ ನೂರು ಪುತ್ರರಿದ್ದರು. ಅವರಲ್ಲಿ ಮಧ್ಯಮನು ಮಧುಚ್ಛಂದನು. ಆದಕ್ಕಾಗಿ ಎಲ್ಲ ಪುತ್ರರೂ ಮಧುಚ್ಛಂದನ ಹೆಸರಿನಿಂದಲೇ ವಿಖ್ಯಾತರಾದರು. ॥ ೨೯ ॥

ಪುತ್ರಂ ಕೃತ್ವಾ ಶುನಃಶೇಪಂ ದೇವರಾತಂ ಚ ಭಾರ್ಗವಮ್ ।
ಆಜೀಗರ್ತಂ ಸುತಾನಾಹ ಜ್ಯೇಷ್ಠ ಏಷ ಪ್ರಕಲ್ಪ್ಯತಾಮ್
॥ ೩೦ ॥

ಯೋ ವೈ ಹರಿಶ್ಚಂದ್ರಮಖೇ ವಿಕ್ರೀತಃ ಪುರುಷಃ ಪಶುಃ ।
ಸ್ತುತ್ವಾ ದೇವಾನ್ ಪ್ರಜೇಶಾದೀನ್ಮುಮುಚೇ ಪಾಶಬಂಧನಾತ್
॥ ೩೧ ॥

ಯೋ ರಾತೋ ದೇವಯಜನೇ ದೇವೈರ್ಗಾಧಿಷು ತಾಪಸಃ ।
ದೇವರಾತ ಇತಿ ಖ್ಯಾತಃ ಶುನಃಶೇಪಃ ಸ ಭಾರ್ಗವಃ
॥ ೩೨ ॥

ಯೇ ಮಧುಚ್ಛಂದಸೋ ಜ್ಯೇಷ್ಠಾಃ ಕುಶಲಂ ಮೇನಿರೇ ನ ತತ್ ।
ಅಶಪತ್ತಾನ್ಮುನಿಃ ಕ್ರುದ್ಧೋ ಮ್ಲೇಚ್ಛಾ ಭವತ ದುರ್ಜನಾಃ
॥ ೩೩ ॥

ಸ ಹೋವಾಚ ಮಧುಚ್ಛಂದಾಃ ಸಾರ್ಧಂ ಪಂಚಾಶತಾ ತತಃ ।
ಯನ್ನೋ ಭವಾನ್ಸಂಜಾನೀತೇ ತಸ್ಮಿಂಸ್ತಿಷ್ಠಾಮಹೇ ವಯಮ್
॥ ೩೪ ॥

ಜ್ಯೇಷ್ಠಂ ಮಂತ್ರದೃಶಂ ಚಕ್ರುಸ್ತ್ವಾಮನ್ವಂಚೋ ವಯಂ ಸ್ಮ ಹಿ ।
ವಿಶ್ವಾಮಿತ್ರಃ ಸುತಾನಾಹ ವೀರವಂತೋ ಭವಿಷ್ಯಥ ।
ಯೇ ಮಾನಂ ಮೇಽನುಗೃಹ್ಣಂತೋ ವೀರವಂತಮಕರ್ತ ಮಾಮ್
॥ ೩೫ ॥

ಏಷ ವಃ ಕುಶಿಕಾ ವೀರೋ ದೇವರಾತಸ್ತಮನ್ವಿತ ।
ಅನ್ಯೇ ಚಾಷ್ಟಕಹಾರೀತಜಯಕ್ರತುಮದಾದಯಃ
॥ ೩೬ ॥

ಏವಂ ಕೌಶಿಕಗೋತ್ರಂ ತು ವಿಶ್ವಾಮಿತ್ರೈಃ ಪೃಥಗ್ವಿಧಮ್ ।
ಪ್ರವರಾಂತರಮಾಪನ್ನಂ ತದ್ಧಿ ಚೈವಂ ಪ್ರಕಲ್ಪಿತಮ್
॥ ೩೭ ॥

ವಿಶ್ವಾಮಿತ್ರನು ಭೃಗುವಂಶೀಯ ಅಜೀಗರ್ತನಪುತ್ರನೂ ತನ್ನ ಅಳಿಯನೂ ಆದ ಶುನಃಶೇಪನನ್ನು ಪುತ್ರರೂಪದಿಂದ ಸ್ವೀಕರಿಸಿದನು. ಇವನಿಗೆ ದೇವರಾತನೆಂದೂ ಇನ್ನೊಂದು ಹೆಸರಿತ್ತು. ಈ ಶುನಃಶೇಪನನ್ನು ನಿಮ್ಮ ಹಿರಿಯಣ್ಣನೆಂದು ಭಾವಿಸಿರಿ ಎಂದು ತಮ್ಮ ಪುತ್ರರಿಗೆ ತಿಳಿಸಿದನು. ॥ ೩೦ ॥ ಇವನು – ಹರಿಶ್ಚಂದ್ರನ ಯಜ್ಞದಲ್ಲಿ ಯಜ್ಞಪಶುವಾಗಿ ಕೊಂಡುತಂದ ಪ್ರಸಿದ್ಧ ಭೃಗುವಂಶೀಯ ಶುನಃಶೇಪನಾಗಿದ್ದನು. ವಿಶ್ವಾಮಿತ್ರರು ಪ್ರಜಾಪತಿ, ವರುಣ ಮೊದಲಾದ ದೇವತೆಗಳನ್ನು ಸ್ತುತಿಸಿ ಅವನನ್ನು ಪಾಶಮುಕ್ತಗೊಳಿಸಿದ್ದರು. ದೇವತೆಗಳ ಯಜ್ಞದಲ್ಲಿ ಈ ಶುನಃಶೇಪನೇ ದೇವತೆಗಳ ಮೂಲಕ ವಿಶ್ವಾಮಿತ್ರರಿಗೆ ಕೊಡಲ್ಪಟ್ಟಿದ್ದನು. ಆದ್ದರಿಂದ 'ದೇವೈಃ ರಾತಃ' ಈ ವ್ಯುತ್ಪತ್ತಿಗನುಸಾರ ಗಾಧಿವಂಶದಲ್ಲಿ ಇವನು ದೇವರಾತನೆಂಬ ಹೆಸರಿನಿಂದ ವಿಖ್ಯಾತನಾದನು. ॥ ೩೧–೩೨ ॥ ವಿಶ್ವಾಮಿತ್ರರ ಪುತ್ರರಲ್ಲಿ ಹಿರಿಯರಾಗಿದ್ದವರಿಗೆ ಶುನಃಶೇಪನನ್ನು ಹಿರಿಯಣ್ಣನೆಂದು ತಿಳಿಯುವ ಮಾತು ರುಚಿಸಲಿಲ್ಲ. ಇದರಿಂದ ವಿಶ್ವಾಮಿತ್ರರು ಕ್ರೋಧಗೊಂಡು – 'ಎಲೈ ದುಷ್ಟರಿರಾ ! ನೀವೆಲ್ಲರೂ ಮ್ಲೇಚ್ಛರಾಗಿರಿ' ಎಂದು ಶಾಪಕೊಟ್ಟರು. ॥ ೩೩ ॥ ಹೀಗೆ ನಲವತ್ತೊಂಭತ್ತು ಸಹೋದರರು ಮ್ಲೇಚ್ಛರಾದಾಗ ವಿಶ್ವಾಮಿತ್ರರ ಮಧ್ಯಮ ಮಗನಾದ ಮದುಚ್ಛಂದನು ತನ್ನಿಂದ ಕಿರಿಯವರಾದ ಐವತ್ತು ಮಂದಿ ತಮ್ಮಂದಿರೊಡನೆ – 'ಅಪ್ಪಾ ! ನೀವು ನಮಗೆ ಹೇಗೆ ಅಪ್ಪಣೆ ಕೊಡಿಸುವಿರೋ ಹಾಗೆಯೇ ನಾವು ನಡೆಯಲು ಸಿದ್ಧರಿದ್ದೇವೆ ' ಎಂದು ಹೇಳಿದನು. ॥ ೩೪ ॥ ಹೀಗೆ ಹೇಳಿ ಮಧುಚ್ಛಂದನು ಮಂತ್ರದ್ರಷ್ಟಾ ಶುನಃಶೇಪನನ್ನು ಹಿರಿಯಣ್ಣನೆಂದು ಸ್ವೀಕರಿಸಿ ಹೇಳಿದನು – ನಾವೆಲ್ಲರೂ ನಿನ್ನ ಅನುಯಾಯಿಗಳಾದ ಸಣ್ಣ ತಮ್ಮಂದಿರಾಗಿದ್ದೇವೆ. ಆಗ ವಿಶ್ವಾಮಿತ್ರರು ತಮ್ಮ ಆಜ್ಞಾಕಾರಿಯಾದ ಪುತ್ರರಲ್ಲಿ ಹೇಳಿದನು – 'ನೀವೆಲ್ಲರೂ ನನ್ನ ಮಾತನ್ನು ಮನ್ನಿಸಿ ನನ್ನ ಸಮ್ಮಾನವನ್ನು ರಕ್ಷಿಸಿದಿರಿ. ಆದರಿಂದ ನಿಮ್ಮಂತಹ ಸತ್ಪುತ್ರರನ್ನು ಪಡೆದ ನಾನು ಧನ್ಯನಾದೆನು. 'ನಿಮಗೂ ಸತ್ಪುತ್ರರಾಗಲಿ' ಎಂದು ನಾನು ನಿಮ್ಮನ್ನು ಆಶೀರ್ವದಿಸುತ್ತೇನೆ. ॥ ೩೫ ॥ ನನ್ನ ಪ್ರೀತಿಯ ಮಕ್ಕಳಿರಾ ! ಈ ದೇವರಾತ ಶುನಃಶೇಪನೂ ನಿಮ್ಮ ಗೋತ್ರದವನೇ ಆಗಿರುವನು. ನೀವೆಲ್ಲರೂ ಇವನ ಆಜ್ಞೆಯಂತೆ ನಡೆಯಿರಿ. ಪರೀಕ್ಷಿತನೇ ! ವಿಶ್ವಾಮಿತ್ರರಿಗೆ ಅಷ್ಟಕ, ಹಾರಿತ, ಜಯ, ಕ್ರತುಮಾನ್ ಮೊದಲಾದ ಇನ್ನೂ ಅನೇಕ ಪುತ್ರರಿದ್ದರು. ॥ ೩೬ ॥ ಈ ಪ್ರಕಾರ ವಿಶ್ವಾಮಿತ್ರರ ಸಂತಾನದಿಂದ ಕೌಶಿಕಗೋತ್ರದಲ್ಲಿ ಅನೇಕ ಭೇದಗಳಾದವು ಮತ್ತು ದೇವರಾತನನ್ನು ಹಿರಿಯಣ್ಣನೆಂದು ಭಾವಿಸಿದ್ದರಿಂದ ಅವನ ಪ್ರವರವೂ ಬೇರೆಯಾಯಿತು. ॥ ೩೭ ॥

*ಹದಿನಾರನೆಯ ಅಧ್ಯಾಯವು ಮುಗಿಯಿತು. ॥ ೧೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ
ಷೋಡಶೋಽಧ್ಯಾಯಃ ॥ ೧೬ ॥

# ಹದಿನೇಳನೆಯ ಅಧ್ಯಾಯ

## ಕ್ಷತ್ರವೃದ್ಧ, ರಜಿ ಮೊದಲಾದ ರಾಜರ ವಂಶದ ವರ್ಣನೆ

ಶ್ರೀಶುಕ ಉವಾಚ

ಯಃ ಪುರೂರವಸಃ ಪುತ್ರ ಆಯುಸ್ತಸ್ಯಾಭವನ್ಸುತಾಃ ।
ನಹುಷಃ ಕ್ಷತ್ರವೃದ್ಧಶ್ಚ ರಜೀ ರಂಭಶ್ಚ ವೀರ್ಯವಾನ್ ॥ ೧ ॥

ಅನೇನಾ ಇತಿ ರಾಜೇಂದ್ರ ಶೃಣು ಕ್ಷತ್ರವೃಧೋಽನ್ವಯಮ್ ।
ಕ್ಷತ್ರವೃದ್ಧಸುತಸ್ಯಾಸನ್ಸುಹೋತ್ರಸ್ಯಾತ್ಮಜಾಸ್ತ್ರಯಃ ॥ ೨ ॥

ಕಾಶ್ಯಃ ಕುಶೋ ಗೃತ್ಸಮದ ಇತಿ ಗೃತ್ಸಮದಾದಭೂತ್ ।
ಶುನಕಃ ಶೌನಕೋ ಯಸ್ಯ ಬಹ್ವೃಚಪ್ರವರೋ ಮುನಿಃ ॥ ೩ ॥

ಕಾಶ್ಯಸ್ಯ ಕಾಶಿಸ್ತತ್ಪುತ್ರೋ ರಾಷ್ಟ್ರೋ ದೀರ್ಘತಮಃಪಿತಾ ।
ಧನ್ವಂತರಿರ್ದೈರ್ಘತಮ ಆಯುರ್ವೇದಪ್ರವರ್ತಕಃ ॥ ೪ ॥

ಯಜ್ಞಭುಗ್ವಾಸುದೇವಾಂಶಃ ಸ್ಮೃತಮಾತ್ರಾರ್ತಿನಾಶನಃ ।
ತತ್ಪುತ್ರಃ ಕೇತುಮಾನಸ್ಯ ಜಜ್ಞೇ ಭೀಮರಥಸ್ತತಃ ॥ ೫ ॥

ದಿವೋದಾಸೋ ದ್ಯುಮಾಂಸ್ತಸ್ಮಾತ್ಪ್ರತರ್ದನ ಇತಿ ಸ್ಮೃತಃ ।
ಸ ಏವ ಶತ್ರುಜಿದ್ವತ್ಸ ಋತಧ್ವಜ ಇತೀರಿತಃ ।
ತಥಾ ಕುವಲಯಾಶ್ವೇತಿ ಪ್ರೋಕ್ತೋಽಲರ್ಕಾದಯಸ್ತತಃ ॥ ೬ ॥

ಷಷ್ಟಿವರ್ಷಸಹಸ್ರಾಣಿ ಷಷ್ಟಿವರ್ಷಶತಾನಿ ಚ ।
ನಾಲರ್ಕಾದಪರೋ ರಾಜನ್ಮೇದಿನೀಂ ಬುಭುಜೇ ಯುವಾ ॥ ೭ ॥

ಅಲರ್ಕಾತ್ಸಂತತಿಸ್ತಸ್ಮಾತ್ಸುನೀತೋಽಥ ಸುಕೇತನಃ ।
ಧರ್ಮಕೇತುಃ ಸುತಸ್ತಸ್ಮಾತ್ ಸತ್ಯಕೇತುರಜಾಯತ ॥ ೮ ॥

ಧೃಷ್ಟಕೇತುಃ ಸುತಸ್ತಸ್ಮಾತ್ಸುಕುಮಾರಃ ಕ್ಷಿತೀಶ್ವರಃ ।
ವೀತಿಹೋತ್ರಸ್ಯ ಭರ್ಗೋಽತೋ ಭಾರ್ಗಭೂಮಿರಭೂನ್ನೃಪಃ ॥ ೯ ॥

ಇತೀಮೇ ಕಾಶಯೋ ಭೂಪಾಃ ಕ್ಷತ್ರವೃದ್ಧಾನ್ವಯಾಯಿನಃ ।
ರಂಭಸ್ಯ ರಭಸಃ ಪುತ್ರೋ ಗಂಭೀರಶ್ಚಾಕ್ರಿಯಸ್ತತಃ ॥ ೧೦ ॥

ತಸ್ಯ ಕ್ಷೇತ್ರೇ ಬ್ರಹ್ಮ ಜಜ್ಞೇ ಶೃಣು ವಂಶಮನೇನಸಃ ।
ಶುದ್ಧಸ್ತತಃ ಶುಚಿಸ್ತಸ್ಮಾತ್ತ್ರಿಕಕುದ್ಧರ್ಮಸಾರಥಿಃ ॥ ೧೧ ॥

ತತಃ ಶಾಂತರಯೋ ಜಜ್ಞೇ ಕೃತಕೃತ್ಯಃ ಸ ಆತ್ಮವಾನ್ ।
ರಜೇಃ ಪಂಚಶತಾನ್ಯಾಸನ್ಪುತ್ರಾಣಾಮಮಿತೌಜಸಾಮ್ ॥ ೧೨ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಪುರೂರವನಿಗೆ ಆಯುವೆಂಬ ಓರ್ವ ಮಗನಿದ್ದನು. ಅವನಿಗೆ ನಹುಷ, ಕ್ಷತ್ರವೃದ್ಧ ರಜಿ, ಶಕ್ತಿಶಾಲಿರಂಭ ಮತ್ತು ಅನೇನಾ ಎಂಬ ಐದು ಮಕ್ಕಳಿದ್ದರು. ಈಗ ಕ್ಷತ್ರವೃದ್ಧನ ವಂಶವನ್ನು ವಿವರಿಸುತ್ತೇನೆ, ಕೇಳು. ಕ್ಷತ್ರವೃದ್ಧನಿಗೆ ಸುಹೋತ್ರನೆಂಬ ಪುತ್ರನಿದ್ದನು. ಸುಹೋತ್ರ ನಿಗೆ – ಕಾಶ್ಯ, ಕುಶ, ಗೃತ್ಸಮದರೆಂಬ ಮೂವರು ಪುತ್ರರಾದರು. ಗೃತ್ಸಮದನಿಗೆ ಶುನಕ ಹುಟ್ಟಿದನು. ಈ ಶುನಕನ ಪುತ್ರನೇ ಋಗ್ವೇದಿ ಗಳಲ್ಲಿ ಶ್ರೇಷ್ಠಮುನಿವರ ಶೌನಕನು. ॥ ೧-೩ ॥ ಕಾಶ್ಯನ ಪುತ್ರ ಕಾಶಿ, ಕಾಶಿಗೆ ರಾಷ್ಟ್ರ, ರಾಷ್ಟ್ರನಿಗೆ ದೀರ್ಘತಮಾ ಮತ್ತು ದೀರ್ಘತಮನಿಗೆ ಧನ್ವಂತರಿ ಎಂಬ ಪುತ್ರ ಹುಟ್ಟಿದನು. ಇವನೇ ಆಯುರ್ವೇದದ ಪ್ರವರ್ತಕನಾಗಿದ್ದಾನೆ. ॥ ೪ ॥ ಇವನು ಯಜ್ಞಭಾಗದ ಭೋಕ್ತೃವೂ ಭಗವಾನ್ ವಾಸುದೇವನ ಅಂಶನಾಗಿರುವನು. ಇವನ ಸ್ಮರಣ ಮಾತ್ರದಿಂದಲೇ ಎಲ್ಲ ಪ್ರಕಾರದ ರೋಗಗಳು ದೂರವಾಗುತ್ತದೆ. ಧನ್ವಂತರಿಗೆ ಕೇತುಮಂತ ಪುತ್ರನಾದನು. ಕೇತುಮಂತನಿಗೆ ಭೀಮ ರಥನು ಪುತ್ರನಾದನು. ॥ ೫ ॥ ಭೀಮರಥನಿಗೆ ದಿವೋದಾಸನು, ದಿವೋದಾಸನಿಗೆ ದ್ಯುಮಾನ್ ಆದನು. ಇವನಿಗೆ ಪ್ರತರ್ದನ ಎಂಬ ಇನ್ನೊಂದು ಹೆಸರೂ ಇದೆ. ಈ ದ್ಯುಮಂತನೇ ಶತ್ರುಜಿತ್, ವತ್ಸ ಋತಧ್ವಜ ಮತ್ತು ಕುವಲಯಾಶ್ವ ಎಂಬ ಹೆಸರುಗಳಿಂದಲೂ ಪ್ರಸಿದ್ಧನಾಗಿದ್ದಾನೆ. ದ್ಯುಮಂತನಿಗೆ ಅಲರ್ಕನೇ ಮೊದಲಾದ ಪುತ್ರರಾದರು. ॥ ೬ ॥ ಪರೀಕ್ಷಿತನೇ! ಅಲರ್ಕನಲ್ಲದೆ ಬೇರೆ ಯಾವ ರಾಜನೂ ಅರವತ್ತಾರು ಸಾವಿರ ವರ್ಷಗಳವರೆಗೆ ಯುವಕನಾಗಿದ್ದು ರಾಜ್ಯವನ್ನು ಆಳಲಿಲ್ಲ. ॥ ೭ ॥ ಅಲರ್ಕನ ಪುತ್ರನು ಸಂತತಿ. ಸಂತತಿಗೆ ಸುನೀಥ, ಸುನೀಥನಿಗೆ ಸುಕೇತನ, ಸುಕೇತನನಿಗೆ ಧರ್ಮಕೇತು, ಧರ್ಮಕೇತುವಿಗೆ ಸತ್ಯಕೇತು ಹುಟ್ಟಿದನು. ॥ ೮ ॥ ಸತ್ಯಕೇತುವಿಗೆ ಧೃಷ್ಟಕೇತು, ಧೃಷ್ಟಕೇತುವಿನಿಂದ ರಾಜಾಸುಕುಮಾರನು, ಸುಕುಮಾರ ನಿಂದ ವೀತಿಹೋತ್ರ, ವೀತಿಹೋತ್ರನಿಂದ ಭರ್ಗ ಮತ್ತು ಭರ್ಗ ನಿಂದ ರಾಜಾ ಭಾರ್ಗಭೂಮಿಯ ಜನ್ಮವಾಯಿತು. ॥ ೯ ॥

ಇವರೆಲ್ಲರೂ ಕ್ಷತ್ರವೃದ್ಧನ ವಂಶದಲ್ಲಿ ಕಾಶಿಯಿಂದ ಉತ್ಪನ್ನರಾದ ರಾಜರು. ರಂಭನಿಗೆ ರಭಸನೆಂಬ ಪುತ್ರನಿದ್ದನು. ಅವನಿಂದ ಗಂಭೀರ, ಗಂಭೀರನಿಂದ ಅಕ್ರಿಯನ ಜನ್ಮವಾಯಿತು. ॥ ೧೦ ॥ ಅಕ್ರಿಯನ ಪತ್ನಿಯಿಂದ ಬ್ರಾಹ್ಮಣವಂಶವು ನಡೆಯಿತು. ಈಗ ಅನೇನಾ ಇವನ ವಂಶವನ್ನು ಕೇಳು. ಅನೇನನಿಗೆ ಶುದ್ಧನೆಂಬ ಪುತ್ರ ನಿದ್ದನು. ಶುದ್ಧನಿಗೆ ಶುಚಿ, ಶುಚಿಗೆ ತ್ರಿಕಕುದ್, ತ್ರಿಕಕುದನಿಗೆ ಧರ್ಮ ಸಾರಥಿ ಹುಟ್ಟಿದನು. ॥ ೧೧ ॥ ಧರ್ಮಸಾರಥಿಗೆ ಶಾಂತರ ಯನೆಂಬ ಪುತ್ರನಿದ್ದನು. ಅವನು ಆತ್ಮಜ್ಞಾನಿಯಾದ್ದರಿಂದ ಕೃತಕೃತ್ಯ ನಾಗಿದ್ದನು. ಆದ್ದರಿಂದ ಅವನಿಗೆ ಸಂತಾನದ ಇಚ್ಛೆಯಿರಲಿಲ್ಲ. ಪರೀಕ್ಷಿತನೇ! ಆಯುವಿನ ಪುತ್ರ ರಜಿಗೆ ಅತ್ಯಂತ ತೇಜಸ್ವೀ ಐದು ನೂರು ಪುತ್ರರಿದ್ದರು. ॥ ೧೨ ॥

ದೇವೈರಭ್ಯರ್ಥಿತೋ ದೈತ್ಯಾನ್ಹತ್ವೇಂದ್ರಾಯಾದದಾದ್ದಿವಮ್ ।
ಇಂದ್ರಸ್ತಸ್ಮೈ ಪುನರ್ದತ್ತ್ವಾ ಗೃಹೀತ್ವಾ ಚರಣೌ ರಜೇಃ
॥ ೧೩ ॥

ಆತ್ಮಾನಮರ್ಪಯಾಮಾಸ ಪ್ರಹ್ಲಾದಾದ್ಯರಿಶಂಕಿತಃ ।
ಪಿತರ್ಯುಪರತೇ ಪುತ್ರಾ ಯಾಚಮಾನಾಯ ನೋ ದದುಃ
॥ ೧೪ ॥

ತ್ರಿವಿಷ್ಟಪಂ ಮಹೇಂದ್ರಾಯ ಯಜ್ಞಭಾಗಾನ್ಸಮಾದದುಃ ।
ಗುರುಣಾ ಹೂಯಮಾನೇಽಗ್ನೌ ಬಲಭಿತ್ತನಯಾನ್ರಜೇಃ
॥ ೧೫ ॥

ಅವಧೀದ್ಭ್ರಂಶಿತಾನ್ಮಾರ್ಗಾನ್ನ ಕಶ್ಚಿದವಶೇಷಿತಃ ।
ಕುಶಾತ್ಪ್ರತಿಃ ಕ್ಷಾತ್ರವೃದ್ಧಾತ್ಸಂಜಯಸ್ತತ್ಸುತೋ ಜಯಃ
॥ ೧೬ ॥

ತತಃ ಕೃತಃ ಕೃತಸ್ಯಾಪಿ ಜಜ್ಞೇ ಹರ್ಯವನೋ ನೃಪಃ ।
ಸಹದೇವಸ್ತತೋ ಹೀನೋ ಜಯಸೇನಸ್ತು ತತ್ಸುತಃ
॥ ೧೭ ॥

ಸಂಕೃತಿಸ್ತಸ್ಯ ಚ ಜಯಃ ಕ್ಷತ್ರಧರ್ಮಾ ಮಹಾರಥಃ ।
ಕ್ಷತ್ರವೃದ್ಧಾನ್ವಯಾ ಭೂಪಾಃ ಶೃಣು ವಂಶಂ ಚ ನಾಹುಷಾತ್
॥ ೧೮ ॥

ದೇವತೆಗಳ ಪ್ರಾರ್ಥನೆಯಿಂದ ರಜಿಯು ದೈತ್ಯರನ್ನು ವಧಿಸಿ ಇಂದ್ರನಿಗೆ ಸ್ವರ್ಗರಾಜ್ಯವನ್ನು ಕೊಟ್ಟನು. ಆದರೆ ಅವನು ಪ್ರಹ್ಲಾದಾದಿ ತನ್ನ ಶತ್ರುಗಳಿಂದ ಭಯ ಗೊಂಡಿದ್ದನು. ಅದಕ್ಕಾಗಿ ಅವನು ಸ್ವರ್ಗವನ್ನು ಪುನಃ ರಜಿಗೇ ಮರಳಿಸಿದನು. ಅವನ ಕಾಲುಹಿಡಿದು ಅವನಿಗೆ ತನ್ನ ರಕ್ಷಣೆಯ ಹೊಣೆಯನ್ನು ಒಪ್ಪಿಸಿದನು. ರಜಿಯ ಮೃತ್ಯುವಾದಾಗ ಇಂದ್ರನು ಬೇಡಿದರೂ ರಜಿಯ ಪುತ್ರರು ಸ್ವರ್ಗವನ್ನು ಮರಳಿಕೊಡಲಿಲ್ಲ. ಅವರು ಸ್ವತಃ ಯಜ್ಞಗಳ ಭಾಗವನ್ನೂ ಪಡೆಯುತ್ತಿದ್ದರು. ಆಗ ಗುರುಗಳಾದ ಬೃಹಸ್ಪತ್ಯಾಚಾರ್ಯರು ಇಂದ್ರನ ಪ್ರಾರ್ಥನೆಯಂತೆ ಅಭಿಚಾರಿಕ ವಿಧಿಯಿಂದ ಹೋಮವನ್ನು ಮಾಡಿದರು. ಇದರಿಂದ ಅವರು ಧರ್ಮಭ್ರಷ್ಟರಾಗಿ ಹೋದರು. ಆಗ ಇಂದ್ರನು ಅನಾಯಾಸವಾಗಿ ಆ ಎಲ್ಲ ರಜಿಯ ಪುತ್ರರನ್ನು ಕೊಂದುಹಾಕಿದನು. ಅವರಲ್ಲಿ ಯಾರೂ ಉಳಿಯಲಿಲ್ಲ. ಕ್ಷತ್ರವೃದ್ಧನ ಮೊಮ್ಮಗ ಕುಶನಿಂದ ಪ್ರತಿ, ಪ್ರತಿಯಿಂದ ಸಂಜಯ, ಸಂಜಯನಿಂದ ಜಯ ಎಂಬ ಮಗನು ಹುಟ್ಟಿದನು. ॥ ೧೩-೧೬ ॥ ಜಯನಿಂದ ಕೃತ, ಕೃತನಿಂದ ಹರ್ಯವನ, ಹರ್ಯವನನಿಂದ ಸಹದೇಹ, ಸಹದೇವ ನಿಂದ ಹೀನ, ಹೀನನಿಂದ ಜಯಸೇನನೆಂಬ ಪುತ್ರನು ಹುಟ್ಟಿದನು. ॥ ೧೭ ॥ ಜಯಸೇನನಿಂದ ಸಂಕೃತಿ, ಸಂಕೃತಿಗೆ ಮಹಾರಥಿ ವೀರ ಶಿರೋಮಣಿ ಜಯನೆಂಬ ಪುತ್ರನಾದನು. ಕ್ಷತ್ರವೃದ್ಧನ ವಂಶ ಪರಂಪರೆಯಲ್ಲಿ ಇಷ್ಟೇ ರಾಜರಾದರು. ಈಗ ನಹುಷನ ವಂಶದ ವರ್ಣನೆಯನ್ನು ಕೇಳು. ॥ ೧೮ ॥

*ಹದಿನೇಳನೆಯ ಅಧ್ಯಾಯವು ಮುಗಿಯಿತು. ॥ ೧೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ
ಚಂದ್ರವಂಶಾನುವರ್ಣನೇ ಸಪ್ತದಶೋಽಧ್ಯಾಯಃ ॥ ೧೭ ॥

# ಹದಿನೆಂಟನೆಯ ಅಧ್ಯಾಯ

## ಯಯಾತಿಯ ಚರಿತ್ರೆ

*ಶ್ರೀಶುಕ ಉವಾಚ*

ಯತಿರ್ಯಯಾತಿಃ ಸಂಯಾತಿರಾಯತಿರ್ವಿಯತಿಃ ಕೃತಿಃ ।
ಷಡಿಮೇ ನಹುಷಸ್ಯಾಸನ್ನಿಂದ್ರಿಯಾಣೀವ ದೇಹಿನಃ
॥ ೧ ॥

ರಾಜ್ಯಂ ನೈಚ್ಛದ್ಯತಿಃ ಪಿತ್ರಾ ದತ್ತಂ ತತ್ಪರಿಣಾಮವಿತ್ ।
ಯತ್ರ ಪ್ರವಿಷ್ಟಃ ಪುರುಷ ಆತ್ಮಾನಂ ನಾವಬುಧ್ಯತೇ
॥ ೨ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ದೇಹಧಾರಿಗಳಿಗೆ ಆರು ಇಂದ್ರಿಯಗಳು ಇರುವಂತೆ ನಹುಷನಿಗೆ ಯತಿ, ಯಯಾತಿ, ಸಂಯಾತಿ, ಆಯತಿ, ವಿಯತಿ ಮತ್ತು ಕೃತಿ ಗಳೆಂಬ ಆರುಮಂದಿ ಮಕ್ಕಳಿದ್ದರು. ॥ ೧ ॥ ನಹುಷನು ತನ್ನ ಹಿರಿಯಮಗನಾದ ಯತಿಗೆ ರಾಜ್ಯವನ್ನು ಕೊಡಬೇಕೆಂದು ಬಯಸು ತ್ತಿದ್ದನು. ಆದರೆ ಅವನು ಅದನ್ನು ಸ್ವೀಕರಿಸಲಿಲ್ಲ. ಏಕೆಂದರೆ, ಯತಿಯು ರಾಜ್ಯಭಾರವನ್ನು ವಹಿಸಿಕೊಂಡರೆ ಅದರಿಂದ ಉಂಟಾಗುವ ಪರಿಣಾಮವನ್ನು ಚೆನ್ನಾಗಿ ಅರಿತಿದ್ದನು. ರಾಜ್ಯಭಾರ ದಲ್ಲಿ ತೊಡಗಿದ ಮನುಷ್ಯನು ತನ್ನ ಆತ್ಮಸ್ವರೂಪವನ್ನು ಅರಿತುಕೊಳ್ಳ ಲಾರನು. ॥ ೨ ॥

ಪಿತರಿ ಭ್ರಂಶಿತೇ ಸ್ಥಾನಾದಿಂದ್ರಾಣ್ಯಾ ಧರ್ಷಣಾದ್ದ್ವಿಜೈಃ ।
ಪ್ರಾಪಿತೇಽಜಗರತ್ವಂ ವೈ ಯಯಾತಿರಭವನ್ನೃಪಃ ॥ ೩ ॥

ಚತಸೃಷ್ವಾದಿಶದ್ದಿಕ್ಷು ಭ್ರಾತೄನ್ಭ್ರಾತಾ ಯವೀಯಸಃ ।
ಕೃತದಾರೋ ಜುಗೋಪೋರ್ವೀಂ ಕಾವ್ಯಸ್ಯ ವೃಷಪರ್ವಣಃ ॥ ೪ ॥

*ರಾಜೋವಾಚ*

ಬ್ರಹ್ಮರ್ಷಿರ್ಭಗವಾನ್ಕಾವ್ಯಃ ಕ್ಷತ್ರಬಂಧುಶ್ಚ ನಾಹುಷಃ ।
ರಾಜನ್ಯವಿಪ್ರಯೋಃ ಕಸ್ಮಾದ್ವಿವಾಹಃ ಪ್ರತಿಲೋಮಕಃ ॥ ೫ ॥

*ಶ್ರೀಶುಕ ಉವಾಚ*

ಏಕದಾ ದಾನವೇಂದ್ರಸ್ಯ ಶರ್ಮಿಷ್ಠಾ ನಾಮ ಕನ್ಯಕಾ ।
ಸಖೀಸಹಸ್ರಸಂಯುಕ್ತಾ ಗುರುಪುತ್ರ್ಯಾ ಚ ಭಾಮಿನೀ ॥ ೬ ॥

ದೇವಯಾನ್ಯಾ ಪುರೋದ್ಯಾನೇ ಪುಷ್ಪಿತದ್ರುಮಸಂಕುಲೇ ।
ವ್ಯಚರತ್ಕಲಗೀತಾಲಿನಲಿನೀಪುಲಿನೇಽಬಲಾ ॥ ೭ ॥

ತಾ ಜಲಾಶಯಮಾಸಾದ್ಯ ಕನ್ಯಾಃ ಕಮಲಲೋಚನಾಃ ।
ತೀರೇ ನ್ಯಸ್ಯ ದುಕೂಲಾನಿ ವಿಜಹ್ರುಃ ಸಿಂಚತೀರ್ಮಿಥಃ ॥ ೮ ॥

ವೀಕ್ಷ್ಯ ವ್ರಜಂತಂ ಗಿರಿಶಂ ಸಹ ದೇವ್ಯಾ ವೃಷಸ್ಥಿತಮ್ ।
ಸಹಸೋತ್ತೀರ್ಯ ವಾಸಾಂಸಿ ಪರ್ಯಧುರ್ವ್ರೀಡಿತಾಃ ಸ್ತ್ರಿಯಃ ॥ ೯ ॥

ಶರ್ಮಿಷ್ಠಾಜಾನತೀ ವಾಸೋ ಗುರುಪುತ್ರ್ಯಾಃ ಸಮವ್ಯಯತ್ ।
ಸ್ವೀಯಂ ಮತ್ವಾ ಪ್ರಕುಪಿತಾ ದೇವಯಾನೀದಮಬ್ರವೀತ್ ॥ ೧೦ ॥

ಅಹೋ ನಿರೀಕ್ಷ್ಯತಾಮಸ್ಯಾ ದಾಸ್ಯಾಃ ಕರ್ಮ ಹ್ಯಸಾಮ್ಪ್ರತಮ್ ।
ಅಸ್ಮದ್ಧಾರ್ಯಂ ಧೃತವತೀ ಶುನೀವ ಹವಿರಧ್ವರೇ ॥ ೧೧ ॥

ಯೈರಿದಂ ತಪಸಾ ಸೃಷ್ಟಂ ಮುಖಂ ಪುಂಸಃ ಪರಸ್ಯ ಯೇ ।
ಧಾರ್ಯತೇ ಯೈರಿಹ ಜ್ಯೋತಿಃ ಶಿವಃ ಪಂಥಾಶ್ಚ ದರ್ಶಿತಃ ॥ ೧೨ ॥

ಇಂದ್ರನ ಪತ್ನಿಯಾದ ಶಚೀದೇವಿಯನ್ನು ಬಯಸಿದ ನಹುಷನನ್ನು ಬ್ರಾಹ್ಮಣರು ಇಂದ್ರಪದವಿಯಿಂದ ತಳ್ಳಿಬಿಟ್ಟರು ಮತ್ತು ಶಾಪವಿತ್ತು ಅಜಗರನನ್ನಾಗಿಸಿದರು. ಆಗ ಯಯಾತಿಯು ರಾಜ್ಯಸಿಂಹಾಸನವನ್ನು ಏರಿದನು. ॥ ೩ ॥ ಯಯಾತಿಯು ತನ್ನ ನಾಲ್ಕು ಸೋದರರನ್ನು ನಾಲ್ಕು ದಿಕ್ಕುಗಳಲ್ಲಿ ಅಧಿಪತಿಗಳನ್ನಾಗಿ ಮಾಡಿದನು. ತಾನು ಸ್ವತಃ ಶುಕ್ರಾಚಾರ್ಯರ ಪುತ್ರಿಯಾದ ದೇವಯಾನಿಯನ್ನೂ ಮತ್ತು ದೈತ್ಯರಾಜನಾದ ವೃಷಪರ್ವನ ಮಗಳಾದ ಶರ್ಮಿಷ್ಠೆಯನ್ನೂ ಪತ್ನಿಯರಾಗಿ ಪರಿಗ್ರಹಿಸಿ ಭೂಮಂಡಲವನ್ನು ಆಳುತ್ತಿದ್ದನು. ॥ ೪ ॥

**ಪರೀಕ್ಷಿದ್ರಾಜನು ಕೇಳಿದನು –** ಪೂಜ್ಯರೇ! ಮಹಾತ್ಮರಾದ ಶುಕ್ರಾಚಾರ್ಯರು ಬ್ರಾಹ್ಮಣರಾಗಿದ್ದರು. ಯಯಾತಿಯು ಕ್ಷತ್ರಿಯ. ಹೀಗಿದ್ದರೂ ಬ್ರಾಹ್ಮಣಕನ್ಯೆಗೂ ಕ್ಷತ್ರಿಯವರನಿಗೂ ಪ್ರತಿಲೋಮದ ವಿವಾಹವು ಹೇಗೆ ನಡೆಯಿತು ? ॥ ೫ ॥

**ಶ್ರೀಶುಕಮುನಿಗಳು ಹೇಳಿದರು –** ಪರೀಕ್ಷಿತನೇ! ದಾನವ ರಾಜನಾದ ವೃಷಪರ್ವನಿಗೆ ಮಾನಿಷ್ಠೆಯಾದ ಶರ್ಮಿಷ್ಠೆ ಎಂಬ ಮಗಳಿದ್ದಳು. ಆವಳು ಒಂದುದಿನ ಶುಕ್ರಾಚಾರ್ಯರ ಪುತ್ರಿಯಾದ ದೇವಯಾನಿ ಮತ್ತು ಸಾವಿರಾರು ಸಖಿಯರೊಂದಿಗೆ ತನ್ನ ರಾಜಧಾನಿಯ ಶ್ರೇಷ್ಠ ಉದ್ಯಾನವನದಲ್ಲಿ ಅಡ್ಡಾಡುತ್ತಿದ್ದಳು. ಆ ಪುಷ್ಪೋದ್ಯಾನವನದಲ್ಲಿ ಸುಂದರವಾದ ಪುಷ್ಪಗಳಿಂದ ಕೂಡಿದ ಅನೇಕ ವೃಕ್ಷಗಳಿದ್ದವು. ಅಲ್ಲಿ ಒಂದು ಅಂದವಾದ ಸರೋವರವು ಇದ್ದು, ಅದರಲ್ಲಿ ಕಮಲಗಳು ಅರಳಿದ್ದವು. ಆ ಕಮಲಗಳಲ್ಲಿ ದುಂಬಿಗಳು ಕುಳಿತು ಸುಮಧುರವಾಗಿ ಗುಂಜಾರವ ಮಾಡುತ್ತಿದ್ದವು. ಅವುಗಳ ಇಂಚರದಿಂದ ಸರೋವರದ ದಡಗಳು ಪ್ರತಿಧ್ವನಿಸುತ್ತಿದ್ದವು. ॥ ೬-೭ ॥ ಸರೋವರದ ಸಮೀಪಕ್ಕೆ ಸಾರಿದ ಆ ಸುಂದರಿಯರು ತಮ್ಮ-ತಮ್ಮ ವಸ್ತ್ರಗಳನ್ನು ಸರೋವರದ ದಡದಲ್ಲಿ ಬಿಚ್ಚಿಟ್ಟು ನೀರಿಗಿಳಿದು ಒಬ್ಬರು ಮತ್ತೊಬ್ಬರ ಮೇಲೆ ನೀರನ್ನೆರಚುತ್ತಾ ಜಲಕ್ರೀಡೆಯಾಡುತ್ತಿದ್ದರು. ॥ ೮ ॥ ಅದೇ ಸಮಯದಲ್ಲಿ ಅತ್ತಕಡೆಯಿಂದ ಪಾರ್ವತಿದೇವಿಯೊಂದಿಗೆ ನಂದಿಯನ್ನೇರಿ ಬರುತ್ತಿದ್ದ ಭಗವಾನ್ ಶಂಕರನನ್ನು ಆ ಕನ್ಯೆಯರು ನೋಡಿದರು. ಪರಶಿವನನ್ನು ನೋಡುತ್ತಲೇ ನಾಚಿಕೆಯಿಂದ ಮುದುಡಿಹೋದ ಲಲನೆಯರು ಮೇಲೆ ಬಂದು ಲಗುಬಗೆಯಿಂದ ವಸ್ತ್ರಗಳನ್ನು ಉಟ್ಟುಕೊಂಡರು. ॥ ೯ ॥ ಅವಸರದ ಪರಿಸ್ಥಿತಿಯಲ್ಲಿ ಶರ್ಮಿಷ್ಠೆಯು ಅರಿಯದೆ ದೇವಯಾನಿಯ ವಸ್ತ್ರವನ್ನು ತೊಟ್ಟುಕೊಂಡಳು. ಇದರಿಂದ ದೇವಯಾನಿಯು ಕ್ರೋಧದಿಂದ ಕಿಡಿ-ಕಿಡಿಯಾಗಿ ಶರ್ಮಿಷ್ಠೆಯನ್ನು ಮೂದಲಿಸುತ್ತಾ ಹೇಳಿದಳು –॥ ೧೦ ॥ ಸಖಿಯರೇ! ಈ ದಾಸಿಯು ಎಂತಹ ಅನುಚಿತವಾದ ಕಾರ್ಯವನ್ನು ಮಾಡಿರುವಳೆಂಬುದನ್ನು ನೋಡಿರಲ್ಲ! ಅಯ್ಯೋ! ನಾಯಿಯು ಯಜ್ಞದ ಹವಿಸ್ಸನ್ನು ತಿಂದುಹಾಕುವಂತೆ ನಾವು ಧರಿಸಬೇಕಾದ ವಸ್ತ್ರವನ್ನು ಈಕೆ ಧರಿಸಿದ್ದಾಳಲ್ಲ! ॥ ೧೧ ॥ ಯಾವ ಬ್ರಾಹ್ಮಣರು ತಮ್ಮ ತಪೋಬಲದಿಂದ ಈ ಪ್ರಪಂಚವನ್ನು ಸೃಷ್ಟಿಸಿರುವರೋ, ಯಾರು ಪರಮಪುರುಷ ಪರಮಾತ್ಮನ ಮುಖರೂಪರಾಗಿದ್ದಾರೋ, ಯಾರು ತಮ್ಮ ಹೃದಯದಲ್ಲಿ ನಿರಂತರವಾಗಿ ಜ್ಯೋತಿರ್ಮಯ ಪರಮಾತ್ಮನನ್ನು

ಯಾನ್ವಂದನ್ತ್ಯುಪತಿಷ್ಠಂತೇ ಲೋಕನಾಥಾಃ ಸುರೇಶ್ವರಾಃ ।
ಭಗವಾನಪಿ ವಿಶ್ವಾತ್ಮಾ ಪಾವನಃ ಶ್ರೀನಿಕೇತನಃ ॥ ೧೩ ॥

ವಯಂ ತತ್ರಾಪಿ ಭೃಗವಃ ಶಿಷ್ಯೋಽಸ್ಯಾ ನಃ ಪಿತಾಸುರಃ ।
ಅಸ್ಮದ್ಧಾರ್ಯಂ ಧೃತವತೀ ಶೂದ್ರೋ ವೇದಮಿವಾಸತೀ ॥ ೧೪ ॥

ಏವಂ ಶಪಂತೀಂ ಶರ್ಮಿಷ್ಠಾ ಗುರುಪುತ್ರೀಮಭಾಷತ ।
ರುಷಾ ಶ್ವಸಂತ್ಯುರಂಗೀವ ಧರ್ಷಿತಾ ದಷ್ಟದಚ್ಛದಾ ॥ ೧೫ ॥

ಆತ್ಮವೃತ್ತಮವಿಜ್ಞಾಯ ಕತ್ಥಸೇ ಬಹು ಭಿಕ್ಷುಕಿ ।
ಕಿಂ ನ ಪ್ರತೀಕ್ಷಸೇಽಸ್ಮಾಕಂ ಗೃಹಾನ್ಬಲಿಭುಜೋ ಯಥಾ ॥ ೧೬ ॥

ಏವಂವಿಧೈಃ ಸುಪರುಷೈಃ ಕ್ಷಿಪ್ತ್ವಾಽಽಚಾರ್ಯಸುತಾಂ ಸತೀಮ್ ।
ಶರ್ಮಿಷ್ಠಾ ಪ್ರಾಕ್ಷಿಪತ್ಕೂಪೇ ವಾಸ ಆದಾಯ ಮನ್ಯುನಾ ॥ ೧೭ ॥

ತಸ್ಯಾಂ ಗತಾಯಾಂ ಸ್ವಗೃಹಂ ಯಯಾತಿರ್ಮೃಗಯಾಂ ಚರನ್ ।
ಪ್ರಾಪ್ತೋ ಯದೃಚ್ಛಯಾ ಕೂಪೇ ಜಲಾರ್ಥೀ ತಾಂ ದದರ್ಶ ಹ ॥ ೧೮ ॥

ದತ್ತ್ವಾ ಸ್ವಮುತ್ತರಂ ವಾಸಸ್ತಸ್ಯೈ ರಾಜಾ ವಿವಾಸಸೇ ।
ಗೃಹೀತ್ವಾ ಪಾಣಿನಾ ಪಾಣಿಮುಜ್ಜಹಾರ ದಯಾಪರಃ ॥ ೧೯ ॥

ತಂ ವೀರಮಾಹೌಶನಸೀ ಪ್ರೇಮನಿರ್ಭರಯಾ ಗಿರಾ ।
ರಾಜಂಸ್ತ್ವಯಾ ಗೃಹೀತೋ ಮೇ ಪಾಣಿಃ ಪರಪುರಂಜಯ ॥ ೨೦ ॥

ಹಸ್ತಗ್ರಾಹೋಽಪರೋ ಮಾ ಭೂದ್ಗೃಹೀತಾಯಾಸ್ತ್ವಯಾ ಹಿ ಮೇ ।
ಏಷ ಈಶಕೃತೋ ವೀರ ಸಂಬಂಧೋ ನಾ ನ ಪೌರುಷಃ ।
ಯದಿದಂ ಕೂಪಲಗ್ನಾಯಾ ಭವತೋ ದರ್ಶನಂ ಮಮ ॥ ೨೧ ॥

ಧರಿಸಿಕೊಂಡಿರುವರೋ, ಯಾರು ಸಮಸ್ತ ಪ್ರಾಣಿಗಳಿಗಾಗಿ ಶ್ರೇಯಸ್ಸಿಗಾಗಿ ವೈದಿಕಮಾರ್ಗವನ್ನು ನಿರ್ದೇಶಿಸಿರುವರೋ, ಯಾರ ಪಾದಕಮಲಗಳಿಗೆ ಸಮಸ್ತ ಲೋಕಪಾಲರೂ, ಬ್ರಹ್ಮೇಂದ್ರಾದಿಗಳೂ ವಂದಿಸುತ್ತಾ ಅವರ ಸೇವೆಯಲ್ಲಿ ನಿರತರಾಗಿರುವರೋ, ಲಕ್ಷ್ಮೀದೇವಿಗೆ ಏಕಮಾತ್ರ ಆಶ್ರಯನಾದ ಪರಮ ಪಾವನ ವಿಶ್ವಾತ್ಮಾ ಭಗವಂತನೂ ಕೂಡ ವಂದಿಸಿ, ಸ್ತುತಿಸುತ್ತಿರುವನೋ, ಅಂತಹ ಬ್ರಾಹ್ಮಣರಲ್ಲಿ ನಾವು ಸರ್ವಶ್ರೇಷ್ಠ ಭೃಗುವಂಶೀಯರಾಗಿದ್ದೇವೆ. ಇವಳ ತಂದೆಯಾದರೋ ಅಸುರನಾಗಿದ್ದು ನಮ್ಮ ಶಿಷ್ಯನಾಗಿದ್ದಾನೆ. ಹೀಗಿದ್ದರೂ ಈ ದುಷ್ಟೆಯು ಶೂದ್ರನು ವೇದವನ್ನು ಓದುವಂತೆ ನಮ್ಮ ಬಟ್ಟೆಗಳನ್ನು ಉಟ್ಟುಕೊಂಡಿರುವಳಲ್ಲ. ॥ ೧೨-೧೪ ॥ ದೇವಯಾನಿಯು ಹೀಗೆ ಬಯ್ಯತೊಡಗಿದಾಗ ಶರ್ಮಿಷ್ಠೆಯು ಕ್ರೋಧದಿಂದ ಕಿಡಿ-ಕಿಡಿಯಾಗಿ, ಏಟುತಿಂದ ಸರ್ಪಿಣಿಯು ಬುಸುಗುಟ್ಟುವಂತೆ ನಿಟ್ಟುಸಿರು ಬಿಡುತ್ತಿದ್ದಳು. ತುಟಿಯನ್ನು ಕಡಿಯುತ್ತಾ ಇಂತೆಂದಳು – ॥ ೧೫ ॥ ಎಲೆಗೆ ಭಿಕ್ಷುಕಿಯೇ ! ಮೊದಲು ನಿನ್ನ ಯೋಗ್ಯತೆಯೇನೆಂಬುದನ್ನು ಅರಿತುಕೊಳ್ಳದೆ ಬಡ ಬಡಿಸುತ್ತಿರುವೆಯಲ್ಲ? ಕಾಗೆಗಳೂ, ನಾಯಿಗಳೂ ರೊಟ್ಟಿಯ ಚೂರಿಗಾಗಿ ನಮ್ಮ ಅರಮನೆಯ ಬಾಗಿಲಲ್ಲಿ ಕಾಯುವಂತೆ ನೀವೂ ಕೂಡ ನಮ್ಮ ಅರಮನೆಯ ಬಾಗಿಲಿಗೆ ಬಂದು ಕಾಯುತ್ತಿರಲಿಲ್ಲವೇ ? ॥ ೧೬ ॥ ಶರ್ಮಿಷ್ಠೆಯು ಇಂತಹ ಕಟುನುಡಿಗಳಿಂದ ಆಚಾರ್ಯಪುತ್ರಿಯಾದ ದೇವಯಾನಿಯನ್ನು ತಿರಸ್ಕರಿಸಿ, ನಿಂದಿಸುತ್ತಾ, ಕೋಪಾವಿಷ್ಟಳಾಗಿ ದೇವಯಾನಿಯ ವಸ್ತ್ರಗಳನ್ನು ಕಿತ್ತು ಕೊಂಡು ಅವಳನ್ನು ಬಾವಿಯಲ್ಲಿ ತಳ್ಳಿಬಿಟ್ಟಳು. ॥ ೧೭ ॥

ಶರ್ಮಿಷ್ಠೆಯು ಹೊರಟುಹೋದ ಬಳಿಕ ಕಾಲ-ಕರ್ಮ ಸಂಯೋಗದಿಂದ ಅದೇ ಸ್ಥಳಕ್ಕೆ ಯಯಾತಿಯು ಬೇಟೆಯಾಡಲು ಬಂದನು. ನೀರನ್ನು ಅಪೇಕ್ಷಿಸಿದ್ದ ರಾಜನು ನೀರಿಗಾಗಿ ಬಾವಿಯಲ್ಲಿ ಇಣಕಿ ನೋಡಿದಾಗ ಅಲ್ಲಿ ವಿವಸ್ತ್ರಳಾಗಿದ್ದ ದೇವಯಾನಿಯನ್ನು ನೋಡಿದನು. ॥ ೧೮ ॥ ಆಗ ಅವಳು ವಸ್ತ್ರಹೀನೆಯಾದ್ದರಿಂದ ತನ್ನ ಉತ್ತರೀಯವನ್ನೇ ಆಕೆಗೆ ಇತ್ತು ದಯೆಯಿಂದ ತನ್ನ ಕೈಯಿಂದ ಆಕೆಯ ಕೈಹಿಡಿದು ಆಕೆಯನ್ನು ಮೇಲಕ್ಕೆ ಎತ್ತಿಕೊಂಡನು. ॥ ೧೯ ॥ ಅದರಿಂದ ದೇವಯಾನಿಯ ಮನಸ್ಸಿನಲ್ಲಿ ಆತನಲ್ಲಿ ಪ್ರೇಮ ವಂಕುರಿಸಿತು. ಪ್ರೇಮಪೂರ್ಣವಾದ ಸುಮಧುರವಾದ ಮಾತಿನಿಂದ ವೀರ ಯಯಾತಿಯಲ್ಲಿ ಹೀಗೆಂದಳು – ವೀರಶಿರೋಮಣಿಯಾದ ರಾಜನೇ ! ನೀನಿಂದು ನನ್ನ ಕೈಯನ್ನು ಹಿಡಿದುಕೊಂಡೆ. ನೀನು ಪಾಣಿಗ್ರಹಣಮಾಡಿದ ಈ ಕೈಯನ್ನು ಬೇರೆ ಯಾರೂ ಹಿಡಿಯದಿರಲಿ. ವೀರಶ್ರೇಷ್ಠನೇ ! ಬಾವಿಗೆ ಬಿದ್ದದ್ದರಿಂದ ನನಗೆ ಅಚಾನಕವಾಗಿ ನಿಮ್ಮ ದರ್ಶನವಾಯಿತು. ಇದು ಭಗವಂತನೇ ಮಾಡಿದ ಸಂಬಂಧವೆಂದು ತಿಳಿಯಬೇಕು. ಇದರಲ್ಲಿ ದೈವವಲ್ಲದೆ ನಮ್ಮದಾಗಲೀ ಅಥವಾ ಬೇರೆಯಾರದ್ದಾಗಲೀ ಯಾವುದೇ ಪ್ರಯತ್ನವು ಇಲ್ಲ. ॥ ೨೦-೨೧ ॥

ನ ಬ್ರಾಹ್ಮಣೋ ಮೇ ಭವಿತಾ ಹಸ್ತಗ್ರಾಹೋ ಮಹಾಭುಜ ।
ಕಚಸ್ಯ ಬಾರ್ಹಸ್ಪತ್ಯಸ್ಯ ಶಾಪಾದ್ಯಮಶಪಂ ಪುರಾ
॥ ೨೨ ॥

ಯಯಾತಿರನಭಿಪ್ರೇತಂ ದೈವೋಪಹೃತಮಾತ್ಮನಃ ।
ಮನಸ್ತು ತದ್ಗತಂ ಬುದ್ಧ್ವಾ ಪ್ರತಿಜಗ್ರಾಹ ತದ್ವಚಃ
॥ ೨೩ ॥

ಗತೇ ರಾಜನಿ ಸಾ ವೀರೇ ತತ್ರ ಸ್ಮ ರುದತೀ ಪಿತುಃ ।
ನ್ಯವೇದಯತ್ತತಃ ಸರ್ವಮುಕ್ತಂ ಶರ್ಮಿಷ್ಠಯಾ ಕೃತಮ್
॥ ೨೪ ॥

ದುರ್ಮನಾ ಭಗವಾನ್ಕಾವ್ಯಃ ಪೌರೋಹಿತ್ಯಂ ವಿಗರ್ಹಯನ್ ।
ಸ್ತುವನ್ವೃತ್ತಿಂ ಚ ಕಾಪೋತೀಂ ದುಹಿತ್ರಾ ಸ ಯಯೌ ಪುರಾತ್
॥ ೨೫ ॥

ವೃಷಪರ್ವಾ ತಮಾಜ್ಞಾಯ ಪ್ರತ್ಯನೀಕವಿವಕ್ಷಿತಮ್ ।
ಗುರುಂ ಪ್ರಸಾದಯನ್ಮೂರ್ಧ್ನಾ ಪಾದಯೋಃ ಪತಿತಃ ಪಥಿ
॥ ೨೬ ॥

ಕ್ಷಣಾರ್ಧಮನ್ಯುರ್ಭಗವಾನ್ ಶಿಷ್ಯಂ ವ್ಯಾಚಷ್ಟ ಭಾರ್ಗವಃ ।
ಕಾಮೋಽಸ್ಯಾಃ ಕ್ರಿಯತಾಂ ರಾಜನ್ನೈನಾಂ ತ್ಯಕ್ತುಮಿಹೋತ್ಸಹೇ
॥ ೨೭ ॥

ತಥೇತ್ಯವಸ್ಥಿತೇ ಪ್ರಾಹ ದೇವಯಾನೀ ಮನೋಗತಮ್ ।
ಪಿತ್ರಾ ದತ್ತಾ ಯತೋ ಯಾಸ್ಯೇ ಸಾನುಗಾ ಯಾತು ಮಾಮನು
॥ ೨೮ ॥

ಸ್ವಾನಾಂ ತತ್ಸಂಕಟಂ ವೀಕ್ಷ್ಯ ತದರ್ಥಸ್ಯ ಚ ಗೌರವಮ್ ।
ದೇವಯಾನೀಂ ಪರ್ಯಚರತ್ ಸ್ತ್ರೀಸಹಸ್ರೇಣ ದಾಸವತ್
॥ ೨೯ ॥

ನಾಹುಷಾಯ ಸುತಾಂ ದತ್ತ್ವಾ ಸಹ ಶರ್ಮಿಷ್ಠಯೋಶನಾಃ ।
ತಮಾಹ ರಾಜನ್ ಶರ್ಮಿಷ್ಠಾಮಾಧಾಸ್ತಲ್ಪೇ ನ ಕರ್ಹಿಚಿತ್
॥ ೩೦ ॥

ವೀರಶ್ರೇಷ್ಠನೇ ! ಮೊದಲು ನಾನು ಬೃಹಸ್ಪತಿಯ ಪುತ್ರನಾದ ಕಚನಿಗೆ ಶಾಪವಿತ್ತಿದ್ದೆ. ಅದರಿಂದ ಅವನೂ ನನ್ನನ್ನು ಶಪಿಸಿದ್ದನು. ಈ ಕಾರಣದಿಂದಲೇ ಯಾವ ಬ್ರಾಹ್ಮಣನು ನನ್ನ ಪಾಣಿಗ್ರಹಣ ಮಾಡಲಾರನು.* ॥ ೨೨ ॥ ಪ್ರತಿಲೋಮ ವಿವಾಹವು ಶಾಸ್ತ್ರಕ್ಕೆ ವಿರುದ್ಧವಾದುದರಿಂದ ಯಯಾತಿಗೆ ಈ ಸಂಬಂಧವು ಇಷ್ಟವಿರಲಿಲ್ಲ. ಆದರೆ ಪ್ರಾರಬ್ಧವೇ ನನಗೆ ಈ ಸಂಬಂಧವನ್ನು ಒದಗಿಸಿಕೊಟ್ಟಿದೆ. ಮೇಲಾಗಿ ನನ್ನ ಮನಸ್ಸೂ ಇವಳಲ್ಲಿ ಅನುರಕ್ತವಾಗಿದೆ ಎಂದು ಯೋಚಿಸಿ ಆಕೆಯ ಮಾತನ್ನು ಒಪ್ಪಿ ಕೊಂಡನು. ॥ ೨೩ ॥

ವೀರ ಯಯಾತಿಯು ಹೊರಟುಹೋದಾಗ ದೇವಯಾನಿಯು ಅಳುತ್ತಾ-ಕರೆಯುತ್ತಾ ತನ್ನ ತಂದೆಯಾದ ಶುಕ್ರಾಚಾರ್ಯರ ಬಳಿಗೆ ಬಂದು ಶರ್ಮಿಷ್ಠೆಯು ಮಾಡಿದುದೆಲ್ಲವನ್ನು ಹೇಳಿದಳು. ॥ ೨೪ ॥ ಶರ್ಮಿಷ್ಠೆಯ ವ್ಯವಹಾರದಿಂದ ಭಗವಾನ್ ಶುಕ್ರಾಚಾರ್ಯರ ಮನಸ್ಸಿಗೂ ಬೇಸರ ಉಂಟಾಯಿತು. ಅವರು ಪೌರೋಹಿತ್ಯ ವೃತ್ತಿಯನ್ನೇ ನಿಂದಿಸತೊಡಗಿದರು. ಕಾಪೋತವೃತ್ತಿಯನ್ನೇ ಶ್ಲಾಘಿಸುತ್ತಾ ಮಗಳೊಡನೆ ನಗರವನ್ನು ಬಿಟ್ಟು ಹೊರಟುಬಿಟ್ಟರು. ॥ ೨೫ ॥ ವೃಷಪರ್ವನಿಗೆ ಇದು ಗೊತ್ತಾಗುತ್ತಲೇ ಅವನ ಮನಸ್ಸಿನಲ್ಲಿ ಗುರುಗಳು ಎಲ್ಲಾದರೂ ಶತ್ರುಗಳ ವಿಜಯವನ್ನು ಮಾಡಿಸುವರೋ, ಅಥವಾ ನನಗೆ ಶಾಪಕೊಡಬಹುದೇ ಎಂದು ಶಂಕಿಸಿ ಅವರನ್ನು ಒಲಿಸಿಕೊಳ್ಳಲು ಅವರ ಹಿಂದೆಯೇ ಹೋಗಿ ದಾರಿಯಲ್ಲೇ ಚರಣಗಳಲ್ಲಿ ಶಿರವನ್ನಿಟ್ಟು ವಂದಿಸಿದನು. ॥ ೨೬ ॥ ಭಗವಾನ್ ಶುಕ್ರಾಚಾರ್ಯರ ಕ್ರೋಧವಾದರೋ ಕ್ಷಣ ಮಾತ್ರವಿತ್ತು. ಅವರು ವೃಷಪರ್ವನಿಗೆ ಹೇಳಿದರು – ರಾಜನೇ ! ನಾನು ನನ್ನ ಪುತ್ರಿ ದೇವಯಾನಿಯನ್ನು ಬಿಟ್ಟಿರಲಾರೆನು. ಆದಕ್ಕಾಗಿ ಆಕೆಯ ಇಚ್ಛೆಯನ್ನು ನೀನು ಪೂರ್ಣಗೊಳಿಸು. ಹಾಗಾದರೆ ನನಗೆ ಮರಳಿ ಬರುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ॥ ೨೭ ॥ ವೃಷಪರ್ವನು 'ಹಾಗೆಯೇ ಆಗಲಿ' ಎಂದು ಹೇಳಿ ಅವರ ಆಜ್ಞೆಯನ್ನು ಸ್ವೀಕರಿಸಿದಾಗ ದೇವಯಾನಿಯು ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಿದಳು – 'ತಂದೆಯೇ ! ನನ್ನನ್ನು ಯಾರಿಗೆ ಮದುವೆಮಾಡಿ ಕೊಡುವೆಯೋ ಹಾಗೂ ನಾನು ಎಲ್ಲಿಗೆ ಹೋಗುವೆನೋ, ಶರ್ಮಿಷ್ಠೆಯೂ ತನ್ನ ಸಖಿಯರೊಂದಿಗೆ ನನ್ನ ಸೇವೆಗಾಗಿ ಅಲ್ಲಿಗೆ ಬರಬೇಕು.'' ॥ ೨೮ ॥

ಶರ್ಮಿಷ್ಠೆಯು ತನ್ನ ಪರಿವಾರದವರ ಸಂಕಟವನ್ನೂ, ಅವರ ಕಾರ್ಯಗೌರವವನ್ನೂ ಕಂಡು ದೇವಯಾನಿಯ ಮಾತನ್ನು ಸ್ವೀಕರಿಸಿದಳು. ಆಕೆಯು ಒಂದು ಸಾವಿರ ಸಖಿಯರೊಂದಿಗೆ ದಾಸಿಯಂತೆ ದೇವಯಾನಿಯ ಸೇವೆಯಲ್ಲಿ ಇರತೊಡಗಿದಳು. ॥ ೨೯ ॥ ಶುಕ್ರಾಚಾರ್ಯರು ದೇವಯಾನಿಯ ವಿವಾಹವನ್ನು ಯಯಾತಿಯೊಂದಿಗೆ ನಡೆಸಿದರು ಮತ್ತು ಶರ್ಮಿಷ್ಠೆಯನ್ನು ದಾಸಿಯ ರೂಪದಲ್ಲಿ ಒಪ್ಪಿಸಿ ಹೇಳಿದರು – ರಾಜನೇ ! ಈ ಶರ್ಮಿಷ್ಠೆಯನ್ನು ನಿನ್ನ ಹಾಸಿಗೆಗೆ ಎಂದೂ ಬರಲು ಬಿಡಬಾರದು. ॥ ೩೦ ॥

* ಬೃಹಸ್ಪತಿಯ ಪುತ್ರ ಕಚನು ಶುಕ್ರಾಚಾರ್ಯರ ಬಳಿ ಮೃತಸಂಜೀವನೀ ವಿದ್ಯೆಯನ್ನು ಕಲಿಯುತ್ತಿದ್ದನು. ಅಧ್ಯಯನ ಮುಗಿಸಿ ಅವನು ಮನೆಗೆ ಹೊರಟಾಗ ದೇವಯಾನಿಯು ಅವನನ್ನು ವರಿಸಲು ಬಯಸಿದಳು. ಆದರೆ ಗುರುಪುತ್ರಿಯಾದ್ದರಿಂದ ಕಚನು ಆಕೆಯ ಇಂಗಿತವನ್ನು ಸ್ವೀಕರಿಸಲಿಲ್ಲ. ಅದರಿಂದ ಬೇಸರಗೊಂಡ ದೇವಯಾನಿಯು – 'ನೀನು ಕಲಿತ ವಿದ್ಯೆಯು ನಿಷ್ಫಲವಾಗಲಿ' ಎಂದು ಶಾಪವನ್ನು ಕೊಟ್ಟಳು. ಕಚನೂ ಕೂಡ ಆಕೆಯನ್ನು ಶಪಿಸಿದನು – 'ಯಾವ ಬ್ರಾಹ್ಮಣನೂ ನಿನ್ನನ್ನು ಪತ್ನಿಯಾಗಿ ಸ್ವೀಕರಿಸದೆ ಹೋಗಲಿ.' ಇದರಿಂದ ದೇವಯಾನಿಗೆ ಬ್ರಾಹ್ಮಣಪತಿಯು ದೊರಕುವುದು ಶಕ್ಯವಾಗಿರಲಿಲ್ಲ.

ವಿಲೋಕ್ಯೌಶನಸೀಂ ರಾಜನ್ ಶರ್ಮಿಷ್ಠಾ ಸಪ್ರಜಾಂ ಕ್ವಚಿತ್ ।
ತಮೇವ ವವ್ರೇ ರಹಸಿ ಸಖ್ಯಾಃ ಪತಿಮೃತೌ ಸತೀ ॥ ೩೧ ॥

ರಾಜಪುತ್ರ್ಯಾರ್ಥಿತೋಽಪತ್ಯೇ ಧರ್ಮಂ ಚಾವೇಕ್ಷ್ಯ ಧರ್ಮವಿತ್ ।
ಸ್ಮರಞ್ಛುಕ್ರವಚಃ ಕಾಲೇ ದಿಷ್ಟಮೇವಾಭ್ಯಪದ್ಯತ ॥ ೩೨ ॥

ಯದುಂ ಚ ತುರ್ವಸುಂ ಚೈವ ದೇವಯಾನೀ ವ್ಯಜಾಯತ ।
ದ್ರುಹ್ಯುಂ ಚಾನುಂ ಚ ಪೂರುಂ ಚ ಶರ್ಮಿಷ್ಠಾ ವಾರ್ಷಪರ್ವಣೀ ॥ ೩೩ ॥

ಗರ್ಭಸಂಭವಮಾಸುರ್ಯಾ ಭರ್ತುರ್ವಿಜ್ಞಾಯ ಮಾನಿನೀ ।
ದೇವಯಾನೀ ಪಿತುರ್ಗೇಹಂ ಯಯೌ ಕ್ರೋಧವಿಮೂರ್ಛಿತಾ ॥ ೩೪ ॥

ಪ್ರಿಯಾಮನುಗತಃ ಕಾಮೀ ವಚೋಭಿರುಪಮಂತ್ರಯನ್ ।
ನ ಪ್ರಸಾದಯಿತುಂ ಶೇಕೇ ಪಾದಸಂವಾಹನಾದಿಭಿಃ ॥ ೩೫ ॥

ಶುಕ್ರಸ್ತಮಾಹ ಕುಪಿತಃ ಸ್ತ್ರೀಕಾಮಾನೃತಪೂರುಷ ।
ತ್ವಾಂ ಜರಾ ವಿಶತಾಂ ಮಂದ ವಿರೂಪಕರಣೀ ನೃಣಾಮ್ ॥ ೩೬ ॥

*ಯಯಾತಿರುವಾಚ*

ಅತೃಪ್ತೋಽಸ್ಮ್ಯದ್ಯ ಕಾಮಾನಾಂ ಬ್ರಹ್ಮನ್ದುಹಿತರಿ ಸ್ಮ ತೇ ।
ವ್ಯತ್ಯಸ್ಯತಾಂ ಯಥಾಕಾಮಂ ವಯಸಾ ಯೋಽಭಿಧಾಸ್ಯತಿ ॥ ೩೭ ॥

ಇತಿ ಲಬ್ಧವ್ಯವಸ್ಥಾನಃ ಪುತ್ರಂ ಜ್ಯೇಷ್ಠ ಮವೋಚತ ।
ಯದೋ ತಾತ ಪ್ರತೀಚ್ಛೇಮಾಂ ಜರಾಂ ದೇಹಿ ನಿಜಂ ವಯಃ ॥ ೩೮ ॥

ಮಾತಾಮಹಕೃತಾಂ ವತ್ಸ ನ ತೃಪ್ತೋ ವಿಷಯೇಷ್ವಹಮ್ ।
ವಯಸಾ ಭವದೀಯೇನ ರಂಸ್ಯೇ ಕತಿಪಯಾಃ ಸಮಾಃ ॥ ೩೯ ॥

*ಯದುರುವಾಚ*

ನೋತ್ಸಹೇ ಜರಸಾ ಸ್ಥಾತುಮಂತರಾ ಪ್ರಾಪ್ತಯಾ ತವ ।
ಅವಿದಿತ್ವಾ ಸುಖಂ ಗ್ರಾಮ್ಯಂ ವೈತೃಷ್ಣ್ಯಂ ನೈತಿ ಪೂರುಷಃ ॥ ೪೦ ॥

ಪರೀಕ್ಷಿತನೇ ! ಕೆಲದಿವಸಗಳು ಕಳೆದನಂತರ ದೇವಯಾನಿಯು ಪುತ್ರವತಿಯಾದಳು. ಅವಳು ಪುತ್ರವತಿಯಾದುದನ್ನು ನೋಡಿ ಶರ್ಮಿಷ್ಠೆಯು ತನ್ನ ಋತುಕಾಲದಲ್ಲಿ ದೇವಯಾನಿಯ ಪತಿಯೊಡನೆ ಏಕಾಂತದಲ್ಲಿ ಸಮಾಗಮವನ್ನು ಯಾಚಿಸಿದಳು. ॥ ೩೧ ॥ ಶರ್ಮಿಷ್ಠೆಯ ಪುತ್ರಪ್ರಾಪ್ತಿಯ ಪ್ರಾರ್ಥನೆಯು ಧರ್ಮಸಂಗತವಾಗಿದೆ ಎಂದು ತಿಳಿದು ಧರ್ಮಜ್ಞನಾದ ಯಯಾತಿಯು ಶುಕ್ರಾಚಾರ್ಯರ ಮಾತು ನೆನಪಿನಲ್ಲಿದ್ದರೂ ಸಕಾಲದಲ್ಲಿ ಪ್ರಾರಬ್ಧಕ್ಕನುಸಾರ ಏನಾಗಬೇಕೋ ಅದು ಆಗಿಯೇ ತೀರುವುದು ಎಂದು ನಿಶ್ಚಯಿಸಿದನು. ॥ ೩೨ ॥ ದೇವಯಾನಿಗೆ ಯದು ಮತ್ತು ತುರ್ವಸು ಎಂಬ ಎರಡು ಮಕ್ಕಳಾದರು. ಹಾಗೆಯೇ ವೃಷಪರ್ವನ ಮಗಳಾದ ಶರ್ಮಿಷ್ಠೆಗೆ ದ್ರಹ್ಯು, ಅನು, ಪುರು ಎಂಬ ಮೂವರು ಪುತ್ರರಾದರು. ॥ ೩೩ ॥ ಮಾನಿಷ್ಠೆಯಾದ ದೇವಯಾನಿಗೆ ತನ್ನಂತೆಯೇ ಶರ್ಮಿಷ್ಠೆಗೂ ತನ್ನ ಪತಿಯಿಂದಲೇ ಮಕ್ಕಳಾಗುತ್ತಿವೆ ಎಂಬುದನ್ನು ಅರಿತಾಗ ಅವಳು ಕ್ರೋಧಗೊಂಡು ತನ್ನ ತಂದೆಯ ಮನೆಗೆ ಹೊರಟುಹೋದಳು. ॥ ೩೪ ॥

ಕಾಮಿಯಾದ ಯಯಾತಿಯು ದೇವಯಾನಿಯನ್ನು ಒಲಿಸಿಕೊಳ್ಳಲು ಸುಮಧುರ ಮಾತುಗಳಿಂದ, ನಯವಿನಯದಿಂದ ಪ್ರಯತ್ನಿಸಿದರೂ ಯಾವ ಪ್ರಯೋಜನವೂ ಆಗಲಿಲ್ಲ, ಅವಳ ಕಾಲುಗಳನ್ನೊತ್ತಿ ಸೇವೆ ಮಾಡಿದರೂ, ಅವಳ ಹಿಂದೆ-ಹಿಂದೆಯೇ ಹೋದರೂ ಪ್ರಯೋಜನವಾಗಲಿಲ್ಲ.॥ ೩೫ ॥ ಶುಕ್ರಾಚಾರ್ಯರೂ ಕೂಡ ಕೋಪಗೊಂಡು ಯಯಾತಿಗೆ ಹೇಳಿದರು – 'ನೀನು ಅತ್ಯಂತ ಸ್ತ್ರೀಲಂಪಟನಾಗಿರುವೆ. ಮಂದಬುದ್ಧಿಯವನೂ, ಸುಳ್ಳುಗಾರನೂ ಆಗಿರುವೆ. ಮನುಷ್ಯರನ್ನು ಕುರೂಪಗೊಳಿಸುವಂತಹ ಮುದಿತನವು ನಿನಗೆ ಉಂಟಾಗಲಿ ನಡೆ ಇಲ್ಲಿಂದ' ಎಂದು ಶಪಿಸಿದರು. ॥ ೩೬ ॥

**ಯಯಾತಿಯು ಹೇಳಿದನು** – ಬ್ರಾಹ್ಮಣಶ್ರೇಷ್ಠರೇ ! ನಿಮ್ಮ ಮಗಳೊಡನೆ ವಿಷಯಭೋಗಗಳನ್ನು ಅನುಭವಿಸುತ್ತಿರುವ ನನಗೆ ಇನ್ನೂ ತೃಪ್ತಿಯೇ ಆಗಲಿಲ್ಲ, ಈ ಶಾಪದಿಂದಲಾದರೋ ನಿಮ್ಮ ಮಗಳಿಗೂ ಅನಿಷ್ಟವೇ ಪರಿಣಮಿಸುತ್ತದೆ. ಆಗ ಶುಕ್ರಾಚಾರ್ಯರಿಗೂ ಯಯಾತಿಯ ಮಾತು ಸರಿ ಎನಿಸಿತು. ಶಾಪದಲ್ಲಿ ಸ್ವಲ್ಪ ತಿದ್ದುಪಡಿ ಮಾಡಿ ಹೇಳಿದರು – ಸರಿ ಹೋಗು. ಸಂತೋಷದಿಂದ ನಿನಗೆ ತನ್ನ ತಾರುಣ್ಯವನ್ನು ಯಾರಾದರೂ ಕೊಟ್ಟರೆ ಅದನ್ನು ಪಡೆದು ಈ ವೃದ್ಧಾಪ್ಯವನ್ನು ಅವನಿಗೆ ಕೊಡಬಹುದು. ॥ ೩೭ ॥ ಶುಕ್ರಾಚಾರ್ಯರು ಇಂತಹ ವ್ಯವಸ್ಥೆ ಮಾಡಿದಾಗ ಯಯಾತಿಯು ತನ್ನ ರಾಜಧಾನಿಗೆ ಬಂದು ತನ್ನ ಹಿರಿಯಪುತ್ರನಾದ ಯದುವಿನಲ್ಲಿ – ಮಗೂ ! ನೀನು ನಿನ್ನ ಯೌವನವನ್ನು ನನಗೆ ಕೊಟ್ಟು, ನಿನ್ನ ಅಜ್ಜನು ಕೊಟ್ಟಿರುವ ಈ ವೃದ್ಧಾಪ್ಯವನ್ನು ನೀನು ಪಡೆ. ಏಕೆಂದರೆ, ಪ್ರಿಯ ಪುತ್ರನೇ ! ನಾನು ಇನ್ನೂ ವಿಷಯಗಳಿಂದ ತೃಪ್ತನಾಗಲಿಲ್ಲ. ಆದಕ್ಕಾಗಿ ನಿನ್ನ ಯೌವನವನ್ನು ಪಡೆದು ನಾನು ಕೆಲವು ವರ್ಷಗಳವರೆಗೆ ಇನ್ನೂ ಆನಂದವನ್ನು ಅನುಭವಿಸುವೆನು. ॥ ೩೮-೩೯॥

**ಯದುವು ಹೇಳಿದನು** – ತಂದೆಯೇ ! ಅಕಾಲದಲ್ಲಿ ಪ್ರಾಪ್ತವಾದ ನಿನ್ನ ಮುದಿತನವನ್ನು ಪಡೆದು ನಾನು ಬದುಕಲು ಬಯಸುವುದಿಲ್ಲ, ಏಕೆಂದರೆ, ವಿಷಯಸುಖಗಳನ್ನು ಅನುಭವಿಸದೆ ಯಾವ ಮನುಷ್ಯನೂ ವೈರಾಗ್ಯವನ್ನು ಹೊಂದಲಾರನು. ॥ ೪೦ ॥

ತುರ್ವಸುಶ್ಚೋದಿತಃ ಪಿತ್ರಾ ದ್ರುಹ್ಯುಶ್ಚಾನುಶ್ಚ ಭಾರತ ।
ಪ್ರತ್ಯಾಚಖ್ಯುರಧರ್ಮಜ್ಞಾ ಹ್ಯನಿತ್ಯೇ ನಿತ್ಯಬುದ್ಧಯಃ
॥ ೪೧ ॥

ಅಪೃಚ್ಛತ್ತನಯಂ ಪೂರುಂ ವಯಸೋನಂ ಗುಣಾಧಿಕಮ್ ।
ನ ತ್ವಮಗ್ರಜವದ್ವತ್ಸ ಮಾಂ ಪ್ರತ್ಯಾಖ್ಯಾತುಮರ್ಹಸಿ
॥ ೪೨ ॥

ಪೂರುರುವಾಚ

ಕೋ ನು ಲೋಕೇ ಮನುಷ್ಯೇಂದ್ರ ಪಿತುರಾತ್ಮಕೃತಃ ಪುಮಾನ್ ।
ಪ್ರತಿಕರ್ತುಂ ಕ್ಷಮೋ ಯಸ್ಯ ಪ್ರಸಾದಾದ್ವಿಂದತೇ ಪರಮ್
॥ ೪೩ ॥

ಉತ್ತಮಶ್ಚಿಂತಿತಂ ಕುರ್ಯಾತ್ಪ್ರೋಕ್ತಕಾರೀ ತು ಮಧ್ಯಮಃ ।
ಅಧಮೋಽಶ್ರದ್ಧಯಾ ಕುರ್ಯಾದಕರ್ತೋಚ್ಚರಿತಂ ಪಿತುಃ
॥ ೪೪ ॥

ಇತಿ ಪ್ರಮುದಿತಃ ಪೂರುಃ ಪ್ರತ್ಯಗೃಹ್ಣಾಜ್ಜರಾಂ ಪಿತುಃ ।
ಸೋಽಪಿ ತದ್ವಯಸಾ ಕಾಮಾನ್ಯಥಾವಜ್ಜುಜುಷೇ ನೃಪ
॥ ೪೫ ॥

ಸಪ್ತದ್ವೀಪಪತಿಃ ಸಮ್ಯಕ್ಪಿತೃವತ್ಪಾಲಯನ್ ಪ್ರಜಾಃ ।
ಯಥೋಪಜೋಷಂ ವಿಷಯಾಞ್ಜುಜುಷೇಽವ್ಯಾಹತೇಂದ್ರಿಯಃ
॥ ೪೬ ॥

ದೇವಯಾನ್ಯಪ್ಯನುದಿನಂ ಮನೋವಾಗ್ದೇಹವಸ್ತುಭಿಃ ।
ಪ್ರೇಯಸಃ ಪರಮಾಂ ಪ್ರೀತಿಮುವಾಹ ಪ್ರೇಯಸೀ ರಹಃ
॥ ೪೭ ॥

ಅಯಜದ್ಯಜ್ಞಪುರುಷಂ ಕ್ರತುಭಿರ್ಭೂರಿದಕ್ಷಿಣೈಃ ।
ಸರ್ವದೇವಮಯಂ ದೇವಂ ಸರ್ವವೇದಮಯಂ ಹರಿಮ್
॥ ೪೮ ॥

ಯಸ್ಮಿನ್ನಿದಂ ವಿರಚಿತಂ ವ್ಯೋಮ್ನೀವ ಜಲದಾವಲಿಃ ।
ನಾನೇವ ಭಾತಿ ನಾಭಾತಿ ಸ್ವಪ್ನಮಾಯಾಮನೋರಥಃ
॥ ೪೯ ॥

ಪರೀಕ್ಷಿತನೇ ! ಹೀಗೆಯೇ ತುರ್ವಸು, ದ್ರುಹ್ಯು ಮತ್ತು ಅನು ಇವರೂ ತಂದೆಯ ಆಜ್ಞೆಯನ್ನು ತಿರಸ್ಕರಿಸಿದರು. ಅವರೆಲ್ಲರೂ ಧರ್ಮವನ್ನು ತಿಳಿದವರಾಗಿರಲಿಲ್ಲ ಮತ್ತು ಅನಿತ್ಯವಾದ ಶರೀರವನ್ನೇ ಶಾಶ್ವತವೆಂದು ತಿಳಿದಿದ್ದರು. ॥ ೪೧ ॥ ಈಗ ಯಯಾತಿಯು ವಯಸ್ಸಿನಲ್ಲಿ ಅತಿ ಸಣ್ಣವನಾಗಿದ್ದರೂ ಗುಣಗಳಲ್ಲಿ ದೊಡ್ಡವನಾಗಿದ್ದ ತನ್ನ ಪುತ್ರ ಪುರುವನ್ನು ಕರೆದು ಕೇಳಿದನು – ಮಗು ! ನೀನು ನಿನ್ನ ಅಣ್ಣಂದಿರಂತೆ ನನ್ನ ಮಾತನ್ನು ತಿರಸ್ಕರಿಸಬೇಡ.ನನ್ನ ಮುದಿತನವನ್ನು ಸ್ವಲ್ಪ ಕಾಲದವರೆಗೆ ಪಡೆದು ನಿನ್ನ ಯೌವನವನ್ನು ನನಗೆ ಕೊಡು. ॥ ೪೨ ॥

**ಪುರುವು ಹೇಳಿದನು –** ತಂದೆಯೇ ! ಪಿತೃವಿನ ಕೃಪೆಯಿಂದಲೇ ಮನುಷ್ಯನಿಗೆ ಪರಮಪದವು ಲಭಿಸುವುದು. ವಾಸ್ತವದಲ್ಲಿ ಪುತ್ರನ ಶರೀರವು ತಂದೆಯೇ ಕೊಟ್ಟಿದ್ದಾಗಿದೆ. ಇಂತಹ ಸ್ಥಿತಿಯಲ್ಲಿ ಪ್ರಪಂಚದಲ್ಲಿ ತಂದೆಯ ಉಪಕಾರವನ್ನು ತೀರಿಸಬಲ್ಲವನು ಯಾವನು ತಾನೇ ಇರುವನು ? ॥ ೪೩ ॥ ತಂದೆಯ ಮನಸ್ಸಿನ ಮಾತನ್ನು ಹೇಳದೆಯೇ ನಡೆಸುವವನೇ ಉತ್ತಮ ಪುತ್ರನಾಗಿರುವನು. ಹೇಳಿದ ಮೇಲೆ ಶ್ರದ್ಧೆಯಿಂದ ಆಜ್ಞೆಯನ್ನು ಪಾಲಿಸುವವನು ಮಧ್ಯಮನು. ಆಜ್ಞೆ ಪಡೆದರೂ ಅಶ್ರದ್ಧೆಯಿಂದ ಅದನ್ನು ಪಾಲಿಸುವ ಪುತ್ರನು ಅಧಮನು. ಯಾವ ರೀತಿಯಿಂದಲೂ ತಂದೆಯ ಆಜ್ಞೆಯನ್ನು ಪಾಲಿಸದಿರುವವನನ್ನು ಪುತ್ರನೆಂದು ಹೇಳುವುದೂ ತಪ್ಪೇ. ಅವನಾದರೋ ತಂದೆಯ ಮಲದಂತೆ ಆಗಿರುವನು. ॥ ೪೪ ॥ ಪರೀಕ್ಷಿತನೇ ! ಹೀಗೆ ಹೇಳಿ ಪುರುವು ಬಹಳ ಆನಂದದಿಂದ ತಂದೆಯ ಮುದಿತನವನ್ನು ಸ್ವೀಕರಿಸಿದನು. ಯಯಾತಿಯೂ ಮಗನ ಯೌವನವನ್ನು ಪಡೆದು ಹಿಂದಿನಂತೆ ವಿಷಯಸೇವನೆಯಲ್ಲಿ ತೊಡಗಿದನು. ॥ ೪೫ ॥ ಯಯಾತಿಯು ಏಳು ದ್ವೀಪಗಳಿಗೂ ಸಾಮ್ರಾಟನಾಗಿದ್ದನು. ತಂದೆಯಂತೆಯೇ ಪ್ರಜಾಪಾಲನೆಯನ್ನು ಚೆನ್ನಾಗಿಯೇ ಮಾಡಿದ್ದನು. ಅವನ ಇಂದ್ರಿಯಗಳಲ್ಲಿ ಪರಿಪೂರ್ಣವಾದ ಶಕ್ತಿ ತುಂಬಿತ್ತು. ಅವನು ಯಥಾವಕಾಶದಲ್ಲಿ ದೊರೆತ ವಿಷಯಗಳನ್ನು ಯಥೇಚ್ಛವಾಗಿ ಅನುಭವಿಸುತ್ತಿದ್ದನು. ॥ ೪೬ ॥ ಅವನ ಪ್ರಿಯತಮೆಯಾದ ದೇವಯಾನಿಯೂ ತನ್ನ ಪ್ರಿಯತಮನಾದ ಯಯಾತಿಯನ್ನು ಮನ, ವಚನ, ಶರೀರದಿಂದ ಮತ್ತು ವಸ್ತುಗಳಿಂದ ಪ್ರತಿದಿನವೂ ಸಂತೋಷಪಡಿಸುತ್ತಾ ಏಕಾಂತದಲ್ಲಿಯೂ ಸುಖವನ್ನು ನೀಡುತ್ತಿದ್ದಳು. ॥ ೪೭ ॥ ಸಾಮ್ರಾಟ ಯಯಾತಿಯು ವೇದಪ್ರತಿಪಾದ್ಯನಾದ ಸರ್ವದೇವಸ್ವರೂಪನಾದ ಯಜ್ಞಪುರುಷ ಭಗವಾನ್ ಶ್ರೀಹರಿಯನ್ನು ಅನೇಕ ಮಹಾ-ಮಹಾ ದಕ್ಷಿಣೆಗಳುಳ್ಳ ಯಜ್ಞಗಳ ಮೂಲಕ ಆರಾಧಿಸಿದನು. ॥ ೪೮ ॥ ಕೆಲವೊಮ್ಮೆ ಆಕಾಶದಲ್ಲಿ ದಟ್ಟವಾದ ಮೋಡಗಳು ಕಾಣಿಸಿಕೊಳ್ಳುತ್ತವೆ. ಕೆಲವೊಮ್ಮೆ ಕಾಣದೆ ನಿರ್ಮಲವಾಗಿರುವಂತೆಯೇ ಪರಮಾತ್ಮನ ಸ್ವರೂಪದಲ್ಲಿ ಈ ಜಗತ್ತು ಸ್ವಪ್ನ, ಮಾಯೆ ಮತ್ತು ಮನೋರಾಜ್ಯದಂತೆ ಕಲ್ಪಿತವಾಗಿದೆ. ಇದು ಕೆಲವೊಮ್ಮೆ ನಾಮ-ರೂಪಗಳಿಂದ ಕಾಣಿಸಿಕೊಳ್ಳುತ್ತದೆ, ಕೆಲವೊಮ್ಮೆ ಕಾಣಿಸುವುದೂ ಇಲ್ಲ. ॥ ೪೯ ॥

ತಮೇವ ಹೃದಿ ವಿನ್ಯಸ್ಯ ವಾಸುದೇವಂ ಗುಹಾಶಯಮ್ ।
ನಾರಾಯಣಮಣೀಯಾಂಸಂ ನಿರಾಶೀರಯಜತ್ಪ್ರಭುಮ್ ॥ ೨೦ ॥

ಏವಂ ವರ್ಷಸಹಸ್ರಾಣಿ ಮನಃಷಷ್ಠೈರ್ಮನಃಸುಖಮ್ ।
ವಿದಧಾನೋಽಪಿ ನಾತೃಪ್ಯತ್ಸಾರ್ವಭೌಮಃ ಕದಿಂದ್ರಿಯೈಃ ॥ ೨೧ ॥

ಆ ಪರಮಾತ್ಮನು ಎಲ್ಲರ ಹೃದಯದಲ್ಲಿ ವಿರಾಜಮಾನನಾಗಿದ್ದಾನೆ. ಅವನ ಸ್ವರೂಪವು ಸೂಕ್ಷ್ಮಕ್ಕೂ ಸೂಕ್ಷ್ಮವಾಗಿದೆ. ಅಂತಹ ಸರ್ವಶಕ್ತನಾದ ಸರ್ವವ್ಯಾಪೀ ಭಗವಾನ್ನಾರಾಯಣನನ್ನೇ ತನ್ನ ಹೃದಯದಲ್ಲಿ ನೆಲೆಗೊಳಿಸಿ ಯಯಾತಿಯು ನಿಷ್ಕಾಮ ಭಾವದಿಂದ ಅವನನ್ನು ಆರಾಧಿಸಿದನು. ॥ ೨೦ ॥ ಈ ಪ್ರಕಾರವಾಗಿ ಅವನು ಒಂದುಸಾವಿರ ವರ್ಷಗಳವರೆಗೆ ತನ್ನ ಉಚ್ಛೃಂಖಲ ಇಂದ್ರಿಯಗಳೊಂದಿಗೆ ಮನಸ್ಸನ್ನು ಜೋಡಿಸಿ ಅದಕ್ಕೆ ಪ್ರಿಯವಾದ ವಿಷಯಗಳನ್ನು ಅನುಭವಿಸಿದನು. ಇಷ್ಟಾದರೂ ಚಕ್ರವರ್ತಿ ಯಯಾತಿಗೆ ಭೋಗಗಳಿಂದ ತೃಪ್ತಿಯಾಗಲೇ ಇಲ್ಲ. ॥ ೨೧ ॥

*ಹದಿನೆಂಟನೆಯ ಅಧ್ಯಾಯವು ಮುಗಿಯಿತು. ॥ ೧೮ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮಸ್ಕಂಧೇ ಅಷ್ಟಾದಶೋಽಧ್ಯಾಯಃ ॥ ೧೮ ॥**

# ಹತ್ತೊಂಭತ್ತನೆಯ ಅಧ್ಯಾಯ

## ಯಯಾತಿಯ ಗೃಹತ್ಯಾಗ

*ಶ್ರೀಶುಕ ಉವಾಚ*

ಸ ಇತ್ಥಮಾಚರನ್ ಕಾಮಾನ್ ಸ್ತ್ರೈಣೋಽಪಹ್ನವಮಾತ್ಮನಃ ।
ಬುದ್ಧ್ವಾ ಪ್ರಿಯಾಯೈ ನಿರ್ವಿಣ್ಣೋ ಗಾಥಾಮೇತಾಮಗಾಯತ ॥ ೧ ॥

ಶೃಣು ಭಾರ್ಗವ್ಯಮೂಂ ಗಾಥಾಂ ಮದ್ವಿಧಾಚರಿತಾಂ ಭುವಿ ।
ಧೀರಾ ಯಸ್ಯಾನುಶೋಚಂತಿ ವನೇ ಗ್ರಾಮನಿವಾಸಿನಃ ॥ ೨ ॥

ಬಸ್ತ ಏಕೋ ವನೇ ಕಶ್ಚಿದ್ವಿಚಿನ್ವನ್ ಪ್ರಿಯಮಾತ್ಮನಃ ।
ದದರ್ಶ ಕೂಪೇ ಪತಿತಾಂ ಸ್ವಕರ್ಮವಶಗಾಮಜಾಮ್ ॥ ೩ ॥

ತಸ್ಯಾ ಉದ್ಧರಣೋಪಾಯಂ ಬಸ್ತಃ ಕಾಮೀ ವಿಚಿಂತಯನ್ ।
ವ್ಯಧತ್ತ ತೀರ್ಥಮುದ್ಧೃತ್ಯ ವಿಷಾಣಾಗ್ರೇಣ ರೋಧಸಿ ॥ ೪ ॥

ಸೋತ್ತೀರ್ಯ ಕೂಪಾತ್ಸುಶ್ರೋಣೀ ತಮೇವ ಚಕಮೇ ಕಿಲ ।
ತಯಾ ವೃತಂ ಸಮುದ್ವೀಕ್ಷ್ಯ ಬಹ್ವ್ಯೋಽಜಾಃ ಕಾಂತಕಾಮಿನೀಃ ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಹೀಗೆ ಯಯಾತಿಯು ಸ್ತ್ರೀವಶನಾಗಿ ವಿಷಯಗಳನ್ನು ಉಪಭೋಗಿಸುತ್ತಿದ್ದನು. ಒಂದು ದಿನ ಇದ್ದಕ್ಕಿದ್ದಂತೆ ತನ್ನ ಅಧಃಪತನದತ್ತ ದೃಷ್ಟಿಯು ಹರಿದಾಗ ಅವನಿಗೆ ವೈರಾಗ್ಯವುಂಟಾಗಿ ತನ್ನ ಪ್ರಿಯಪತ್ನಿಯಾದ ದೇವಯಾನಿಯಲ್ಲಿ ಈ ಕಥೆಯನ್ನು ಹೇಳಿದನು – ॥ ೧ ॥ ಭೃಗುನಂದಿನೀ! ಈ ಕಥೆಯನ್ನು ಕೇಳು. ಭೂಮಿಯಲ್ಲಿ ನನ್ನಂತೆಯೇ ಇರುವ ವಿಷಯಾಪೇಕ್ಷಿಯ ಸತ್ಯ ಇತಿಹಾಸ ಇದಾಗಿದೆ. ಹೀಗೆಯೇ ಗ್ರಾಮವಾಸಿಗಳಾದ ವಿಷಯೀ ಪುರುಷರ ಸಂಬಂಧವಾಗಿ ವನವಾಸೀ ಜಿತೇಂದ್ರಿಯ ಪುರುಷರು ಇವರ ಶ್ರೇಯಸ್ಸು ಹೇಗಾದೀತೆಂದು ದುಃಖದಿಂದ ಯೋಚಿಸುತ್ತಾರೆ. ॥ ೨ ॥ ಪ್ರಿಯೆ! ಕಾಡಿನಲ್ಲಿ ಒಂದು ಹೋತವು ತನಗೆ ಪ್ರಿಯವಾದುದನ್ನು ಹುಡುಕುತ್ತಾ ಸಂಚರಿಸುತ್ತಿತ್ತು. ಒಮ್ಮೆ ತನ್ನ ಕರ್ಮಫಲದಿಂದಲೇ ಒಂದು ಮೇಕೆಯು ಬಾವಿಯಲ್ಲಿ ಬಿದ್ದಿರುವುದನ್ನು ನೋಡಿತು. ॥ ೩ ॥ ಆ ಹೋತವು ಬಹಳ ಕಾಮಿಯಾಗಿತ್ತು. ಈ ಮೇಕೆಯನ್ನು ಬಾವಿಯಿಂದ ಹೇಗೆ ಮೇಲೆತ್ತಬಹುದೆಂದು ಯೋಚಿಸಿ ಅದು ತನ್ನ ಕೋಡುಗಳಿಂದ ಬಾವಿಯ ದಂಡೆಗಳನ್ನು ಅಗೆದು ದಾರಿಮಾಡಿತು. ॥ ೪ ॥ ಹೋತನ ಸಹಾಯದಿಂದ ಮೇಲಕ್ಕೆ ಬಂದ ಮೇಕೆಯು ಆ ಹೋತನನ್ನೇ ಮೋಹಿಸಿತು. ಆ ಹೋತವು ಗಡ್ಡ-ಮೀಸೆಗಳನ್ನು ಹೊಂದಿ, ಹೃಷ್ಟಪುಷ್ಟ ತರುಣವಾಗಿದ್ದು, ಮೇಕೆಗಳಿಗೆ ಸುಖವನ್ನೀಡುವುದಲ್ಲಿ ವಿಹಾರ ಕುಶಲವಾಗಿದ್ದಿತು. ಬಾವಿಯಲ್ಲಿ ಬಿದ್ದ ಮೇಕೆಯು ಆ ಹೋತವನ್ನು ತನ್ನ ಪ್ರಿಯಕರನಾಗಿ ಆರಿಸಿಕೊಂಡಿರುವುದನ್ನು ನೋಡಿದ ಇತರ ಮೇಕೆಗಳೂ ಅದನ್ನೇ ತಮ್ಮ ಪತಿಯನ್ನಾಗಿಸಿ ಕೊಂಡವು. ಅವುಗಳಾದರೋ ಮೊದಲಿನಿಂದಲೂ

ಪೀವಾನಂ ಶ್ಮಶ್ರುಲಂ ಪ್ರೇಷ್ಠಂ ಮೀಢ್ವಾಂಸಂ ಯಾಭಕೋವಿದಮ್ ।
ಸ ಏಕೋಽಜವೃಷಸ್ತಾಸಾಂ ಬಹ್ವೀನಾಂ ರತಿವರ್ಧನಃ ।
ರೇಮೇ ಕಾಮಗ್ರಹಗ್ರಸ್ತ ಆತ್ಮಾನಂ ನಾವಬುಧ್ಯತ
॥ ೬ ॥

ತಮೇವ ಪ್ರೇಷ್ಠ ತಮಯಾ ರಮಮಾಣಮಜಾನ್ಯಯಾ ।
ವಿಲೋಕ್ಯ ಕೂಪಸಂವಿಗ್ನಾ ನಾಮೃಷ್ಯದ್ ಬಸ್ತಕರ್ಮ ತತ್
॥ ೭ ॥

ತಂ ದುರ್ಹೃದಂ ಸುಹೃದ್ರೂಪಂ ಕಾಮಿನಂ ಕ್ಷಣಸೌಹೃದಮ್ ।
ಇಂದ್ರಿಯಾರಾಮಮುತ್ಸೃಜ್ಯ ಸ್ವಾಮಿನಂ ದುಃಖಿತಾ ಯಯೌ
॥ ೮ ॥

ಸೋಽಪಿ ಚಾನುಗತಃ ಸ್ತ್ರೈಣಃ ಕೃಪಣಸ್ತಾಂ ಪ್ರಸಾದಿತುಮ್ ।
ಕುರ್ವನ್ನಿಡವಿಡಾಕಾರಂ ನಾಶಕ್ನೋತ್ಪಥಿ ಸಂಧಿತುಮ್
॥ ೯ ॥

ತಸ್ಯಾಸ್ತತ್ರ ದ್ವಿಜಃ ಕಶ್ಚಿದಜಾಸ್ವಾಮ್ಯಚ್ಛಿನದ್ರುಷಾ ।
ಲಂಬಂತಂ ವೃಷಣಂ ಭೂಯಃ ಸಂದಧೇಽರ್ಥಾಯ ಯೋಗವಿತ್
॥ ೧೦ ॥

ಸಂಬದ್ಧವೃಷಣಃ ಸೋಽಪಿ ಹ್ಯಜಯಾ ಕೂಪಲಬ್ಧಯಾ ।
ಕಾಲಂ ಬಹುತಿಥಂ ಭದ್ರೇ ಕಾಮೈರ್ನಾದ್ಯಾಪಿ ತುಷ್ಯತಿ
॥ ೧೧ ॥

ತಥಾಹಂ ಕೃಪಣಃ ಸುಭ್ರು ಭವತ್ಯಾಃ ಪ್ರೇಮಯಂತ್ರಿತಃ ।
ಆತ್ಮಾನಂ ನಾಭಿಜಾನಾಮಿ ಮೋಹಿತಸ್ತವ ಮಾಯಯಾ
॥ ೧೨ ॥

ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।
ನ ದುಹ್ಯಂತಿ ಮನಃಪ್ರೀತಿಂ ಪುಂಸಃ ಕಾಮಹತಸ್ಯ ತೇ
॥ ೧೩ ॥

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ
॥ ೧೪ ॥

ಯದಾ ನ ಕುರುತೇ ಭಾವಂ ಸರ್ವಭೂತೇಷ್ವಮಂಗಲಮ್ ।
ಸಮದೃಷ್ಟೇಸ್ತದಾ ಪುಂಸಃ ಸರ್ವಾಃ ಸುಖಮಯಾ ದಿಶಃ
॥ ೧೫ ॥

ಯಾ ದುಸ್ತ್ಯಜಾ ದುರ್ಮತಿಭಿರ್ಜೀರ್ಯತೋ ಯಾ ನ ಜೀರ್ಯತೇ ।
ತಾಂ ತೃಷ್ಣಾಂ ದುಃಖನಿವಹಾಂ ಶರ್ಮಕಾಮೋ ದ್ರುತಂ ತ್ಯಜೇತ್
॥ ೧೬ ॥

ಪತಿಯ ಅನ್ವೇಷಣೆಯಲ್ಲಿದ್ದವು. ಆ ಒಂದೇ ಹೋತವು ಹಲವಾರು ಮೇಕೆಗಳೊಡನೆ ಮದನಪಿಶಾಚಗ್ರಸ್ತವಾಗಿ ವಿಹರಿಸುತ್ತಾ ತನ್ನನ್ನೇ ತಾನು ಮರೆತುಬಿಟ್ಟಿತ್ತು. ॥ ೫-೬ ॥ ಬಾವಿಯಿಂದ ಮೇಲೆ ಬಂದಿದ್ದ ಮೇಕೆಗೆ ತನ್ನ ಪತಿಯಾದರೋ ಇತರ ಮೇಕೆಗಳೊಡನೆ ವಿಹರಿಸುತ್ತಿದೆ ಎಂದು ತಿಳಿದಾಗ, ಅದಕ್ಕೆ ಆ ಹೋತನ ನಡೆವಳಿಕೆ ಸಹಿಸಲಾಗಲಿಲ್ಲ. ॥ ೭ ॥ ಈ ಹೋತವು ಬಹಳ ಕಾಮಿಯೆಂದೂ, ಇವನ ಯಾವ ಭರವಸೆಯೂ ಇಲ್ಲವೆಂದೂ, ಇದು ಮಿತ್ರರೂಪ ದಿಂದ ಶತ್ರುವಿನ ಕೆಲಸಮಾಡುತ್ತಿದೆ ಎಂದೂ ತಿಳಿದು ಆ ಮೇಕೆಯು ಈ ಇಂದ್ರಿಯಲೋಲುಪ ಹೋತನನ್ನು ಬಿಟ್ಟು ಭಾರೀ ದುಃಖದಿಂದ ತನ್ನನ್ನು ಸಾಕುವವನ ಬಳಿಗೆ ಹೊರಟುಹೋಯಿತು. ॥ ೮ ॥ ಆ ದಿನವೂ, ಕಾಮಿಯೂ ಆದ ಹೋತವು ಅದನ್ನು ಒಲಿಸಿಕೊಳ್ಳಲು ಮ್ಯಾ ಮ್ಯಾ ಎಂದುಕೊಂಡು ಅದರ ಹಿಂದೆಯೇ ಹೋಯಿತು. ಆದರೆ ಆ ಮೇಕೆಯನ್ನು ದಾರಿಯಲ್ಲಿ ಒಲಿಸಿಕೊಳ್ಳಲಾಗಲಿಲ್ಲ. ॥ ೯ ॥ ಆ ಮೇಕೆಯ ಒಡೆಯನು ಓರ್ವ ಬ್ರಾಹ್ಮಣನಾಗಿದ್ದನು. ಅವನು ಸಿಟ್ಟುಗೊಂಡು ಹೋತನ ಜೋಲಾಡುತ್ತಿದ್ದ ವೃಷಣಗಳನ್ನು ಕತ್ತರಿಸಿ ಹಾಕಿದನು. ಆದರೆ ಮತ್ತೆ ಮೇಕೆಯ ಒಳಿತನ್ನು ಯೋಚಿಸಿ ಪುನಃ ಅವನ್ನು ಜೋಡಿಸಿಬಿಟ್ಟನು. ಅವನಿಗೆ ಇಂತಹ ಅನೇಕ ಉಪಾಯಗಳು ತಿಳಿದಿದ್ದುವು. ॥ ೧೦ ॥

ಪ್ರಿಯೇ! ಹೀಗೆ ವೃಷಣಗಳು ಜೋಡಿಸಿದಾಗ ಆ ಹೋತವು ಪುನಃ ಬಾವಿಯಲ್ಲಿ ಸಿಕ್ಕಿದ ಮೇಕೆಯೊಂದಿಗೆ ಅನೇಕ ದಿನಗಳವರೆಗೆ ವಿಷಯ ಭೋಗಗಳನ್ನು ಅನುಭವಿಸುತ್ತಾ ಇದ್ದರೂ ಇಂದಿನವರೆಗೆ ಅದಕ್ಕೆ ಸಂತೋಷವಾಗಲಿಲ್ಲ. ॥ ೧೧ ॥ ಸುಂದರೀ! ನನ್ನ ಸ್ಥಿತಿಯೂ ಇದೇ ಆಗಿದೆ. ನಿನ್ನ ಪ್ರೇಮ ಪಾಶದಲ್ಲಿ ಬಂಧಿತನಾದ ನಾನೂ ಅತ್ಯಂತ ದೀನನಾಗಿ ಹೋದೆನು. ನಿನ್ನ ಮಾಯೆಯಿಂದ ಮೋಹಿತನಾದ ನಾನು ನನ್ನನ್ನೇ ಮರೆತುಬಿಟ್ಟಿರುವೆನು. ॥ ೧೨ ॥

ಪ್ರಿಯೇ! ಭೂಮಂಡಲದಲ್ಲಿ ಎಷ್ಟು ಧಾನ್ಯಗಳಿವೆಯೋ, ಸುವರ್ಣರಾಶಿಗಳಿವೆಯೋ, ಪಶುಗಳಿವೆಯೋ, ಸ್ತ್ರೀಯರಿರುವರೋ, ಇವೆಲ್ಲವೂ ಜೊತೆಗೂಡಿ ಬಂದರೂ ಕಾಮಹತನಾದ ಮನುಷ್ಯನ ಮನಸ್ಸನ್ನು ಸಂತುಷ್ಟಗೊಳಿಸಲಾರವು. ॥ ೧೩ ॥ ವಿಷಯಗಳನ್ನು ಭೋಗಿಸುವುದರಿಂದ ಭೋಗವಾಸನೆಯು ಎಂದೂ ಶಾಂತವಾಗಲಾರದು. ಬದಲಿಗೆ ತುಪ್ಪದ ಆಹುತಿ ಹಾಕಿದಾಗ ಯಜ್ಞೇಶ್ವರನು ಮತ್ತೆ ವೃದ್ಧಿ ಹೊಂದುತ್ತಿರುವಂತೆ ಭೋಗವಾಸನೆಗಳು ಕಾಮೋಪಭೋಗಗಳಿಂದ ಮತ್ತೂ ಪ್ರಬಲವಾಗುತ್ತವೆ. ॥ ೧೪ ॥ ಮನುಷ್ಯನು ಯಾವುದೇ ಪ್ರಾಣಿ ಮತ್ತು ಯಾವುದೇ ವಸ್ತುವಿನೊಡನೆ ರಾಗ-ದ್ವೇಷಗಳ ಭಾವವಿಡದಿದ್ದಾಗ, ಅವನು ಸಮದರ್ಶಿಯಾಗುತ್ತಾನೆ. ಸಮಸ್ತ ದಿಕ್ಕುಗಳೂ ಅಂತಹವನಿಗೆ ಸುಖಮಯವಾಗುತ್ತವೆ.॥ ೧೫ ॥ ವಿಷಯಗಳ ತೃಷ್ಣೆಯೇ ದುಃಖಗಳ ಉಗಮಸ್ಥಾನವಾಗಿದೆ. ಮಂದಬುದ್ಧಿಯವರಾದ ಜನರು ಅಂತಹ ತೃಷ್ಣೆಯನ್ನು ಬಹಳ ಕಷ್ಟದಿಂದಲೂ ತ್ಯಾಗ ಮಾಡಲಾರರು. ಮುದಿತನವು ಬಂದರೂ ತೃಷ್ಣೆಯು ನಿತ್ಯ ನೂತನವಾಗಿಯೇ ಇರುತ್ತದೆ. ಆದ್ದರಿಂದ ತನ್ನ ಶ್ರೇಯಸ್ಸನ್ನು ಬಯಸುವವನು ಶೀಘ್ರಾತಿಶೀಘ್ರವಾಗಿ ಈ ತೃಷ್ಣೆಯನ್ನು ಪರಿತ್ಯಜಿಸಬೇಕು. ॥ ೧೬ ॥

ಮಾತ್ರಾ ಸ್ವಸ್ರಾ ದುಹಿತ್ರಾ ವಾ ನಾವಿವಿಕ್ತಾಸನೋ ಭವೇತ್ ।
ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ॥ ೧೭ ॥

ಪೂರ್ಣಂ ವರ್ಷಸಹಸ್ರಂ ಮೇ ವಿಷಯಾನ್ಸೇವತೋಽಸಕೃತ್ ।
ತಥಾಪಿ ಚಾನುಸವನಂ ತೃಷ್ಣಾ ತೇಷೂಪಜಾಯತೇ ॥ ೧೮ ॥

ತಸ್ಮಾದೇತಾಮಹಂ ತ್ಯಕ್ತ್ವಾ ಬ್ರಹ್ಮಣ್ಯಾಧಾಯ ಮಾನಸಮ್ ।
ನಿರ್ದ್ವಂದ್ವೋ ನಿರಹಂಕಾರಶ್ಚರಿಷ್ಯಾಮಿ ಮೃಗೈಃ ಸಹ ॥ ೧೯ ॥

ದೃಷ್ಟಂ ಶ್ರುತಮಸದ್ಬುದ್ಧ್ವಾ ನಾನುಧ್ಯಾಯೇನ್ನ ಸಂವಿಶೇತ್ ।
ಸಂಸೃತಿಂ ಚಾತ್ಮನಾಶಂ ಚ ತತ್ರ ವಿದ್ವಾನ್ಸ ಆತ್ಮದೃಕ್ ॥ ೨೦ ॥

ಇತ್ಯುಕ್ತ್ವಾ ನಾಹುಷೋ ಜಾಯಾಂ ತದೀಯಂ ಪೂರವೇ ವಯಃ ।
ದತ್ತ್ವಾ ಸ್ವಾಂ ಜರಸಂ ತಸ್ಮಾದಾದದೇ ವಿಗತಸ್ಪೃಹಃ ॥ ೨೧ ॥

ದಿಶಿ ದಕ್ಷಿಣಪೂರ್ವಸ್ಯಾಂ ದ್ರುಹ್ಯುಂ ದಕ್ಷಿಣತೋ ಯದುಮ್ ।
ಪ್ರತೀಚ್ಯಾಂ ತುರ್ವಸುಂ ಚಕ್ರ ಉದೀಚ್ಯಾಮನುಮೀಶ್ವರಮ್ ॥ ೨೨ ॥

ಭೂಮಂಡಲಸ್ಯ ಸರ್ವಸ್ಯ ಪೂರುಮರ್ಹತ್ತಮಂ ವಿಶಾಮ್ ।
ಅಭಿಷಿಚ್ಯಾಗ್ರಜಾಂಸ್ತಸ್ಯ ವಶೇ ಸ್ಥಾಪ್ಯ ವನಂ ಯಯೌ ॥ ೨೩ ॥

ಆಸೇವಿತಂ ವರ್ಷಪೂಗಾನ್ ಷಡ್ವರ್ಗಂ ವಿಷಯೇಷು ಸಃ ।
ಕ್ಷಣೇನ ಮುಮುಚೇ ನೀಡಂ ಜಾತಪಕ್ಷ ಇವ ದ್ವಿಜಃ ॥ ೨೪ ॥

ಸ ತತ್ರ ನಿರ್ಮುಕ್ತ ಸಮಸ್ತಸಂಗ
ಆತ್ಮಾನುಭೂತ್ಯಾ ವಿಧುತತ್ರಿಲಿಂಗಃ ।
ಪರೇಽಮಲೇ ಬ್ರಹ್ಮಣಿ ವಾಸುದೇವೇ
ಲೇಭೇ ಗತಿಂ ಭಾಗವತೀಂ ಪ್ರತೀತಃ ॥ ೨೫ ॥

ಶ್ರುತ್ವಾ ಗಾಥಾಂ ದೇವಯಾನೀ ಮೇನೇ ಪ್ರಸ್ತೋಭಮಾತ್ಮನಃ ।
ಸ್ತ್ರೀಪುಂಸೋಃ ಸ್ನೇಹವೈಕ್ಲವ್ಯಾತ್ಪರಿಹಾಸಮಿವೇರಿತಮ್ ॥ ೨೬ ॥

ತನ್ನ ತಾಯಿಯೇ ಇರಲಿ, ಮಗಳೇ ಇರಲಿ, ತಂಗಿಯಾಗಿರಲಿ, ಏಕಾಂತದಲ್ಲಿ ಒಂದೇ ಆಸನದಲ್ಲಿ ಸೇರಿದು ಕುಳಿತುಕೊಳ್ಳಬಾರದು. ಏಕೆಂದರೆ, ಇಂದ್ರಿಯಗಳು ಅತಿಬಲಿಷ್ಠವಾದುವುಗಳು. ಮಹಾ ಮಹಾ ವಿದ್ವಾಂಸರನ್ನೂ ಕೂಡ ಅವುಗಳು ವಿಚಲಿತನನ್ನಾಗಿಸಿ ಬಿಡುತ್ತವೆ. ॥ ೧೭ ॥ ವಿಷಯಗಳನ್ನು ಪುನಃ ಪುನಃ ಸೇವಿಸುತ್ತಾ ನಾನು ಒಂದು ಸಾವಿರವರ್ಷಗಳನ್ನು ಕಳೆದೆನು. ಹೀಗಿದ್ದರೂ ಪ್ರತಿಕ್ಷಣವೂ ಆ ಭೋಗಗಳ ಲಾಲಸೆಯು ಬೆಳೆಯುತ್ತಲೇ ಇದೆ. ॥ ೧೮ ॥ ಅದಕ್ಕಾಗಿ ನಾನೀಗ ಈ ಭೋಗಗಳ ತೃಷ್ಣೆಯನ್ನು ಸಂಪೂರ್ಣವಾಗಿ ಪರಿತ್ಯಜಿಸಿ, ಮನಸ್ಸನ್ನು ಪರಬ್ರಹ್ಮ ಪರಮಾತ್ಮನಲ್ಲಿ ಲೀನಗೊಳಿಸಿ, ಶೀತೋಷ್ಣ ಸುಖ-ದುಃಖಾದಿ ದ್ವಂದ್ವಗಳಿಂದ ರಹಿತನಾಗಿ, ಅಹಂಕಾರದಿಂದಲೂ ಮುಕ್ತನಾಗಿ, ಜಿಂಕೆಗಳೊಡನೆ ಅರಣ್ಯದಲ್ಲಿ ಸಂಚರಿಸುವೆನು. ॥ ೧೯ ॥ ಇಹ-ಪರ ಲೋಕಗಳೆರಡರ ಭೋಗಗಳು ಅಸತ್ತಾಗಿವೆ ಎಂದು ಭಾವಿಸಿ, ಅವನ್ನು ಚಿಂತಿಸದೆ, ಭೋಗಿಸದೇ ಇರಬೇಕು, ಅವುಗಳ ಚಿಂತನದಿಂದಲೇ ಜನ್ಮ-ಮೃತ್ಯುರೂಪವಾದ ಸಂಸಾರವು ಪ್ರಾಪ್ತವಾಗುವುದೆಂಬುದನ್ನು ತಿಳಿಯಬೇಕು. ಅವುಗಳ ಭೋಗದಿಂದಲಾದರೋ ಆತ್ಮನಾಶವಾಗುವುದೆಂಬ ರಹಸ್ಯವನ್ನು ತಿಳಿದು ಅವುಗಳಿಂದ ದೂರವುಳಿಯುವವನೇ ಆತ್ಮಜ್ಞಾನಿಯು. ॥ ೨೦ ॥

ಪರೀಕ್ಷಿತನೇ ! ಯಯಾತಿಯು ತನ್ನ ಪತ್ನಿಗೆ ಹೀಗೆ ಹೇಳಿ ಪುರುವಿನ ಯೌವನವನ್ನು ಅವನಿಗೆ ಮರಳಿಸಿ, ತನ್ನ ಮುದಿತನವನ್ನು ಅವನಿಂದ ಮರಳಿ ಸ್ವೀಕರಿಸಿ ನಿಸ್ಪೃಹನಾದನು. ಅವನಿಗೆ ವಿಷಯಸುಖಗಳಲ್ಲಿ ಆಸಕ್ತಿಯು ತೊಲಗಿಹೋಯಿತು. ॥ ೨೧ ॥ ಬಳಿಕ ಅವನು ಆಗ್ನೇಯ ದಿಕ್ಕಿನ ರಾಜ್ಯಗಳಿಗೆ ದ್ರುಹ್ಯುವನ್ನೂ, ದಕ್ಷಿಣದ ರಾಜ್ಯಗಳಿಗೆ ಯದುವನ್ನೂ, ಪಶ್ಚಿಮದಲ್ಲಿ ತುರ್ವಸುವನ್ನೂ, ಉತ್ತರದ ರಾಜ್ಯಗಳನ್ನು ಅನು ಎಂಬುವನಿಗೆ ಹಂಚಿದನು. ॥ ೨೨ ॥ ಭೂಮಂಡಲದಲ್ಲಿರುವ ಸಮಸ್ತವಾದ ಸಂಪತ್ತನ್ನೂ ಹೊಂದಲು ಯೋಗ್ಯನಾದ ಪುರುವನ್ನು ತನ್ನ ಸಿಂಹಾಸನದಲ್ಲಿ ಕುಳ್ಳಿರಿಸಿ ರಾಜ್ಯಾಭಿಷೇಕವನ್ನು ಮಾಡಿ ಪುರುವಿನ ಅಗ್ರಜರೆಲ್ಲರನ್ನು ಅವನ ವಶಕ್ಕೆ ಒಪ್ಪಿಸಿ ಯಯಾತಿಯು ಕಾಡಿಗೆ ಹೊರಟು ಹೋದನು. ॥ ೨೩ ॥ ರಾಜಾ ಯಯಾತಿಯು ಬಹಳ ವರ್ಷಗಳವರೆಗೆ ಇಂದ್ರಿಯಗಳಿಂದ ವಿಷಯಸುಖಗಳನ್ನು ಭೋಗಿಸಿದ್ದರೂ ರೆಕ್ಕೆ ಮೂಡಿದ ಹಕ್ಕಿಯು ಗೂಡನ್ನು ಬಿಟ್ಟು ಹಾರಿಹೋಗುವಂತೆ ಅವನು ಕ್ಷಣಮಾತ್ರದಲ್ಲಿ ಸರ್ವಸ್ವವನ್ನು ಪರಿತ್ಯಜಿಸಿಬಿಟ್ಟನು. ॥ ೨೪ ॥ ವನಕ್ಕೆ ತೆರಳಿದ ರಾಜನಾದ ಯಯಾತಿಯು ಸಮಸ್ತ ಆಸಕ್ತಿಗಳಿಂದ ಮುಕ್ತನಾಗಿಬಿಟ್ಟನು. ಆತ್ಮಸಾಕ್ಷಾತ್ಕಾರದ ಮೂಲಕ ಅವನ ತ್ರಿಗುಣಮಯ ಲಿಂಗಶರೀರವು ನಾಶವಾಯಿತು. ಅವನು ಮಾಯಾಮಲದಿಂದ ರಹಿತನಾದ ಪರಬ್ರಹ್ಮ ಪರಮಾತ್ಮ ವಾಸುದೇವನಲ್ಲಿ ಒಂದಾಗಿ ಭಗವತ್ಪ್ರೇಮಿಗಳಾದ ಸಂತರಿಗೆ ಲಭ್ಯವಾಗುವ ಭಾಗವತೀ ಗತಿಯನ್ನು ಸೇರಿದನು. ॥ ೨೫ ॥

ದೇವಯಾನಿಯು ಯಯಾತಿಯು ಹೇಳಿದ ಕಥೆಯನ್ನು ಕೇಳಿದಾಗ, ಇವರು ನನ್ನನ್ನು ನಿವೃತ್ತಿಮಾರ್ಗಕ್ಕಾಗಿ ಪ್ರೋತ್ಸಾಹಿಸುತ್ತಿದ್ದಾರೆ ಎಂದು ತಿಳಿದುಕೊಂಡಳು. ಏಕೆಂದರೆ, ಸ್ತ್ರೀ-ಪುರುಷರಲ್ಲಿ ಪರಸ್ಪರ ಪ್ರೇಮದಿಂದಾಗಿ ವಿರಹವು ಇದಿರಾದಾಗ ವಿಕಲತೆ

ಸಾ ಸನ್ನಿವಾಸಂ ಸುಹೃದಾಂ ಪ್ರಪಾಯಾಮಿವ ಗಚ್ಛತಾಮ್ ।
ವಿಜ್ಞಾಯೇಶ್ವರತಂತ್ರಾಣಾಂ ಮಾಯಾವಿರಚಿತಂ ಪ್ರಭೋಃ
॥ ೨೭ ॥

ಸರ್ವತ್ರ ಸಂಗಮುತ್ಸೃಜ್ಯ ಸ್ವಪ್ನೌಪಮ್ಯೇನ ಭಾರ್ಗವೀ ।
ಕೃಷ್ಣೇ ಮನಃ ಸಮಾವೇಶ್ಯ ವ್ಯಧುನೋಲ್ಲಿಂಗಮಾತ್ಮನಃ
॥ ೨೮ ॥

ನಮಸ್ತುಭ್ಯಂ ಭಗವತೇ ವಾಸುದೇವಾಯ ವೇಧಸೇ ।
ಸರ್ವಭೂತಾಧಿವಾಸಾಯ ಶಾಂತಾಯ ಬೃಹತೇ ನಮಃ
॥ ೨೯ ॥

ಉಂಟಾಗುತ್ತದೆ. ಇದನ್ನು ಯೋಚಿಸಿಯೇ ಇವರು ಪರಿಹಾಸ ಮಾಡುವಂತೆ ಈ ಕಥೆಯನ್ನು ಹೇಳಿರುವರೆಂದು ಭಾವಿಸಿದಳು. ॥ ೨೬ ॥ ಈಶ್ವರನಿಗೆ ಅಧೀನರಾಗಿರುವ ಬಂಧುಗಳು – ಅರವಟ್ಟಿಗೆಯಲ್ಲಿ ದಾರಿಹೋಕರು ಸೇರುವಂತೆ ಒಂದೆಡೆಯಲ್ಲಿ ಸೇರಿರುವರು. ಇದೆಲ್ಲವೂ ಭಗವಂತನ ಮಾಯೆಯ ಆಟವಾಗಿದ್ದು ಸ್ವಪ್ನದಂತೆಯೇ ಇದೆ. ಹೀಗೆ ತಿಳಿದು ದೇವಯಾನಿಯೂ ಎಲ್ಲ ಪದಾರ್ಥಗಳ ಆಸಕ್ತಿಯನ್ನು ತ್ಯಜಿಸಿ ತನ್ನ ಮನಸ್ಸನ್ನು ಭಗವಾನ್ ಶ್ರೀಕೃಷ್ಣನಲ್ಲಿ ತನ್ಮಯಗೊಳಿಸಿದಳು. ಬಂಧನಕ್ಕೆ ಕಾರಣವಾದ ಲಿಂಗ ಶರೀರವನ್ನು ಪರಿತ್ಯಜಿಸಿ ಆಕೆಯು ಭಗವಂತನನ್ನು ಹೊಂದಿದಳು. ॥ ೨೭-೨೮ ॥ ದೇವಯಾನಿಯು ಭಗವಂತನನ್ನು ನಮಸ್ಕರಿಸುತ್ತಾ ಪ್ರಾರ್ಥಿಸಿದಳು – ಸಮಸ್ತ ಜಗತ್ತಿನ ರಚಯಿತನೂ, ಸರ್ವಾಂತರ್ಯಾಮಿಯೂ, ಎಲ್ಲರ ಆಶ್ರಯಸ್ವರೂಪನೂ, ಸರ್ವಶಕ್ತನೂ ಆದ ಭಗವಾನ್ ವಾಸುದೇವನಿಗೆ ವಂದಿಸುತ್ತೇನೆ. ಪರಮ ಶಾಂತ ಮತ್ತು ಅನಂತ ತತ್ತ್ವವಾದ ಪರಮಾತ್ಮನಿಗೆ ನಾನು ನಮಸ್ಕರಿಸುತ್ತೇನೆ. ॥ ೨೯ ॥

*ಹತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೧೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ ಏಕೋನವಿಂಶೋಽಧ್ಯಾಯಃ ॥ ೧೯ ॥

# ಇಪ್ಪತ್ತನೆಯ ಅಧ್ಯಾಯ

## ಪೂರುವಿನ ವಂಶ, ರಾಜಾ ದುಷ್ಯಂತ ಮತ್ತು ಭರತನ ಚರಿತ್ರವರ್ಣನೆ

*ಶ್ರೀಶುಕ ಉವಾಚ*

ಪೂರೋರ್ವಂಶಂ ಪ್ರವಕ್ಷ್ಯಾಮಿ ಯತ್ರ ಜಾತೋಽಸಿ ಭಾರತ ।
ಯತ್ರ ರಾಜರ್ಷಯೋ ವಂಶ್ಯಾ ಬ್ರಹ್ಮವಂಶ್ಯಾಶ್ಚ ಜಜ್ಞಿರೇ
॥ ೧ ॥

ಜನಮೇಜಯೋ ಹ್ಯಭೂತ್ಪೂರೋಃ ಪ್ರಚಿನ್ವಾಂಸ್ತತ್ಸುತಸ್ತತಃ ।
ಪ್ರವೀರೋಽಥ ನಮಸ್ಯುರ್ವೈ ತಸ್ಮಾಚ್ಚಾರುಪದೋಽಭವತ್
॥ ೨ ॥

ತಸ್ಯ ಸುದ್ಯುರಭೂತ್ಪುತ್ರಸ್ತಸ್ಮಾದ್ಬಹುಗವಸ್ತತಃ ।
ಸಂಯಾತಿಸ್ತಸ್ಯಾಹಂಯಾತೀ ರೌದ್ರಾಶ್ವಸ್ತತ್ಸುತಃ ಸ್ಮೃತಃ
॥ ೩ ॥

ಋತೇಯುಸ್ತಸ್ಯ ಕಕ್ಷೇಯುಃ ಸ್ಥಂಡಿಲೇಯುಃ ಕೃತೇಯುಕಃ ।
ಜಲೇಯುಃ ಸಂತತೇಯುಶ್ಚ ಧರ್ಮಸತ್ಯವ್ರತೇಯವಃ
॥ ೪ ॥

ದಶೈತೇಽಪ್ಸರಸಃ ಪುತ್ರಾ ವನೇಯುಶ್ಚಾವಮಃ ಸ್ಮೃತಃ ।
ಘೃತಾಚ್ಯಾಮಿಂದ್ರಿಯಾಣೀವ ಮುಖ್ಯಸ್ಯ ಜಗದಾತ್ಮನಃ
॥ ೫ ॥

ಋತೇಯೋ ರಂತಿಭಾರೋಽಭೂತ್ತ್ರಯಸ್ತಸ್ಯಾತ್ಮಜಾ ನೃಪ ।
ಸುಮತಿರ್ಧ್ರುವೋಽಪ್ರತಿರಥಃ ಕಣ್ವೋಽಪ್ರತಿರಥಾತ್ಮಜಃ
॥ ೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ ! ಈಗ ನಾನು ಪುರುರಾಜನ ವಂಶವನ್ನು ವರ್ಣಿಸುವೆನು. ಇದೇ ವಂಶದಲ್ಲಿ ನೀನು ಜನ್ಮ ತಾಳಿರುವೆ. ಈ ವಂಶದಲ್ಲಿಯೇ ಹಲವಾರು ರಾಜರ್ಷಿಗಳೂ, ಬ್ರಹ್ಮರ್ಷಿಗಳೂ ಆಗಿಹೋಗಿದ್ದಾರೆ. ॥ ೧ ॥ ಪುರುವಿಗೆ ಜನಮೇಜಯ ಪುತ್ರನು ಹುಟ್ಟಿದನು. ಜನಮೇಜಯನಿಗೆ ಪ್ರಚಿನ್ವಾನ್, ಪ್ರಚಿನ್ವಂತನಿಗೆ ಪ್ರವೀರ, ಪ್ರವೀರನಿಗೆ ನಮಸ್ಯು, ನಮಸ್ಯುವಿಗೆ ಚಾರುಪದ ಪುತ್ರನಾದನು. ॥ ೨ ॥ ಚಾರುಪದನಿಂದ ಸುದ್ಯು, ಸುದ್ಯುವಿನಿಂದ ಬಹುಗವ, ಬಹುಗವನಿಂದ ಸಂಯಾತಿ, ಸಂಯಾತಿಯಿಂದ ಅಹಂಯಾತಿ, ಅಹಂಯಾತಿಯಿಂದ ರೌದ್ರಾಶ್ವ ಹುಟ್ಟಿದನು. ॥ ೩ ॥ ಪರೀಕ್ಷಿತನೇ ! ವಿಶ್ವಾತ್ಮಾ ಪ್ರಧಾನ ಪ್ರಾಣದಿಂದ ಹತ್ತು ಇಂದ್ರಿಯಗಳು ಆಗುವಂತೆಯೇ ಘೃತಾಚಿ ಅಪ್ಸರೆಯ ಗರ್ಭದಿಂದ ರೌದ್ರಾಶ್ವನು – ಋತೇಯು, ಕುಕ್ಷೇಯು, ಸ್ಥಂಡಿ ಲೇಯು, ಕೃತೇಯು, ಜಲೇಯು, ಸಂತತೇಯು, ಧರ್ಮೇಯು, ಸತ್ಯೇಯು, ವ್ರತೇಯು ಮತ್ತು ವನೇಯು ಎಂಬ ಹತ್ತು ಪುತ್ರರನ್ನು ಪಡೆದನು. ॥ ೪-೫ ॥ ರಾಜೇಂದ್ರ ! ಅವರಲ್ಲಿ ಋತೇಯುವಿನ ಪುತ್ರ ರಂತಿಭಾರ ಹುಟ್ಟಿದನು. ರಂತಿಭಾರನಿಗೆ – ಸುಮತಿ, ಧ್ರುವ, ಅಪ್ರತಿರಥರೆಂಬ ಮೂವರು ಪುತ್ರರಾದರು. ಅಪ್ರತಿರಥನಿಗೆ ಕಣ್ವ ನೆಂಬ ಪುತ್ರನಾದನು. ॥ ೬ ॥

ತಸ್ಯ ಮೇಧಾತಿಥಿಸ್ತಸ್ಮಾತ್ಪ್ರಸ್ಕಣ್ವಾದ್ಯಾ ದ್ವಿಜಾತಯಃ ।
ಪುತ್ರೋಽಭೂತ್ಸುಮತೇ ರೈಭ್ಯೋ ದುಷ್ಯಂತಸ್ತತ್ಸುತೋ ಮತಃ
॥ ೭ ॥

ದುಷ್ಯಂತೋ ಮೃಗಯಾಂ ಯಾತಃ ಕಣ್ವಾಶ್ರಮಪದಂ ಗತಃ ।
ತತ್ರಾಸೀನಾಂ ಸ್ವಪ್ರಭಯಾ ಮಂಡಯಂತೀಂ ರಮಾಮಿವ
॥ ೮ ॥

ವಿಲೋಕ್ಯ ಸದ್ಯೋ ಮುಮುಹೇ ದೇವಮಾಯಾಮಿವ ಸ್ತ್ರಿಯಮ್ ।
ಬಭಾಷೇ ತಾಂ ವರಾರೋಹಾಂ ಭಟೈಃ ಕತಿಪಯೈರ್ವೃತಃ
॥ ೯ ॥

ತದ್ದರ್ಶನಪ್ರಮುದಿತಃ ಸಂನಿವೃತ್ತ ಪರಿಶ್ರಮಃ ।
ಪಪ್ರಚ್ಛ ಕಾಮಸಂತಪ್ತಃ ಪ್ರಹಸನ್ ಶ್ಲಕ್ಷ್ಣಯಾ ಗಿರಾ
॥ ೧೦ ॥

ಕಾ ತ್ವಂ ಕಮಲಪತ್ರಾಕ್ಷಿ ಕಸ್ಯಾಸಿ ಹೃದಯಂಗಮೇ ।
ಕಿಂ ವಾ ಚಿಕೀರ್ಷಿತಂ ತ್ವತ್ರ ಭವತ್ಯಾ ನಿರ್ಜನೇ ವನೇ
॥ ೧೧ ॥

ವ್ಯಕ್ತಂ ರಾಜನ್ಯತನಯಾಂ ವೇದ್ಮ್ಯಹಂ ತ್ವಾಂ ಸುಮಧ್ಯಮೇ ।
ನ ಹಿ ಚೇತಃ ಪೌರವಾಣಾಮಧರ್ಮೇ ರಮತೇ ಕ್ವಚಿತ್
॥ ೧೨ ॥

*ಶಕುಂತಲೋವಾಚ*

ವಿಶ್ವಾಮಿತ್ರಾತ್ಮಜೈವಾಹಂ ತ್ಯಕ್ತಾ ಮೇನಕಯಾ ವನೇ ।
ವೇದೈತದ್ಭಗವಾನ್ ಕಣ್ವೋ ವೀರ ಕಿಂ ಕರವಾಮ ತೇ
॥ ೧೩ ॥

ಆಸ್ಯತಾಂ ಹ್ಯರವಿಂದಾಕ್ಷ ಗೃಹ್ಯತಾಮರ್ಹಣಂ ಚ ನಃ ।
ಭುಜ್ಯತಾಂ ಸಂತಿ ನೀವಾರಾ ಉಷ್ಯತಾಂ ಯದಿ ರೋಚತೇ
॥ ೧೪ ॥

*ದುಷ್ಯಂತ ಉವಾಚ*

ಉಪಪನ್ನಮಿದಂ ಸುಭ್ರು ಜಾತಾಯಾಃ ಕುಶಿಕಾನ್ವಯೇ ।
ಸ್ವಯಂ ಹಿ ವೃಣತೇ ರಾಜ್ಞಾಂ ಕನ್ಯಕಾಃ ಸದೃಶಂ ವರಮ್
॥ ೧೫ ॥

ಓಮಿತ್ಯುಕ್ತೇ ಯಥಾಧರ್ಮಮುಪಯೇಮೇ ಶಕುಂತಲಾಮ್ ।
ಗಾಂಧರ್ವವಿಧಿನಾ ರಾಜಾ ದೇಶಕಾಲವಿಧಾನವಿತ್
॥ ೧೬ ॥

ಅಮೋಘವೀರ್ಯೋ ರಾಜರ್ಷಿರ್ಮಹಿಷ್ಯಾಂ ವೀರ್ಯಮಾದಧೇ ।
ಶ್ವೋಭೂತೇ ಸ್ವಪುರಂ ಯಾತಃ ಕಾಲೇನಾಸೂತ ಸಾ ಸುತಮ್
॥ ೧೭ ॥

ಕಣ್ವನಿಗೆ ಪುತ್ರನಾದನು ಮೇಧಾತಿಥಿ. ಮೇಧಾತಿಥಿಯಿಂದ ಪ್ರಸ್ಕಣ್ವ ಮೊದಲಾದ ಬ್ರಾಹ್ಮಣರು ಉತ್ಪನ್ನರಾದರು. ಸುಮತಿಗೆ ರೈಭ್ಯನೆಂಬ ಪುತ್ರನಾದನು. ಈ ರೈಭ್ಯನ ಪುತ್ರನೇ ದುಷ್ಯಂತ. ॥ ೭ ॥

ಒಮ್ಮೆ ದುಷ್ಯಂತನು ತನ್ನ ಕೆಲವು ಸೈನಿಕರೊಂದಿಗೆ ಬೇಟೆಯಾಡಲು ವನಕ್ಕೆ ಹೋದನು. ಬೇಟೆಯಾಡುತ್ತಾ ಅವನು ಕಣ್ವ ಮುನಿಯ ಆಶ್ರಮಕ್ಕೆ ಹೋದನು. ಆ ಆಶ್ರಮದಲ್ಲಿ ದೇವಮಾಯೆಯಂತಿರುವ ಮನೋಹರವಾದ ಓರ್ವ ಯುವತಿಯು ಕುಳಿತಿದ್ದಳು. ಲಕ್ಷ್ಮಿಗೆ ಸಮಾನವಾದ ಆಕೆಯ ಅಂಗಕಾಂತಿಯಿಂದ ಆ ಆಶ್ರಮವು ಬೆಳಗುತ್ತಿತ್ತು. ಅಂತಹ ಸುಂದರಿಯನ್ನು ನೋಡುತ್ತಲೇ ದುಷ್ಯಂತನು ವಿಮೋಹಿತನಾಗಿ ಅವಳೊಂದಿಗೆ ಮಾತನಾಡತೊಡಗಿದನು. ॥ ೮-೯ ॥ ಅವಳನ್ನು ನೋಡಿದೊಡನೆಯೇ ಅವನಿಗೆ ಪರಮಾನಂದವಾಯಿತು. ಅವನ ಮನಸ್ಸಿನಲ್ಲಿ ಕಾಮವಾಸನೆ ಜಾಗ್ರತವಾಯಿತು. ಬಳಲಿಕೆಯೆಲ್ಲವೂ ಪರಿಹಾರವಾಯಿತು. ಅವನು ಮುಗುಳ್ನಗುತ್ತಾ ಮಧುರವಾದ ಮಾತುಗಳಿಂದ ಅವಳಲ್ಲಿ ಕೇಳಿದನು – ॥ ೧೦ ॥ ಎಲೈ ಕಮಲಾಕ್ಷಿಯೇ! ನೀನು ಯಾರು ? ಯಾರ ಮಗಳು ? ನನ್ನ ಹೃದಯವನ್ನು ನಿಸ್ಸತ್ತ ಆಕರ್ಷಿಸಿದ ಸುಂದರಿಯೇ! ನೀನು ಈ ನಿರ್ಜನ ವನದಲ್ಲಿ ಇದ್ದುಕೊಂಡು ಏನು ಮಾಡಬೇಕೆಂದಿರುವೆ ? ॥ ೧೧ ॥ ಸುಂದರಿಯೇ! ನೀನು ಯಾರೋ ಕ್ಷತ್ರಿಯನ ಮಗಳಾಗಿರಬೇಕೆಂದು ನಾನು ಸ್ಪಷ್ಟವಾಗಿ ತಿಳಿಯುತ್ತಿದ್ದೇನೆ. ಏಕೆಂದರೆ, ಪುರುವಂಶೀಯರ ಚಿತ್ತವು ಎಂದೂ ಅಧರ್ಮದ ಕಡೆಗೆ ವಾಲುವುದಿಲ್ಲ. ॥ ೧೨ ॥

**ಶಕುಂತಲೆಯು ಹೇಳಿದಳು** – ಮಹರಾಜ! ನೀವು ಹೇಳಿದುದು ನಿಜವಾಗಿದೆ. ನಾನು ವಿಶ್ವಾಮಿತ್ರರ ಮಗಳು. ಮೇನಕೆಯೆಂಬ ಅಪ್ಸರೆಯು ನನ್ನನ್ನು ವನದಲ್ಲಿ ಬಿಟ್ಟುಹೋಗಿದ್ದಳು. ಈ ಮಾತಿಗೆ ನನ್ನನ್ನು ಪಾಲಿಸಿ ಪೋಷಿಸಿದ ಮಹರ್ಷಿ ಕಣ್ವರೇ ಸಾಕ್ಷಿಯಾಗಿದ್ದಾರೆ. ವೀರಶಿರೋಮಣಿಯೇ! ನಾನು ನಿಮಗೆ ಏನು ಸೇವೆ ಮಾಡಲಿ? ॥ ೧೩ ॥ ಕಮಲಾಕ್ಷನೇ! ಇಲ್ಲಿಯೇ ಕುಳಿತುಕೋ. ನಾವು ಮಾಡಲಿರುವ ಯತ್ಕಿಂಚಿತ್ ಸತ್ಕಾರವನ್ನು ಸ್ವೀಕರಿಸು. ಆಶ್ರಮದಲ್ಲಿ ಶಾಲ್ಯಾನ್ನವಿದೆ. ನೀನು ಬಯಸುವಿರಾದರೆ ಊಟಮಾಡು. ಉಚಿತವೆನಿಸಿದರೆ ಇಲ್ಲೇ ಉಳಿದುಕೊಳ್ಳಬಹುದು. ॥ ೧೪ ॥

**ದುಷ್ಯಂತನು ಹೇಳಿದನು** – ಸುಂದರಿಯೇ! ನೀನು ಕುಶಿಕ ವಂಶದಲ್ಲಿ ಹುಟ್ಟಿರುವೆ. ಅದಕ್ಕಾಗಿ ಈ ಪ್ರಕಾರದ ಆತಿಥ್ಯ-ಸತ್ಕಾರ ಮಾಡುವುದು ನಿನಗೆ ಯೋಗ್ಯವೇ ಆಗಿದೆ. ಏಕೆಂದರೆ ರಾಜಕನ್ಯೆಯರು ಸ್ವತಃ ತಮ್ಮ ಪತಿಯನ್ನು ವರಣಮಾಡಿಕೊಳ್ಳುವರು. ॥ ೧೫ ॥ ಶಕುಂತಲೆಯ ಸ್ವೀಕೃತಿ ದೊರೆತಾಗ ದೇಶ, ಕಾಲ ಮತ್ತು ಶಾಸ್ತ್ರದ ವಿಧಿ-ವಿಧಾನಗಳನ್ನೂ ಬಲ್ಲ ದುಷ್ಯಂತನು ಗಾಂಧರ್ವವಿಧಿಯಿಂದ ಆಕೆಯನ್ನು ವಿವಾಹವಾದನು. ॥ ೧೬ ॥ ಅಮೋಘ ವೀರ್ಯನಾದ ದುಷ್ಯಂತನು ಅಂದು ರಾತ್ರಿ ಅಲ್ಲಿಯೇ ಇದ್ದು ಗರ್ಭಾಧಾನ ಸಂಸ್ಕಾರವನ್ನು ಮುಗಿಸಿ ಬೆಳಗಾಗುತ್ತಲೇ ತನ್ನ ರಾಜಧಾನಿಗೆ ತೆರಳಿದನು. ನವಮಾಸಗಳು ತುಂಬುತ್ತಲೇ ಶಕುಂತಲೆಯು ಗಂಡುಮಗುವನ್ನು ಪಡೆದಳು. ॥ ೧೭ ॥

ಕಣ್ವಃ ಕುಮಾರಸ್ಯ ವನೇ ಚಕ್ರೇ ಸಮುಚಿತಾಃ ಕ್ರಿಯಾಃ ।
ಬದ್ಧ್ವಾ ಮೃಗೇಂದ್ರಾಂಸ್ತರಸಾ ಕ್ರೀಡತಿ ಸ್ಮ ಸ ಬಾಲಕಃ ॥ ೧೮ ॥

ತಂ ದುರತ್ಯಯವಿಕ್ರಾಂತಮಾದಾಯ ಪ್ರಮದೋತ್ತಮಾ ।
ಹರೇರಂಶಾಂಶಸಂಭೂತಂ ಭರ್ತುರಂತಿಕಮಾಗಮತ್ ॥ ೧೯ ॥

ಯದಾ ನ ಜಗೃಹೇ ರಾಜಾ ಭಾರ್ಯಾಪುತ್ರಾವನಿಂದಿತೌ ।
ಶೃಣ್ವತಾಂ ಸರ್ವಭೂತಾನಾಂ ಖೇ ವಾಗಾಹಾಶರೀರಿಣೀ ॥ ೨೦ ॥

ಮಾತಾ ಭಸ್ತ್ರಾ ಪಿತುಃ ಪುತ್ರೋ ಯೇನ ಜಾತಃ ಸ ಏವ ಸಃ ।
ಭರಸ್ವ ಪುತ್ರಂ ದುಷ್ಯಂತ ಮಾವಮಂಸ್ಥಾಃ ಶಕುಂತಲಾಮ್ ॥ ೨೧ ॥

ರೇತೋಧಾಃ ಪುತ್ರೋ ನಯತಿ ನರದೇವ ಯಮಕ್ಷಯಾತ್ ।
ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ ॥ ೨೨ ॥

ಪಿತರ್ಯುಪರತೇ ಸೋಽಪಿ ಚಕ್ರವರ್ತೀ ಮಹಾಯಶಾಃ ।
ಮಹಿಮಾ ಗೀಯತೇ ತಸ್ಯ ಹರೇರಂಶಭುವೋ ಭುವಿ ॥ ೨೩ ॥

ಚಕ್ರಂ ದಕ್ಷಿಣಹಸ್ತೇಽಸ್ಯ ಪದ್ಮಕೋಶೋಽಸ್ಯ ಪಾದಯೋಃ ।
ಈಜೇ ಮಹಾಭಿಷೇಕೇಣ ಸೋಽಭಿಷಿಕ್ತೋಽಧಿರಾಡ್ವಿಭುಃ ॥ ೨೪ ॥

ಪಂಚಪಂಚಾಶತಾ ಮೇಧ್ಯೈರ್ಗಂಗಾಯಾಮನು ವಾಜಿಭಿಃ ।
ಮಾಮತೇಯಂ ಪುರೋಧಾಯ ಯಮುನಾಯಾಮನು ಪ್ರಭುಃ ॥ ೨೫ ॥

ಅಷ್ಟಸಪ್ತತಿಮೇಧ್ಯಾಶ್ವಾನ್ ಬಬಂಧ ಪ್ರದದದ್ವಸು ।
ಭರತಸ್ಯ ಹಿ ದೌಷ್ಯಂತೇರಗ್ನಿಃ ಸಾಚೀಗುಣೇ ಚಿತಃ ।
ಸಹಸ್ರಂ ಬದ್ವಶೋ ಯಸ್ಮಿನ್ ಬ್ರಾಹ್ಮಣಾ ಗಾ ವಿಭೇಜಿರೇ ॥ ೨೬ ॥

ಮಹರ್ಷಿ ಕಣ್ವರು ಕಾಡಿನಲ್ಲೇ ಆ ರಾಜಕುಮಾರನ ಜಾತಕರ್ಮಾದಿ ಸಂಸ್ಕಾರಗಳನ್ನು ವಿಧಿವತ್ತಾಗಿ ನೆರವೇರಿಸಿದರು. ಆ ಬಾಲಕನು ಬಾಲ್ಯದಲ್ಲೇ ದೊಡ್ಡ- ದೊಡ್ಡ ಸಿಂಹಗಳನ್ನು ಹಿಡಿದು ಕಟ್ಟಿಹಾಕಿ ಅವುಗಳೊಂದಿಗೆ ಆಡುತ್ತಿದ್ದನು. ॥ ೧೮ ॥

ಆ ಬಾಲಕನು ಭಗವಂತನ ಅಂಶಾಂಶಾವತಾರನಾಗಿದ್ದನು. ಅವನ ಬಲ ಪರಾಕ್ರಮಗಳು ಅಪರಿಮಿತವಾಗಿದ್ದುವು. ಪ್ರಮದೆಯರಲ್ಲಿ ಶ್ರೇಷ್ಠಳಾದ ಶಕುಂತಲೆಯು ಅವನನ್ನು ಜೊತೆಗೆ ಕರೆದುಕೊಂಡು ತನ್ನ ಪತಿಯಬಳಿಗೆ ಹೋದಳು. ॥ ೧೯ ॥ ನಿರ್ದೋಷಿಗಳಾದ ಭಾರ್ಯಾ-ಪುತ್ರರನ್ನು ರಾಜನು ಸ್ವೀಕರಿಸಲಿಲ್ಲ, ಅವರ ವಿಷಯವಾಗಿ ತಾನು ಏನನ್ನೂ ಅರಿಯೆನೆಂದು ಹೇಳಿಬಿಟ್ಟನು. ಈ ಸಮಯದಲ್ಲಿ ಸಮಸ್ತ ಪ್ರಾಣಿಗಳು ಕೇಳಿಸುವಂತೆ ಆಕಾಶದಲ್ಲಿ ಅಶರೀರವಾಣಿಯೊಂದು ನುಡಿಯಿತು –॥ ೨೦ ॥ "ಪುತ್ರನ ಉತ್ಪತ್ತಿಯಲ್ಲಿ ತಾಯಿಯು ಕೇವಲ ಚರ್ಮದ ಚೀಲಕ್ಕೆ ಸಮಾನಳಾಗಿರುತ್ತಾಳೆ. ವಾಸ್ತವವಾಗಿ ಪುತ್ರನು ಪಿತನಿಗೇ ಸೇರಿದವನು. ಏಕೆಂದರೆ, ತಂದೆಯೇ ಸಾಕ್ಷಾತ್ತಾಗಿ ಪುತ್ರನ ರೂಪದಲ್ಲಿ ಜನಿಸುತ್ತಾನೆ. ಎಲೈ ದುಷ್ಯಂತನೇ! ನೀನು ಶಕುಂತಲೆಯನ್ನು ತಿರಸ್ಕರಿಸಬೇಡ. ನಿನ್ನ ಪುತ್ರನ ಭರಣ-ಪೋಷಣೆ ಮಾಡು. ॥ ೨೧ ॥ ರಾಜನೇ! ವಂಶದ ವೃದ್ಧಿಯನ್ನು ಮಾಡುವ ಪುತ್ರನು ತನ್ನ ತಂದೆಯನ್ನು ನರಕದಿಂದ ಉದ್ಧರಿಸುವನು. ಆದುದರಿಂದ ನಿನ್ನ ಮಗನನ್ನು ತಿರಸ್ಕರಿಸಬೇಡ. ಶಕುಂತಲೆಯಲ್ಲಿ ಗರ್ಭವನ್ನು ಇಟ್ಟವನು ನೀನೇ ಆಗಿರುವೆ. ಅವಳು ಹೇಳುವುದು ಸತ್ಯವಾಗಿದೆ." ॥ ೨೨ ॥

ಆಕಾಶವಾಣಿಯಂತೆ ದುಷ್ಯಂತನು ಶಕುಂತಲೆಯನ್ನೂ, ತನ್ನ ಪುತ್ರನನ್ನು ಯಥಾಯೋಗ್ಯವಾಗಿ ಸ್ವೀಕರಿಸಿ, ಆ ಬಾಲಕನಿಗೆ ಭರತನೆಂದು ನಾಮಕರಣಮಾಡಿದನು. ಪರೀಕ್ಷಿತನೇ! ತಂದೆಯಾದ ದುಷ್ಯಂತನ ಮೃತ್ಯುವಾದ ಬಳಿಕ ಪರಮ ಯಶಸ್ವಿಯೂ, ಭಗವಂತನ ಅಂಶಸಂಭೂತನಾಗಿದ್ದ ಭರತನು ಚಕ್ರವರ್ತಿಯಾದನು. ಇಂದೂ ಕೂಡ ಅವನ ಮಹಿಮೆಯನ್ನು ಭೂಮಂಡಲದಲ್ಲಿ ಹಾಡಲಾಗುತ್ತದೆ. ॥ ೨೩ ॥ ಅವನ ಬಲದ ಕೈಯಲ್ಲಿ ಚಕ್ರದ ಚಿಹ್ನೆಯಿದ್ದಿತು. ಪಾದಗಳಲ್ಲಿ ಕಮಲಕೋಶದ ಚಿಹ್ನೆಗಳಿದ್ದವು. ಮಹಾಭಿಷೇಕದ ವಿಧಿಯಿಂದ ಪುರೋಹಿತರು ಭರತನನ್ನು ರಾಜಾಧಿರಾಜನಾದ ಚಕ್ರವರ್ತಿಯ ಪದವಿಯಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿದರು. ಅವನು ಮಹಾಶಕ್ತಿಶಾಲಿಯಾದ ರಾಜನಾಗಿದ್ದನು. ॥ ೨೪ ॥ ಭರತ ಚಕ್ರವರ್ತಿಯು ಮಮತಾ ಎಂಬುವಳ ಪುತ್ರ ದೀರ್ಘತಮಸ ಮುನಿಯನ್ನು ಪುರೋಹಿತನನ್ನಾಗಿಸಿಕೊಂಡು ಗಂಗೋತ್ರಿಯಿಂದ ಹಿಡಿದು ಗಂಗಾಸಾಗರಸಂಗಮದವರೆಗಿನ ಗಂಗಾತಟದಲ್ಲಿ ಐವತ್ತೈದು ಅಶ್ವಮೇಧಗಳನ್ನು ಮಾಡಿದನು. ಹೀಗೆಯೇ ಯಮುನೋತ್ರಿಯಿಂದ ಪ್ರಯಾಗದವರೆಗಿನ ಯಮುನಾತೀರದಲ್ಲಿ ಎಪ್ಪತ್ತೆಂಟು ಅಶ್ವಮೇಧಗಳನ್ನು ಮಾಡಿದನು. ಈ ಎಲ್ಲ ಯಜ್ಞಗಳಲ್ಲಿಯೂ ಭರತನು ಅಪಾರವಾದ ಧನರಾಶಿಯನ್ನು ಬ್ರಾಹ್ಮಣರಿಗೆ ದಾನ ಮಾಡಿದನು. ಅವನು ಪ್ರಕೃಷ್ಟವಾದ ಗುಣಗಳಿಂದ ಕೂಡಿದ ಪ್ರದೇಶದಲ್ಲಿ ಅಗ್ನಿಚಯನ ಮಾಡಿ, ಆ ಪ್ರದೇಶದಲ್ಲಿ ಒಂದು ಸಾವಿರ ಬ್ರಾಹ್ಮಣರು ಭರತನಿಂದ ದಕ್ಷಿಣೆಯಾಗಿ ಕೊಡಲ್ಪಟ್ಟ ಗೋವುಗಳನ್ನು ಬದ್ವ-ಬದ್ವ ಸಂಖ್ಯೆಯಲ್ಲಿ (ಒಂದು ಬದ್ವವೆಂದರೆ ೧೩,೦೮೪) ಹಂಚಿಕೊಂಡರು. ॥ ೨೫-೨೬ ॥

ತ್ರಯಸ್ತ್ರಿಂಶಚ್ಛತಂ ಹ್ಯಶ್ವಾನ್ಬದ್ಧ್ವಾ ವಿಸ್ಮಾಪಯನ್ನೃಪಾನ್ ।
ದೌಷ್ಯಂತಿರತ್ಯಗಾನ್ಮಾಯಾಂ ದೇವಾನಾಂ ಗುರುಮಾಯಯೌ
॥ ೨೭ ॥

ಮೃಗಾನ್ ಶುಕ್ಲದತಃ ಕೃಷ್ಣಾನ್ ಹಿರಣ್ಯೇನ ಪರೀವೃತಾನ್ ।
ಅದಾತ್ಕರ್ಮಣಿ ಮಷ್ಣಾರೇ ನಿಯುತಾನಿ ಚತುರ್ದಶ
॥ ೨೮ ॥

ಭರತಸ್ಯ ಮಹತ್ಕರ್ಮ ನ ಪೂರ್ವೇ ನಾಪರೇ ನೃಪಾಃ ।
ನೈವಾಪುರ್ನೈವ ಪ್ರಾಪ್ಸ್ಯಂತಿ ಬಾಹುಭ್ಯಾಂ ತ್ರಿದಿವಂ ಯಥಾ
॥ ೨೯ ॥

ಕಿರಾತಹೂಣಾನ್ಯವನಾನಂಧ್ರಾನ್ ಕಂಕಾನ್ಖಶಾಂಛಕಾನ್ ।
ಅಬ್ರಹ್ಮಣ್ಯಾನ್ನೃಪಾಂಶ್ಚಾಹನ್ ಮ್ಲೇಚ್ಛಾನ್ದಿಗ್ವಿಜಯೇಽಖಿಲಾನ್
॥ ೩೦ ॥

ಜಿತ್ವಾ ಪುರಾಸುರಾದೇವಾನ್ಯೇ ರಸೌಕಾಂಸಿ ಭೇಜಿರೇ ।
ದೇವಸ್ತ್ರಿಯೋ ರಸಾಂ ನೀತಾಃ ಪ್ರಾಣಿಭಿಃ ಪುನರಾಹರತ್
॥ ೩೧ ॥

ಸರ್ವಕಾಮಾನ್ ದುದುಹತುಃ ಪ್ರಜಾನಾಂ ತಸ್ಯ ರೋದಸೀ ।
ಸಮಾಸ್ತ್ರಿಣವಸಾಹಸ್ರೀರ್ದಿಕ್ಷು ಚಕ್ರಮವರ್ತಯತ್
॥ ೩೨ ॥

ಸ ಸಮ್ರಾಡ್ಲೋಕಪಾಲಾಖ್ಯಮೈಶ್ವರ್ಯಮಧಿರಾಟ್ ಶ್ರಿಯಮ್ ।
ಚಕ್ರಂ ಚಾಸ್ಖಲಿತಂ ಪ್ರಾಣಾನ್ಮೃಷೇತ್ಯುಪರರಾಮ ಹ
॥ ೩೩ ॥

ತಸ್ಯಾಸನ್ನೃಪ ವೈದರ್ಭ್ಯಃ ಪತ್ನ್ಯಸ್ತಿಸ್ರಃ ಸುಸಮ್ಮತಾಃ ।
ಜಘ್ನುಸ್ತ್ಯಾಗಭಯಾತ್ಪುತ್ರಾನ್ನಾನುರೂಪಾ ಇತೀರಿತೇ
॥ ೩೪ ॥

ತಸ್ಯೈವಂ ವಿತಥೇ ವಂಶೇ ತದರ್ಥಂ ಯಜತಃ ಸುತಮ್ ।
ಮರುತ್ಸ್ತೋಮೇನ ಮರುತೋ ಭರದ್ವಾಜಮುಪಾದದುಃ
॥ ೩೫ ॥

ಅಂತರ್ವತ್ನ್ಯಾಂ ಭ್ರಾತೃಪತ್ನ್ಯಾಂ ಮೈಥುನಾಯ ಬೃಹಸ್ಪತಿಃ ।
ಪ್ರವೃತ್ತೋ ವಾರಿತೋ ಗರ್ಭಂ ಶಪ್ತ್ವಾ ವೀರ್ಯಮವಾಸೃಜತ್
॥ ೩೬ ॥

ಹೀಗೆ ಭರತ ಚಕ್ರವರ್ತಿಯು ಆ ಯಜ್ಞಗಳಲ್ಲಿ ಒಂದು ನೂರಮೂವತ್ತಮೂರು ಕುದುರೆಗಳನ್ನು ಯೂಪಗಳಿಗೆ ಕಟ್ಟಿ ನೂರ ಮೂವತ್ತಮೂರು ಯಜ್ಞಗಳನ್ನು ಮಾಡಿ ಸಮಸ್ತ ರಾಜರನ್ನು ಆಶ್ಚರ್ಯಗೊಳಿಸಿದನು. ಈ ಯಜ್ಞಗಳ ಮೂಲಕ ಈ ಲೋಕದಲ್ಲಿ ಭರತನಿಗೆ ಪರಮ ಯಶಸ್ಸು ಲಭಿಸಿತು. ಕೊನೆಗೆ ಅವನು ಮಾಯೆಯನ್ನು ಜಯಿಸಿ, ದೇವತೆಗಳ ಪರಮಗುರುವಾದ ಭಗವಾನ್ ಶ್ರೀಹರಿಯನ್ನು ಪಡೆದುಕೊಂಡನು. ॥ ೨೭ ॥ ಯಜ್ಞದಲ್ಲಿ 'ಮಷ್ಣಾರ' ಎಂಬ ಒಂದು ಕರ್ಮವಿರುತ್ತದೆ. ಅದರಲ್ಲಿ ಭರತನು ಸುವರ್ಣ ವಿಭೂಷಿತವಾದ ಬಿಳಿಯ ದಂತಗಳಿಂದ ಕೂಡಿದ್ದ ಕಪ್ಪುಬಣ್ಣದ ಹದಿನಾಲ್ಕು ಲಕ್ಷ ಆನೆಗಳನ್ನು ದಾನಮಾಡಿದನು. ॥ ೨೮ ॥ ಭರತನು ಮಾಡಿದಂತಹ ಮಹಾಕಾರ್ಯವನ್ನು ಹಿಂದೆ ಯಾರೂ ಮಾಡಿರಲಿಲ್ಲ, ಮುಂದೆ ಯಾರೂ ಮಾಡಲಾರರು. ಯಾರಾದರೂ ಕೈಯಿಂದ ಸ್ವರ್ಗವನ್ನು ಮುಟ್ಟಬಲ್ಲನೇ ? ॥ ೨೯ ॥ ಭರತ ಚಕ್ರವರ್ತಿಯು ದಿಗ್ವಿಜಯದ ಸಮಯದಲ್ಲಿ ಕಿರಾತ, ಹೂಣ, ಯವನ, ಆಂಧ್ರ, ಕಂಕ, ಖಸ, ಶಕ, ಮ್ಲೇಚ್ಛ ಮೊದಲಾದ ಸಮಸ್ತ ಬ್ರಾಹ್ಮಣದ್ರೋಹಿಗಳನ್ನು ಕೊಂದುಹಾಕಿದನು. ॥ ೩೦ ॥ ಬಲಿಷ್ಠರಾದ ಅಸುರರು ದೇವತೆಗಳನ್ನು ಗೆದ್ದು, ದೇವಸ್ತ್ರೀಯರನ್ನು ಅಪಹರಿಸಿಕೊಂಡು ರಸಾತಳಕ್ಕೆ ಹೋಗಿ ವಾಸಮಾಡುತ್ತಿದ್ದರು. ದೇವತೆಗಳ ಪ್ರಾರ್ಥನೆಯಂತೆ ಭರತಚಕ್ರವರ್ತಿಯು ಆ ದೇವತಾ ಸ್ತ್ರೀಯರನ್ನು ಬಿಡಿಸಿ ತಂದು ದೇವತೆಗಳಿಗೆ ಒಪ್ಪಿಸಿದನು. ॥ ೩೧ ॥ ಭರತನ ರಾಜ್ಯದಲ್ಲಿ ಭೂಮ್ಯಂತರಿಕ್ಷಗಳು ಪ್ರಜೆಗಳ ಸಕಲ ಆವಶ್ಯಕತೆಗಳನ್ನು ಪೂರ್ಣಗೊಳಿಸುತ್ತಿದ್ದವು. ಅವನು ಇಪ್ಪತ್ತೇಳುಸಾವಿರ ವರ್ಷಗಳವರೆಗೆ ಅಖಂಡ ಭೂಮಂಡಲದ ಏಕಚ್ಛತ್ರ ರಾಜ್ಯವಾಳಿದನು. ॥ ೩೨ ॥ ಕೊನೆಗೆ ಭರತ ಚಕ್ರವರ್ತಿಯು – ಲೋಕಪಾಲರನ್ನೂ ಚಕಿತಗೊಳಿಸುವಂತಹ ಐಶ್ವರ್ಯ, ಸಾರ್ವಭೌಮ ಸಂಪತ್ತು, ಅಖಂಡ ಶಾಸನ ಮತ್ತು ಈ ಜೀವನವೂ ಕೂಡ ಮಿಥ್ಯೆಯೇ ಆಗಿದೆ ಎಂದು ನಿಶ್ಚಯಿಸಿ ಸಂಸಾರದಿಂದ ವಿರಕ್ತನಾದನು. ॥ ೩೩ ॥

ಪರೀಕ್ಷಿತನೇ ! ವಿದರ್ಭರಾಜನ ಮೂವರು ಕನ್ಯೆಯರು ಭರತ ಚಕ್ರವರ್ತಿಯ ಪತ್ನಿಯರಾಗಿದ್ದರು. ಅವರು ಪತಿಯನ್ನು ಬಹಳವಾಗಿ ಆದರಿಸುತ್ತಿದ್ದರು. ಆದರೆ ಭರತನು ಅವರಲ್ಲಿ – ನಿಮ್ಮಲ್ಲಿ ಹುಟ್ಟಿದ ಮಕ್ಕಳು ನನಗೆ ಅನುರೂಪರಾಗಿಲ್ಲವೆಂದು ಹೇಳಿದಾಗ ಅವರೆಲ್ಲರೂ ಹೆದರಿ – ಸಾಮ್ರಾಟನು ನಮ್ಮನ್ನು ತ್ಯಜಿಸದಿರಲಿ ಎಂದು ತಮ್ಮ ಮಕ್ಕಳನ್ನು ಕೊಂದುಹಾಕಿದರು. ॥ ೩೪ ॥ ಹೀಗೆ ಭರತಚಕ್ರವರ್ತಿಯ ವಂಶವು ವಿಚ್ಛಿನ್ನವಾಯಿತು. ಆಗ ಅವನು ಸಂತಾನದ ಪ್ರಾಪ್ತಿಗಾಗಿ 'ಮರುತ್‌ಸ್ತೋಮ'ವೆಂಬ ಯಜ್ಞವನ್ನು ಮಾಡಿದನು. ಇದರಿಂದ ಮರುದ್ಗಣರು ಸುಪ್ರೀತರಾಗಿ ಭರತನಿಗೆ ಭರದ್ವಾಜನೆಂಬ ಪುತ್ರನನ್ನು ದಯಪಾಲಿಸಿದರು. ॥ ೩೫ ॥ ಭರದ್ವಾಜರ ಉತ್ಪತ್ತಿಯ ಪ್ರಸಂಗ ಇಂತಿದೆ – ಒಮ್ಮೆ ಬೃಹಸ್ಪತಿಯು ತನ್ನ ತಮ್ಮನಾದ ಉತಥ್ಯನ ಗರ್ಭವತಿಯಾದ ಪತ್ನಿಯೊಡನೆ ಸಮಾಗಮವನ್ನು ಬಯಸಿದರು. ಆ ಸಮಯದಲ್ಲಿ ಗರ್ಭದಲ್ಲಿ ಬಾಲಕ (ದೀರ್ಘತಮಾ)ನು ಅವನನ್ನು ತಡೆದನು. ಆದರೆ ಬೃಹಸ್ಪತಿಯು ಅದರ ಮಾತಿಗೆ ಕಿವಿಗೊಡದೆ ಅದಕ್ಕೆ 'ನೀನು ಕುರುಡನಾಗು' ಎಂದು ಶಪಿಸಿ ಗರ್ಭಾಧಾನವನ್ನು ಮಾಡಿಬಿಟ್ಟನು. ॥ ೩೬ ॥

ತಂ ತ್ಯಕ್ತುಕಾಮಾಂ ಮಮತಾಂ ಭರ್ತೃತ್ಯಾಗವಿಶಂಕಿತಾಮ್ ।
ನಾಮನಿರ್ವಚನಂ ತಸ್ಯ ಶ್ಲೋಕಮೇನಂ ಸುರಾ ಜಗುಃ ॥ ೩೭ ॥

ಉತಥ್ಯನ ಪತ್ನೀ ಮಮತೆಯು – ತನ್ನ ಪತಿಯು ತನ್ನನ್ನು ತ್ಯಜಿಸಿ ಬಿಡುವನೆಂದು ಹೆದರಿದಳು. ಅದಕ್ಕಾಗಿ ಬೃಹಸ್ಪತಿಯ ಮೂಲಕ ಹುಟ್ಟಲಿರುವ ಶಿಶುವನ್ನು ತ್ಯಜಿಸಲು ಬಯಸಿದಳು. ಆ ಸಮಯದಲ್ಲಿ ದೇವತೆಗಳು ಗರ್ಭಸ್ಥವಾದ ಶಿಶುವಿನ ನಾಮನಿರ್ವಚನ ಮಾಡುತ್ತಾ ಈ ಶ್ಲೋಕವನ್ನು ಹೇಳಿದರು. ॥ ೩೭ ॥ ಮೂಢಳೇ! ನಿನ್ನ ಪತಿಗೂ ಮತ್ತು ಬೃಹಸ್ಪತಿಗೂ ಮಗನಾಗಿರುವ ಈ ದ್ವಾಜನನ್ನು ನೀನೇ ಭರಿಸು. ಹೆದರಬೇಡ ಎಂದು ಹೇಳಿದಾಗ ಮಮತೆಯು ಒಲ್ಲೆನೆಂದಳು. ಆಗ ಬೃಹಸ್ಪತಿಯೇ! ನಿನಗೂ ನಿನ್ನ ತಮ್ಮನಿಗೂ ಪುತ್ರರೂಪದಲ್ಲಿರುವ ಈ ದ್ವಾಜನನ್ನು ನೀನೇ ಭರಿಸು. ದೇವತೆಗಳ ಮಾತಿಗೆ ಬೃಹಸ್ಪತಿಯು ಒಲ್ಲೆನೆಂದನು. ಇದರಿಂದಾಗಿ ಈ ಮಗುವಿಗೆ ಭರದ್ವಾಜನೆಂದು ಹೆಸರಾಯಿತು. ॥ ೩೮ ॥ ದೇವತೆಗಳ ಮೂಲಕ ಹೀಗೆ ನಾಮನಿರ್ವಚನವಾದರೂ ಮಮತೆಯೂ ನನ್ನ ಈ ಪುತ್ರನು ಅನ್ಯಾಯದಿಂದ ಹುಟ್ಟಿರುವನು ಎಂದು ತಿಳಿದು ಆಕೆಯು ಆ ಶಿಶುವನ್ನು ಬಿಟ್ಟುಬಿಟ್ಟಳು. ಆಗ ಮರುದ್ಗಣರೇ ಅದನ್ನು ಸಾಕಿದರು. ಭರತನ ವಂಶವು ನಿಂತುಹೋಗುವಾಗ, ಅವನನ್ನು ತಂದು ಭರತನಿಗೆ ಇತ್ತರು. ಈ ವಿತಥನೇ (ಭರದ್ವಾಜ) ಭರತನಿಗೆ ದತ್ತಪುತ್ರನಾದನು. ॥ ೩೯ ॥

ಮೂಢೇ ಭರ ದ್ವಾಜಮಿಮಂ ಭರ ದ್ವಾಜಂ ಬೃಹಸ್ಪತೇ ।
ಯಾತೌ ಯದುಕ್ತ್ವಾ ಪಿತರೌ ಭರದ್ವಾಜಸ್ತತಸ್ತ್ವಯಮ್ ॥ ೩೮ ॥

ಚೋದ್ಯಮಾನಾ ಸುರೈರೇವಂ ಮತ್ವಾ ವಿತಥಮಾತ್ಮಜಮ್ ।
ವ್ಯಸೃಜನ್ಮರುತೋಽಬಿಭ್ರನ್ ದತ್ತೋಽಯಂ ವಿತಥೇಽನ್ವಯೇ ॥ ೩೯ ॥

ಇಪ್ಪತ್ತನೆಯ ಅಧ್ಯಾಯವು ಮುಗಿಯಿತು. ॥ ೨೦ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ ವಿಂಶೋಽಧ್ಯಾಯಃ ॥ ೨೦ ॥

# ಇಪ್ಪತ್ತೊಂದನೆಯ ಅಧ್ಯಾಯ

## ಭರತವಂಶದ ವರ್ಣನೆ – ರಂತಿದೇವನ ಕಥೆ

*ಶ್ರೀಶುಕ ಉವಾಚ*

ವಿತಥಸ್ಯ ಸುತೋ ಮನ್ಯುರ್ಬೃಹತ್ಕ್ಷತ್ರೋ ಜಯಸ್ತತಃ ।
ಮಹಾವೀರ್ಯೋ ನರೋ ಗರ್ಗಃ ಸಂಕೃತಿಸ್ತು ನರಾತ್ಮಜಃ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ವಿತಥ ಅಥವಾ ಭರದ್ವಾಜನ ಮಗ ಮನ್ಯು ಎಂಬುವನು. ಮನ್ಯುವಿಗೆ – ಬೃಹತ್‌ಕ್ಷತ್ರ, ಜಯ, ಮಹಾವೀರ್ಯ, ನರ, ಗರ್ಗರೆಂಬ ಐವರು ಪುತ್ರರಾದರು. ನರನಿಗೆ ಸಂಕೃತಿ ಎಂಬ ಮಗನಿದ್ದನು. ॥ ೧ ॥ ಸಂಕೃತಿಗೆ ಗುರು ಮತ್ತು ರಂತಿದೇವರೆಂಬ ಇಬ್ಬರು ಮಕ್ಕಳಾದರು. ಪರೀಕ್ಷಿತನೇ! ರಂತಿದೇವನ ನಿರ್ಮಲವಾದ ಕೀರ್ತಿಯು ಇಹಪರಲೋಕಗಳಲ್ಲಿ ಎಲ್ಲೆಡೆ ಕೊಂಡಾಡಲ್ಪಡುತ್ತದೆ. ॥ ೨ ॥ ರಂತಿದೇವನು ಆಕಾಶದಂತೆ ಪ್ರಯತ್ನವಿಲ್ಲದೆ ದೈವವಶದಿಂದ ಪ್ರಾಪ್ತವಾದ ವಸ್ತುಗಳನ್ನು ಉಪಭೋಗಿಸುತ್ತಿರುವಾಗ ದಿನಗಳೆದಂತೆ ಅವನ ಸಂಪತ್ತು ಕರಗಿಹೋಯಿತು. ಏನಾದರೂ ದೊರಕಿದರೆ ಅದನ್ನು ಇತರರಿಗೆ ಕೊಟ್ಟು ತಾನು ಹಸಿದುಕೊಂಡೇ ಇರುತ್ತಿದ್ದನು. ಅವನು ಸಂಗ್ರಹ-ಪರಿಗ್ರಹ, ಮಮತೆಯಿಂದ ರಹಿತನಾಗಿ ಧೈರ್ಯಶಾಲಿಯಾಗಿದ್ದನು ಮತ್ತು ತನ್ನ ಕುಟುಂಬದೊಡನೆ ದುಃಖವನ್ನು ಅನುಭವಿಸುತ್ತಾ ಇದ್ದನು. ॥ ೩ ॥ ಒಮ್ಮೆ ಸತತವಾಗಿ ನಲವತ್ತೆಂಟು ದಿನಗಳವರೆಗೆ ಅವನಿಗೆ ನೀರೂ ಕೂಡ ಸಿಗದೆ ಕಳೆದುಹೋದುವು. ನಲವತ್ತೊಂಭತ್ತನೆಯ ದಿನ ಬೆಳಿಗ್ಗೆಯೇ ಅವನಿಗೆ ಸ್ವಲ್ಪ ತುಪ್ಪ, ಪಾಯಸ, ಗೋದಿಯ ಅನ್ನ ಮತ್ತು ನೀರು ದೊರೆತವು. ॥ ೪ ॥

ಗುರುಶ್ಚ ರಂತಿದೇವಶ್ಚ ಸಂಕೃತೇಃ ಪಾಂಡುನಂದನ ।
ರಂತಿದೇವಸ್ಯ ಹಿ ಯಶ ಇಹಾಮುತ್ರ ಚ ಗೀಯತೇ ॥ ೨ ॥

ವಿಯದ್ವಿತ್ತಸ್ಯ ದದತೋ ಲಬ್ಧಂ ಲಬ್ಧಂ ಬುಭುಕ್ಷತಃ ।
ನಿಷ್ಕಿಂಚನಸ್ಯ ಧೀರಸ್ಯ ಸಕುಟುಂಬಸ್ಯ ಸೀದತಃ ॥ ೩ ॥

ವ್ಯತೀಯುರಷ್ಟಚತ್ವಾರಿಂಶದಹಾನ್ಯಪಿಬತಃ ಕಿಲ ।
ಘೃತಪಾಯಸಸಂಯಾವಂ ತೋಯಂ ಪ್ರಾತರುಪಸ್ಥಿತಮ್ ॥ ೪ ॥

ಕೃಚ್ಛ್ರಪ್ರಾಪ್ತಕುಟುಂಬಸ್ಯ ಕ್ಷುತ್ತೃಡ್ಭ್ಯಾಂ ಜಾತವೇಪಥೋಃ ।
ಅತಿಥಿರ್ಬ್ರಾಹ್ಮಣಃ ಕಾಲೇ ಭೋಕ್ತುಕಾಮಸ್ಯ ಚಾಗಮತ್ ॥ ೫ ॥

ತಸ್ಮೈ ಸಂವ್ಯಭಜತ್ಸೋಽನ್ನಮಾದೃತ್ಯ ಶ್ರದ್ಧಯಾನ್ವಿತಃ ।
ಹರಿಂ ಸರ್ವತ್ರ ಸಂಪಶ್ಯನ್ಸ ಭುಕ್ತ್ವಾ ಪ್ರಯಯೌ ದ್ವಿಜಃ ॥ ೬ ॥

ಅಥಾನ್ಯೋ ಭೋಕ್ಷ್ಯಮಾಣಸ್ಯ ವಿಭಕ್ತಸ್ಯ ಮಹೀಪತೇ ।
ವಿಭಕ್ತಂ ವ್ಯಭಜತ್ತಸ್ಮೈ ವೃಷಲಾಯ ಹರಿಂ ಸ್ಮರನ್ ॥ ೭ ॥

ಯಾತೇ ಶೂದ್ರೇ ತಮನ್ಯೋಽಗಾದತಿಥಿಃ ಶ್ವಭಿರಾವೃತಃ ।
ರಾಜನ್ಮೇ ದೀಯತಾಮನ್ನಂ ಸಗಣಾಯ ಬುಭುಕ್ಷತೇ ॥ ೮ ॥

ಸ ಆದೃತ್ಯಾವಶಿಷ್ಟಂ ಯದ್ಬಹುಮಾನಪುರಸ್ಕೃತಮ್ ।
ತಚ್ಚ ದತ್ತ್ವಾ ನಮಶ್ಚಕ್ರೇ ಶ್ವಭ್ಯಃ ಶ್ವಪತಯೇ ವಿಭುಃ ॥ ೯ ॥

ಪಾನೀಯಮಾತ್ರಮುಚ್ಛೇಷಂ ತಚ್ಚೈಕಪರಿತರ್ಪಣಮ್ ।
ಪಾಸ್ಯತಃ ಪುಲ್ಕಸೋಽಭ್ಯಾಗಾದಪೋ ದೇಹ್ಯಶುಭಸ್ಯ ಮೇ ॥ ೧೦ ॥

ತಸ್ಯ ತಾಂ ಕರುಣಾಂ ವಾಚಂ ನಿಶಮ್ಯ ವಿಪುಲಶ್ರಮಾಮ್ ।
ಕೃಪಯಾ ಭೃಶಸಂತಪ್ತ ಇದಮಾಹಾಮೃತಂ ವಚಃ ॥ ೧೧ ॥

ನ ಕಾಮಯೇಽಹಂ ಗತಿಮೀಶ್ವರಾತ್ಪರಾ-
ಮಷ್ಟರ್ಧಿಯುಕ್ತಾಮಪುನರ್ಭವಂ ವಾ ।
ಆರ್ತಿಂ ಪ್ರಪದ್ಯೇಽಖಿಲದೇಹಭಾಜಾ-
ಮಂತಃಸ್ಥಿತೋ ಯೇನ ಭವಂತ್ಯದುಃಖಾಃ ॥ ೧೨ ॥

ಕ್ಷುತ್ತೃಟ್ಶ್ರಮೋ ಗಾತ್ರಪರಿಶ್ರಮಶ್ಚ
ದೈನ್ಯಂ ಕ್ಲಮಃ ಶೋಕವಿಷಾದಮೋಹಾಃ ।
ಸರ್ವೇ ನಿವೃತ್ತಾಃ ಕೃಪಣಸ್ಯ ಜಂತೋ-
ರ್ಜಿಜೀವಿಷೋರ್ಜೀವಜಲಾರ್ಪಣಾನ್ಮೇ ॥ ೧೩ ॥

ಅವನ ಪರಿವಾರವು ಹಸಿವು-ಬಾಯಾರಿಕೆಯಿಂದ ಬಹಳ ಸಂಕಟಪಡುತ್ತಾ ಗಡ-ಗಡನೆ ನಡುಗುತ್ತಿತ್ತು. ಆದರೆ ಅವರೆಲ್ಲರೂ ಇನ್ನೇನು ಭೋಜನ ಮಾಡಬೇಕೆಂದಿರುವಾಗ ಓರ್ವ ಬ್ರಾಹ್ಮಣನು ಅತಿಥಿಯಾಗಿ ಬಂದನು. ॥ ೫ ॥ ರಂತಿದೇವನು ಎಲ್ಲರಲ್ಲಿ ಶ್ರೀಭಗವಂತನನ್ನೇ ದರ್ಶಿಸುತ್ತಿದ್ದನು. ಆದುದರಿಂದ ಅವನು ಅತ್ಯಂತ ಶ್ರದ್ಧಾದರಗಳಿಂದ ದೊರಕಿದ ಆದೇ ಅನ್ನದಿಂದ ಬ್ರಾಹ್ಮಣನಿಗೆ ಭೋಜನ ಮಾಡಿಸಿದನು. ಬ್ರಾಹ್ಮಣನು ಭೋಜನಮಾಡಿ ಹೊರಟುಹೋದನು. ॥ ೬ ॥

ಪರೀಕ್ಷಿತನೇ! ಈಗ ಉಳಿದಿರುವ ಅನ್ನವನ್ನು ಪರಸ್ಪರ ಹಂಚಿಕೊಂಡು ಊಟಮಾಡಲು ರಂತಿದೇವನು ಬಯಸಿದನು. ಅದೇ ಸಮಯಕ್ಕೆ ಇನ್ನೋರ್ವ ಶೂದ್ರನು ಅತಿಥಿಯಾಗಿ ಬಂದನು. ರಂತಿದೇವನು ಭಗವಂತನನ್ನು ಸ್ಮರಿಸುತ್ತಾ ಆ ಉಳಿದ ಅನ್ನದಲ್ಲಿಯೂ ಸ್ವಲ್ಪ ಭಾಗವನ್ನು ಶೂದ್ರನ ರೂಪದಲ್ಲಿ ಬಂದ ಅತಿಥಿಗೆ ಊಟ ಮಾಡಿಸಿದನು. ॥ ೭ ॥ ಶೂದ್ರನು ತಿಂದುಂಡು ಹೊರಟುಹೋದಾಗ ನಾಯಿಗಳೊಂದಿಗೆ ಮತ್ತೋರ್ವ ಅತಿಥಿಯು ಬಂದನು. ಅವನೆಂದನು – ರಾಜನೇ! ನಾನು ಮತ್ತು ನನ್ನ ನಾಯಿಗಳು ಹಸಿದಿದ್ದೇವೆ. ತಿನ್ನಲು ಏನಾದರೂ ಕೊಡು. ॥ ೮ ॥ ರಂತಿದೇವನು ಅತ್ಯಂತ ಆದರಭಾವದಿಂದ ಬಂದ ಅತಿಥಿಗೆ ಉಳಿದ ಅನ್ನವನ್ನು ಕೊಟ್ಟನು ಮತ್ತು ಭಗವನ್ಮಯನಾಗಿ ನಾಯಿಯ ಒಡೆಯನ ರೂಪದಲ್ಲಿ ಬಂದ ಭಗವಂತನನ್ನು ನಮಸ್ಕರಿಸಿದನು. ॥ ೯ ॥ ಈಗ ಕೇವಲ ನೀರು ಮಾತ್ರ ಉಳಿದಿತ್ತು. ಅದೂ ಕೂಡ ಒಬ್ಬನಿಗೆ ಕುಡಿಯಲು ಸಾಕಾಗುವಷ್ಟೇ ಇತ್ತು. ಅದನ್ನು ತಮ್ಮಲ್ಲಿ ಹಂಚಿಕೊಂಡು ಕುಡಿಯಬೇಕೆಂದಿರುವಾಗ ಓರ್ವ ಚಾಂಡಾಲನು ಬಂದುಬಿಟ್ಟನು – 'ಸ್ವಾಮಿ! ನಾನು ಅತ್ಯಂತ ನೀಚನಾಗಿರುವೆನು. ನನಗೆ ನೀರನ್ನು ಕುಡಿಸು' ಎಂದು ಹೇಳಿದನು. ॥ ೧೦ ॥ ಹೀಗೆ ಹೇಳಲೂ ಕೂಡ ಬಹಳ ಬಳಲಿ ಕಷ್ಟಪಡುತ್ತಿದ್ದ ಆ ಚಾಂಡಾಲನ ಕರುಣಾಪೂರ್ಣವಾದ ಮಾತನ್ನು ಕೇಳಿ, ಕರುಣಾಶಾಲಿಯಾದ ರಂತಿದೇವನು ದಯೆಯಿಂದ ಅತ್ಯಂತ ಸಂಕಟಪಡುತ್ತಾ ಅಮೃತಮಯ ಈ ಮಾತನ್ನು ಹೇಳಿದನು. ॥ ೧೧ ॥ ನಾನು ಭಗವಂತನಲ್ಲಿ ಅಣಿಮಾದಿ ಅಷ್ಟಸಿದ್ಧಿಗಳಿಂದ ಕೂಡಿದ ಪರಮಗತಿಯನ್ನು ಬಯಸುವುದಿಲ್ಲ. ಹೆಚ್ಚೇನು ಮೋಕ್ಷವನ್ನೂ ಕೂಡ ಬೇಕೆಂದು ಕೇಳುವುದಿಲ್ಲ. ನಾನು ಸಮಸ್ತ ಪ್ರಾಣಿಗಳ ಹೃದಯದಲ್ಲಿ ನೆಲೆಸಿ ಅವರ ಎಲ್ಲ ದುಃಖಗಳನ್ನು ನಾನೇ ಸಹಿಸುವಂತಾಗಲಿ. ಹೀಗೆ ಮಾಡುವುದರಿಂದ ಯಾವ ಪ್ರಾಣಿಗೂ ದುಃಖವಾಗದಿರಲೆಂದು ಮಾತ್ರ ನನ್ನ ಅಪೇಕ್ಷೆಯಾಗಿದೆ. ॥ ೧೨ ॥ ಈ ದೀನ ಪ್ರಾಣಿಯು ನೀರು ಕುಡಿದಾದರೂ ಬದುಕಲು ಬಯಸುತ್ತಿದೆ. ನೀರನ್ನು ಕೊಟ್ಟರೆ ಇವನ ಜೀವನದ ರಕ್ಷಣೆಯಾಗುವುದು. ಇದರಿಂದಾಗಿ ನನ್ನ ಹಸಿವು-ಬಾಯಾರಿಕೆಯ ಪೀಡೆ, ಶರೀರದ ಶಿಥಿಲತೆ, ದೀನತೆ, ಗ್ಲಾನಿ, ಶೋಕ, ವಿಷಾದ, ಮೋಹ ಇವೆಲ್ಲವೂ ಹೊರಟುಹೋಗುತ್ತವೆ. ನಿಶ್ಚಯವಾಗಿ ಈಗ ನಾನೇ ಸುಖಿಯು ॥ ೧೩ ॥

ಇತಿ ಪ್ರಭಾಷ್ಯ ಪಾನೀಯಂ ಮ್ರಿಯಮಾಣಃ ಪಿಪಾಸಯಾ ।
ಪುಲ್ಕಸಾಯಾದದಾದ್ಧೀರೋ ನಿಸರ್ಗಕರುಣೋ ನೃಪಃ
॥ ೧೪ ॥

ತಸ್ಯ ತ್ರಿಭುವನಾಧೀಶಾಃ ಫಲದಾಃ ಫಲಮಿಚ್ಛತಾಮ್ ।
ಆತ್ಮಾನಂ ದರ್ಶಯಾಞ್ಚಕ್ರುರ್ಮಾಯಾ ವಿಷ್ಣುವಿನಿರ್ಮಿತಾಃ
॥ ೧೫ ॥

ಸ ವೈ ತೇಭ್ಯೋ ನಮಸ್ಕೃತ್ಯ ನಿಃಸಂಗೋ ವಿಗತಸ್ಪೃಹಃ ।
ವಾಸುದೇವೇ ಭಗವತಿ ಭಕ್ತ್ಯಾ ಚಕ್ರೇ ಮನಃ ಪರಮ್
॥ ೧೬ ॥

ಈಶ್ವರಾಲಂಬನಂ ಚಿತ್ತಂ ಕುರ್ವತೋಽನನ್ಯರಾಧಸಃ ।
ಮಾಯಾ ಗುಣಮಯೀ ರಾಜನ್ ಸ್ವಪ್ನವತ್ಪ್ರತ್ಯಲೀಯತ
॥ ೧೭ ॥

ತತ್ಪ್ರಸಂಗಾನುಭಾವೇನ ರಂತಿದೇವಾನುವರ್ತಿನಃ ।
ಅಭವನ್ಯೋಗಿನಃ ಸರ್ವೇ ನಾರಾಯಣಪರಾಯಣಾಃ
॥ ೧೮ ॥

ಗರ್ಗಾಚ್ಛಿನಿಸ್ತತೋ ಗಾರ್ಗ್ಯಃ ಕ್ಷತ್ರಾದ್ಬ್ರಹ್ಮ ಹ್ಯವರ್ತತ ।
ದುರಿತಕ್ಷಯೋ ಮಹಾವೀರ್ಯಾತ್ತಸ್ಯ ತ್ರಯ್ಯಾರುಣಿಃ ಕವಿಃ
॥ ೧೯ ॥

ಪುಷ್ಕರಾರುಣಿರಿತ್ಯತ್ರ ಯೇ ಬ್ರಾಹ್ಮಣಗತಿಂ ಗತಾಃ ।
ಬೃಹತ್ಕ್ಷತ್ರಸ್ಯ ಪುತ್ರೋಽಭೂದ್ಧಸ್ತೀ ಯದ್ಧಸ್ತಿನಾಪುರಮ್
॥ ೨೦ ॥

ಅಜಮೀಢೋ ದ್ವಿಮೀಢಶ್ಚ ಪುರುಮೀಢಶ್ಚ ಹಸ್ತಿನಃ ।
ಅಜಮೀಢಸ್ಯ ವಂಶ್ಯಾಃ ಸ್ಯುಃ ಪ್ರಿಯಮೇಧಾದಯೋ ದ್ವಿಜಾಃ
॥ ೨೧ ॥

ಅಜಮೀಢಾದ್ಬೃಹದಿಷುಸ್ತಸ್ಯ ಪುತ್ರೋ ಬೃಹದ್ಧನುಃ ।
ಬೃಹತ್ಕಾಯಸ್ತತಸ್ತಸ್ಯ ಪುತ್ರ ಆಸೀಜ್ಜಯದ್ರಥಃ
॥ ೨೨ ॥

ತತ್ಸುತೋ ವಿಶದಸ್ತಸ್ಯ ಸೇನಜಿತ್ಸಮಜಾಯತ ।
ರುಚಿರಾಶ್ವೋ ದೃಢಹನುಃ ಕಾಶ್ಯೋ ವತ್ಸಶ್ಚ ತತ್ಸುತಾಃ
॥ ೨೩ ॥

ರುಚಿರಾಶ್ವಸುತಃ ಪಾರಃ ಪೃಥುಸೇನಸ್ತದಾತ್ಮಜಃ ।
ಪಾರಸ್ಯ ತನಯೋ ನೀಪಸ್ತಸ್ಯ ಪುತ್ರಶತಂ ತ್ವಭೂತ್
॥ ೨೪ ॥

ಹೀಗೆ ಹೇಳಿ ರಂತಿದೇವನು ಆ ಉಳಿದಿರುವ ನೀರನ್ನೂ ಕೂಡ ಆ ಚಾಂಡಾಲನಿಗೆ ಕೊಟ್ಟನು. ನೀರಿಲ್ಲದೆ ಅವನು ಸ್ವತಃ ಸಾಯುತ್ತಿದ್ದರೂ ಸ್ವಾಭಾವಿಕವಾಗಿಯೇ ಅವನ ಹೃದಯವು ಕರುಣಾಪೂರ್ಣವಾಗಿತ್ತು. ಅದರಿಂದ ಜೀವನಾಧಾರವಾದ ನೀರನ್ನೂ ಇಟ್ಟುಕೊಳ್ಳಲು ಕೂಡ ಅವನಿಗೆ ಸಾಧ್ಯವಾಗಲಿಲ್ಲ. ಅವನ ಧೈರ್ಯಕ್ಕೆ ಏನಾದರೂ ಸೀಮೆ ಇದೆಯೇ? ॥ ೧೪ ॥ ಪರೀಕ್ಷಿತನೇ! ಈ ಅತಿಥಿಗಳು ವಾಸ್ತವವಾಗಿ ಭಗವಂತನಿಂದ ರಚಿತವಾದ ಮಾಯೆಯ ವಿಭಿನ್ನರೂಪಗಳಾಗಿದ್ದವು. ಪರೀಕ್ಷೆಯು ಪೂರ್ಣಗೊಂಡಾಗ ತನ್ನ ಭಕ್ತರ ಅಭಿಲಾಷೆಯನ್ನು ಪೂರ್ಣಗೊಳಿಸುವಂತಹ ತ್ರಿಭುವನಕ್ಕೆ ಒಡೆಯರಾದ ಬ್ರಹ್ಮಾ, ವಿಷ್ಣು, ಮಹೇಶ್ವರ ಮೂವರು ಅವನೆದುರಿಗೆ ಪ್ರತ್ಯಕ್ಷರಾದರು. ॥ ೧೫ ॥ ರಂತಿದೇವನು ಅವರ ಚರಣಗಳಲ್ಲಿ ನಮಸ್ಕರಿಸಿದನು. ಭಗವಂತನ ಕೃಪೆಯಿಂದ ಅವನು ನಿಸ್ಸಂಗನೂ, (ನಿರಾಸಕ್ತನೂ) ನಿಸ್ಪೃಹನೂ ಆಗಿದ್ದನು. ಪರಮ ಪ್ರೇಮಮಯ ಭಕ್ತಿಭಾವದಿಂದ ತನ್ನ ಮನಸ್ಸನ್ನು ಭಗವಾನ್ ವಾಸುದೇವನಲ್ಲಿ ತನ್ಮಯಗೊಳಿಸಿ, ಅವರಲ್ಲಿ ಏನನ್ನೂ ಬೇಡಲಿಲ್ಲ. ॥ ೧೬ ॥ ಪರೀಕ್ಷಿತನೇ! ಅವನಿಗೆ ಭಗವಂತನಲ್ಲದೆ ಯಾವ ವಸ್ತುವಿನ ಇಚ್ಛೆಯೂ ಇರಲಿಲ್ಲ. ಅವನು ತನ್ನ ಮನಸ್ಸನ್ನು ಪೂರ್ಣವಾಗಿ ಭಗವಂತನಲ್ಲಿ ತೊಡಗಿಸಿದನು. ಅದರಿಂದ ಎಚ್ಚರವಾದಾಗ ಸ್ವಪ್ನ ದೃಶ್ಯವು ಇಲ್ಲವಾಗುವಂತೆ ತ್ರಿಗುಣಮಯವಾದ ಮಾಯೆಯು ನಾಶವಾಗಿಹೋಯಿತು. ॥ ೧೭ ॥ ರಂತಿದೇವನ ಅನುಯಾಯಿಗಳೂ ಕೂಡ ಅವನ ಸಂಗದಿಂದ ಯೋಗಿಗಳಾಗಿ, ಎಲ್ಲರೂ ನಾರಾಯಣ ಪರಾಯಣರಾದರು. ॥ ೧೮ ॥

ಮನ್ಯುಪುತ್ರನಾದ ಗರ್ಗನಿಂದ ಶಿನಿ ಮತ್ತು ಶಿನಿಯಿಂದ ಗಾರ್ಗ್ಯನ ಜನ್ಮವಾಯಿತು. ಗಾರ್ಗ್ಯನು ಕ್ಷತ್ರಿಯನಾಗಿದ್ದರೂ ಅವನಿಂದ ತ್ರಯ್ಯಾರುಣಿ, ಕವಿ, ಪುಷ್ಕರಾರುಣಿ ಎಂಬ ಮೂವರು ಪುತ್ರರಾದರು. ಈ ಮೂವರೂ ಬ್ರಾಹ್ಮಣರಾದರು. ಬೃಹತ್‌ಕ್ಷತ್ರನ ಪುತ್ರ ಹಸ್ತಿ ಎಂಬುವನು. ಅವನೇ ಹಸ್ತಿನಾಪುರವನ್ನು ನೆಲೆಗೊಳಿಸಿದನು. ॥ ೧೯-೨೦ ॥ ಹಸ್ತಿಗೆ-ಅಜಮೀಢ, ದ್ವಿಮೀಢ ಮತ್ತು ಪುರುಮೀಢರೆಂಬ ಮೂವರು ಪುತ್ರರಿದ್ದರು. ಅಜಮೀಢನ ಪುತ್ರರಲ್ಲಿ ಪ್ರಿಯಮೇಧ ಮೊದಲಾದವರು ಬ್ರಾಹ್ಮಣರಾದರು. ॥ ೨೧ ॥ ಇದೇ ಅಜಮೀಢನ ಓರ್ವ ಪುತ್ರನ ಹೆಸರು ಬೃಹದಿಷು ಎಂದಿತ್ತು. ಬೃಹದಿಷುವಿಗೆ ಬೃಹದ್ಧನು ಪುತ್ರನಾದನು. ಬೃಹದ್ಧನುವಿಗೆ ಬೃಹತ್ಕಾಯ, ಬೃಹತ್ಕಾಯನಿಗೆ ಜಯದ್ರಥನು ಹುಟ್ಟಿದನು. ॥ ೨೨ ॥ ಜಯದ್ರಥನ ಪುತ್ರ ವಿಶದನಾದನು. ವಿಶದನಿಗೆ ಸೇನಜಿತ್ ಹುಟ್ಟಿದನು. ಸೇನಜಿತ್ತುವಿಗೆ ರುಚಿರಾಶ್ವ, ದೃಢಹನು, ಕಾಶ್ಯ ಮತ್ತು ವತ್ಸ ಎಂಬ ನಾಲ್ವರು ಪುತ್ರರಾದರು. ॥ ೨೩ ॥ ರುಚಿರಾಶ್ವನಿಗೆ ಪಾರನೆಂಬ ಪುತ್ರನಿದ್ದನು. ಪಾರನಿಗೆ ಪೃಥುಸೇನ ಜನಿಸಿದನು. ಪಾರನ ಇನ್ನೊಬ್ಬ ಪುತ್ರನ ಹೆಸರು ನೀಪ ಎಂದಿತ್ತು. ಅವನಿಗೆ ನೂರು ಮಕ್ಕಳಾದರು. ॥ ೨೪ ॥ ಇದೇ ನೀಪನು ಛಾಯಾ*ಶುಕನ ಕನ್ಯೆಯಾದ ಕೃತ್ವಿಯೊಂದಿಗೆ ವಿವಾಹನಾಗಿದ್ದನು. ಅವನಿಂದ ಬ್ರಹ್ಮದತ್ತನೆಂಬ ಪುತ್ರನು ಜನಿಸಿದನು. ಬ್ರಹ್ಮದತ್ತನು

* ಶುಕಮುನಿಯು ಯಾವಾಗಲೂ ಅಸಂಗನೇ ಆಗಿದ್ದನು. ಆದರೆ ಅವನು ವಿರಾಗಿಯಾಗಿ ವನಕ್ಕೆ ಹೋಗುವ ಸಮಯದಲ್ಲಿ ಓರ್ವ ಛಾಯಾ ಶುಕನನ್ನು ರಚಿಸಿ, ಬಿಟ್ಟುಹೋಗಿದ್ದನು. ಆ ಛಾಯಾ ಶುಕನೇ ಗೃಹಸ್ಥೋಚಿತವಾದ ವ್ಯವಹಾರಗಳನ್ನು ನಡೆಸಿದ್ದನು.